ಮನೆಮಂದಿಗೆಲ್ಲಾ ಮುದನೀಡುವ ಮಾಸಿಕ

# ತುಷಾರ

ಆಗಸ್ಟ್ ೧೯೯೭



ಬೆಲೆ ಆರು ರೂ.

ಚಂದ್ರಶೇಖರ ಆಜಾದರ ಅಂತಿಮ ಸಮರ

ಸ್ವಾತಂತ್ರ್ಯದ ಸವಿಫಲದ ನಿರೀಕ್ಷೆಯಲ್ಲಿ...



ಚಿತ್ರ: ದಿ. ಸುಕುಮಾರ ಸಾಯಬಣ್ಣವರ



# ಕಸ್ತೂರಿ

ಕನ್ನಡ ಡೈಜೆಸ್ಟ್

ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ಎ. ಜೋಶಿ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ

ಮುಖಪುಟ ಚಿತ್ರ
ಶಶಿಸಾಲಿ
ರೂಪದರ್ಶಿಗಳು
ಅನಿರುದ್ಧ ಹಾಗೂ ಗೌರಿ

'ಕಸ್ತೂರಿ' ಕಾರ್ಯಾಲಯ,
ಕೊಪ್ಪೀಕರ ರಸ್ತೆ,
ಹುಬ್ಬಳ್ಳಿ - ೫೮೦ ೦೨೦



## ಚಿಂತನ

ಸ್ವಾತಂತ್ರ್ಯದ ಸ್ವರ್ಣಜಯಂತಿಯ ಸಂದರ್ಭದಲ್ಲಿ ಈ ದೇಶದ ದುಃಸ್ಥಿತಿ, ಆತ್ಮಾವಲೋಕನದಂತಹ ವಿಷಯಗಳು ನಾಡಿನ ಎಲ್ಲ ಪತ್ರಿಕೆಗಳಲ್ಲೂ ಬರುತ್ತಿರುವುದರಿಂದ ಅವುಗಳನ್ನು ಕೈಬಿಟ್ಟು ಕೊಂಚ ಭಿನ್ನವಾದ ವಿಷಯಗಳನ್ನೇ ನಾನಿಲ್ಲಿ ಪ್ರಸ್ತಾಪಿಸುತ್ತೇನೆ.

ಮಹಾತ್ಮಾ ಗಾಂಧಿಯವರ ನೇತೃತ್ವದಲ್ಲಿ ಕೋಟಿಗಟ್ಟಳೆ ಜನರು ಮನೆ ಮಾರು ತೊರೆದು, ನಾನಾ ಕಷ್ಟಗಳನ್ನು ಅನುಭವಿಸಿ, ಬ್ರಿಟಿಶರ ವಿರುದ್ಧ ಅಹಿಂಸಾತ್ಮಕವಾಗಿ ಹೋರಾಡಿ ಸ್ವಾತಂತ್ರ್ಯ ತಂದುಕೊಟ್ಟರೆಂಬುದು ಸರಿಯೆ. ಆದರೆ ಕ್ರಾಂತಿಕಾರಿಗಳು ಎಸಗಿದ ಹೋರಾಟವೂ ಕಡಿಮೆಯದೇನಲ್ಲ. ಅಂತಹ ಕ್ರಾಂತಿಕಾರಿಗಳಲ್ಲಿ ಅಗ್ರಣಿಯಾದ ಚಂದ್ರಶೇಖರ ಆಜಾದರ ಆತ್ಮಬಲಿದಾನದ ಯಥಾವತ್ತಾದ ಚಿತ್ರಣ ಈ ಸಂಚಿಕೆಯಲ್ಲಿದೆ.

ಕ್ರಾಂತಿಕಾರಿಗಳೆಂದ ಕೂಡಲೆ ತಟ್ಟನೆ ನೆನಪಾಗುವ ಹೆಸರು ಮೇಡಂ ಕಾಮಾಳದು. ಭಾರತದಲ್ಲಿರಲು ಅಸಾಧ್ಯವಾದ ಪರಿಸ್ಥಿತಿಯುಂಟಾದಾಗ ಈ ಶತಮಾನದ ಪ್ರಾರಂಭದಲ್ಲಿ ಅನೇಕ ಕ್ರಾಂತಿಕಾರಿಗಳು ಜರ್ಮನಿಗೆ ಹೋಗಿ ಅಲ್ಲಿಂದಲೆ ಸ್ವಾತಂತ್ರ್ಯಸಮರವನ್ನು ಮುಂದುವರೆಸುವುದಾಗಿ ನಿರ್ಧರಿಸಿದರು. ಹೀಗೆ ಭಾರತದಿಂದ ಜರ್ಮನಿಗೆ ಹೋದ ಕ್ರಾಂತಿಕಾರಿಗಳಲ್ಲಿ ಮೇಡಂ ಕಾಮಾಳೂ ಒಬ್ಬಳು. ೧೯೦೭ರ ಅಗಸ್ಟ್ ೧೮ ರಂದು ಸ್ಟುಟ್‌ಗಾರ್ಟ್‌ನಲ್ಲಿ ಭಾರತದ ಕ್ರಾಂತಿಕಾರಿಗಳೆಲ್ಲ ಸೇರಿ ಅಧಿವೇಶನ ನಡೆಸಿದಾಗ ಮೇಡಂ ಕಾಮಾ ಸಂಪೂರ್ಣ ಸ್ವಾತಂತ್ರ್ಯದ ಗೊತ್ತುವಳಿಯನ್ನು ಮಂಡಿಸಿದ್ದಲ್ಲದೆ ರಾಷ್ಟ್ರಧ್ವಜಾರೋಹಣಕ್ಕೆ ಆಗ್ರಹಪಡಿಸಿದಳು. ಹೀಗೆ ಧ್ವಜವನ್ನು ಮೊದಲು ಹಾರಿಸಲು ಪ್ರೇರಣೆ ನೀಡಿದವಳು ನಮ್ಮ ದೇಶದ ಪಾರ್ಸಿ ಕ್ರಾಂತಿಕಾರಿಣಿಯೆಂಬುದು ಬಹುಶಃ ಇಂದಿನ ಜನಾಂಗದವರಿಗೆ ಗೊತ್ತಿರಲಿಕ್ಕಿಲ್ಲ.

ಈ ಕ್ರಾಂತಿಕಾರಿಗಳಿಗೆ ಹೆಚ್ಚಿನ ಪ್ರೇರಣೆ ದೊರೆತದ್ದು ೧೮೫೭ರ ಸ್ವಾತಂತ್ರ್ಯ ಸಂಗ್ರಾಮದಿಂದ. ಆಗ ನಡೆದ ಘಟನೆಗಳು- ಅದರಲ್ಲೂ ವಿಶೇಷವಾಗಿ ಮೀರತ್ ಹಾಗೂ ಕಾನಪುರಗಳಲ್ಲಿ ನಡೆದಂಥವು- ಮೈನವಿರೇಳಿಸುವಂತಿವೆ. ಅಂದಿನ ಘಟನೆಗಳನ್ನು ಕಣ್ಣಾರೆ ಕಂಡ, ಕ್ರಾಂತಿಯ ದಳ್ಳುರಿಯ ತಾಪವನ್ನು ಅನುಭವಿಸಿದ ಬ್ರಿಟಿಶ್ ಅಧಿಕಾರಿಗಳು ತಮ್ಮ ಸ್ಮರಣೆಗಳನ್ನು ಬರೆದಿಟ್ಟಿದ್ದಾರೆ. ಅವು ೧೮೬೦ ರಿಂದ ೧೯೦೦ರ ಅವಧಿಯಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಪ್ರಕಟವಾದದ್ದೂ ಇದೆ. ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಲ್ಲಿಧೂಳು ತಿನ್ನುತ್ತ ಕುಳಿತ ಆ ಗ್ರಂಥಗಳನ್ನು ಯಾರಾದರೂ ಅನುವಾದಿಸಿ ಪ್ರಕಟಿಸಿದರೆ ಇಂದಿನವರಿಗೆ ೧೮೫೭ರ ಸಂಗ್ರಾಮ ಎಷ್ಟು ಭೀಕರವಾಗಿತ್ತೆನ್ನುವುದರ ಪರಿಚಯವಾದರೂ ಆದೀತು.

*ವ್ಯವಸ್ಥಾಪಕ ಸಂಪಾದಕ*




## ಕನಸು ನನಸಾಗಲಿ

'ಕಸ್ತೂರಿ'ಯ ಜುಲೈ ಸಂಚಿಕೆಯಲ್ಲಿ ಮೂಡಿಬಂದ ಲೇಖನಗಳೆಲ್ಲ ಅರ್ಥಪೂರ್ಣವಾಗಿವೆ. 'ಕಂಪ್ಯೂಟರ್ ಸಾಮ್ರಾಟ ಬಿಲ್ ಗೇಟ್ಸ್'ನ (ನಿವೇದಿತಾ ದೇಸಾಯಿ) ಸಾಧನೆ ಅಪೂರ್ವ. 'ಮನಸ್ಸಿದ್ದರೆ ಮಾರ್ಗ' ಎಂಬ ಮಾತಿಗೆ ಬಿಲ್ ಗೇಟ್ಸ್ ಸಾಧಿಸಿದ ಯಶಸ್ಸೇ ಸಾಕ್ಷಿ.

✉ **ದಾದಾಸಾಹೇಬ ವಾಕ್ಚಟಿ, ಗಳತಗಾ ಸಂತೇಬೆನ್ನೂರು ಮಂಜಪ್ಪ, ಸೊರಬ**

ಬಿಲ್ ಗೇಟ್ಸ್‌ನ ಕನಸು ನನಸಾಗಲಿ ಅದರಿಂದ ಈ ಪ್ರಪಂಚ ಇನ್ನಷ್ಟು ಕಿರಿದಾಗಿ ಮಾನವನ ಅರಿವಿನ ವಿಸ್ತಾರ ಹೆಚ್ಚುವಂತಾಗಲಿ.

✉ **-ಚನ್ನಬಸವ ಮಡಿವಾಳರ, ಸಿರವಾರ**

## ಗಲ್ಲಿಗೇರಿಸಿದ್ದು ಎಂದು?

'ಭಗತ್‌ಸಿಂಗರ ಸಾನ್ನಿಧ್ಯದಲ್ಲಿ' ('ಎಂ.ದೀಪಾ') ಲೇಖನದಲ್ಲಿ ತಿಳಿಸಿದಂತೆ ಭಗತ್‌ಸಿಂಗರನ್ನು ಗಲ್ಲಿಗೇರಿಸಿದ್ದು ೧೯೩೧ ರ ಮಾರ್ಚ ೩೧ ರಂದು ಅಲ್ಲ, ಮಾರ್ಚ ೨೩ ರಂದು.

✉ **ಜಿ.ಕೆ ಭಟ್, ನೀರ್ಕೊಟ್ಟು-ಚಾರ (ದ.ಕ)**

(ಹೌದು ನೀವು ಹೇಳುವುದು ಸರಿ. ಕಣ್ತಪ್ಪಿನಿಂದ ಹೀಗಾಗಿದ್ದು ವಿಷಾದಕರ)(ಸಂ.)

## ಎಂದಿಗೂ ಹಳೆಯದಾಗದು!

'ಕಸ್ತೂರಿ'ಯ ವೈಶಿಷ್ಟ್ಯವೇ ಅದು. ಸದಾ ಹೊಸತನದ ಹುಡುಕಾಟದಲ್ಲಿರುವ ಈ ಮಾಸಿಕ ಎಂದಿಗೂ ಹಳೆಯದಾಗದು! ಜುಲೈ ಸಂಚಿಕೆಯ ನೀತಿಕಥೆ 'ಗರ್ವಭಂಗ' ('ಸಿಸು' ಸಂಗಮೇಶ) ಅರ್ಥಗರ್ಭಿತವಾಗಿದ್ದರೆ, 'ಮಾಟಗಾತಿಯ ಶಾಪ' (ಅರುಣ) ಮೈನವಿರೇಳಿಸಿತು. 'ಐನ್‌ಸ್ಟೈನ್‌ರಿಗೆ ಅದೃಶ್ಯರಾಗುವ ಕಲೆ ಗೊತ್ತಿತ್ತೆ? (ಶ್ರೀಕಾಂತ ಮಳಗಿ) ವಿಸ್ಮಯಕರವೆನಿಸಿತು.

✉ **ಗಾಯತ್ರೀನಂದನ, ಗಳತಗಾ**

## ಕುತೂಹಲಕರ

ಪ್ರಪಂಚದ ಪ್ರಸ್ತುತ ವಿದ್ಯಮಾನಗಳಿಗಿಂತಲೂ ವಿಶಿಷ್ಟವಾದ ವಿಚಾರ ಲಹರಿಗಳು ಎರಡನೆಯ ಜಾಗತಿಕ ಮಹಾಯುದ್ಧದ ಇತಿಹಾಸದಾಳದಿಂದ ಉದ್ಭವವಾಗುತ್ತಿವೆ. ಜರ್ಮನ್ ಸರ್ವಾಧಿಕಾರಿ ಅಡಾಲ್ಫ್ ಹಿಟ್ಲರ್ ೧೯೪೫ರಲ್ಲಿ ಯುದ್ಧ ಸೋತು ಆತ್ಮಹತ್ಯೆ ಮಾಡಿಕೊಂಡಿಲ್ಲ ಎಂಬ ವರದಿ ಎಲ್ಲೆಡೆ ವಿವಾದದ ಅಲೆ ಎಬ್ಬಿಸಿತು. ಅದರಂತೆ ಅಮೆರಿಕದ ನೌಕೆ ಎಲ್‌ಬ್ರಿಜ್ ೧೭೩ ಅದೃಶ್ಯವಾದ ವಿಚಾರ ಎಲ್ಲೆಡೆಯ ವಿಜ್ಞಾನಿಗಳನ್ನು ಕೆಣಕಬಹುದು. ಐನ್‌ಸ್ಟೈನ್‌ರ ಈ ಅದೃಶ್ಯಕಲೆಯ ತಂತ್ರಜ್ಞಾನ ಅತೀಂದ್ರೀಯ ಶಕ್ತಿಗೆ ಉದಾಹರಣೆಯಾಗಬಹುದು.

✉ **ವಿಷ್ಣುಗುಪ್ತಾ ಪುಣಜ**

## 'ಅಮ್ಮನಿಲ್ಲದ ಮನೆ'

ಜುಲೈ ಸಂಚಿಕೆಯ ಎರಡನೆಯ ರಕ್ಷಾಪುಟದ ಚಿತ್ರಕವನ 'ಅಮ್ಮನಿಲ್ಲದ ಮನೆ' (ರಾಜೇಶ) ಮನಸೆಳೆಯಿತು. ನಿಜಕ್ಕೂ ಗೃಹಿಣಿ ಮನೆಯ ದೀಪವಿದ್ದಂತೆ. ಅಮ್ಮನಿಲ್ಲದ ಮನೆ

ಹಾಳು ಹಾಳು.

ಡಾ. ಜಿ.ಬಿ.ಸತ್ತೂರರ 'ಹೃದಯ ರಕ್ಷಣೆ' ಲೇಖನ ಮಾರ್ಗದರ್ಶಕವಾಗಿತ್ತು.

✉ ಶಂಕರಗೌಡ ಆರ್. ಪಾಟೀಲ,
ರೋಣ

## ಪ್ಲಸ್ ಪಾಯಿಂಟ್. ಆದರೆ....?

ಜುಲೈ ಸಂಚಿಕೆ ಸರ್ವಾಂಗ ಸುಂದರಿ 'ಮಾಟಗಾತಿಯ ಶಾಪ' (ಅರುಣ) ಈ ಸಲದ ಪ್ಲಸ್ ಪಾಯಿಂಟ್. ಆದರೆ ಲೇಖನದ ಕೊನೆಯ ವಾಕ್ಯದಲ್ಲಿ 'ಆಲೋಕ' ಎಂದಿರುವದು 'ಪ್ರವೀರ' ಆಗಬೇಕಲ್ಲವೆ? ಈ ಸಂಚಿಕೆಯ ೫೧ ನೆಯ ಪುಟದಲ್ಲಿ ಪ್ರಕಟವಾದ 'ಮುಗ್ಧೆ' (ಟಿ.ವಿ. ಮಾಗಳದ) ಅನುವಾದಿತ ಕಥೆ ಅದೇ ಲೇಖಕರ ಹೆಸರಿನಲ್ಲಿ ೨೨-೯-೯೭ ರ 'ಸುಧಾ' ವಾರಪತ್ರಿಕೆಯ ೫೬ನೆಯ ಪುಟದಲ್ಲಿ ಪ್ರಕಟವಾಗಿದೆ. ಜಿ.ಟಿ. ನಾರಾಯಣ ರಾವ್ ಅವರ 'ಪಾಲ್ ಏರ್ಡಿಷ್' ಲೇಖನದ ತಲೆಬರಹದಲ್ಲಿ 'ಗಣಿತವನ್ನೇ ಬದುಕಿದವರು' ಎಂದಿದೆ. ಇದು ತಪ್ಪಲ್ಲವೆ?

✉ -'ವರಾಹ', ಚಿದಾನಂದ
ಸಾಂಗೋಲಿ, ಚಡಚಣ
ಅನಿಲ ಕುಲಕರ್ಣಿ, ಚಿಕ್ಕೇರಿ

(ನಿಮ್ಮ ಆಕ್ಷೇಪ ಸರಿ. ಎರಡನೆಯ ಪ್ರಶ್ನೆ- ಲೇಖಕರು ಒಂದೇ ಕಥೆಯನ್ನು ಬೇರೆ ಬೇರೆ ಪತ್ರಿಕೆಗಳಿಗೆ ಕಳಿಸುವುದರಿಂದ ಆಗುವ ಅವಾಂತರವಿದು. ಮೂರನೆಯ ಪ್ರಶ್ನೆ- ಗಣಿತವೇ ಅವರ ಜೀವನವಾಗಿತ್ತು ಎಂಬ ಅರ್ಥದಲ್ಲಿ ಕೊಡಲಾಗಿದೆ. ಸಂ.)

## ಎಷ್ಟೊಂದು ಕಠಿಣ!

'ಮುಗ್ಧೆ' (ಅನು: ಟಿ.ವಿ. ಮಾಗಳದ) ಕಥೆ ತುಂಬಾ ಹೃದಯಸ್ಪರ್ಶಿಯಾಗಿತ್ತು. ಕಚ್ಚುವ ಹಲ್ಲಿಲ್ಲದೆ ಎಲ್ಲದಕ್ಕೂ ತಲೆದೂಗುವ 'ಯೂಲಿಯಾ ವ್ಯಾಸಿಲಿಯೆ'ತಹ ಮುಗ್ಧರಿಗೆ ಬದುಕು ನಿಜಕ್ಕೂ ಕಠಿಣ.

✉ ನೆಗಪಾಡಿ ರಾಜಶೇಖರ ಪಾಟೀಲ
ಬಿ.ಎಂ. ನಾಗಭೂಷಣ
ಭೀಮಸಮುದ್ರ

## ಗುರುತಿಸಿದ್ದೀರಿ!

ಜುಲೈ ಸಂಚಿಕೆಯ ಪುಸ್ತಕ ವಿಭಾಗದಲ್ಲಿ 'ಪಾದಯಾತ್ರಿಕ ಕಂಡ ಭಾರತ' (ಕೆ.ಸಿ. ಲಕ್ಷ್ಮೀನರಸಿಂಹಯ್ಯ) ಓದಿ ಸಂತಸವಾಯಿತು. ನಿವೃತ್ತರಾದ ಉಪಾಧ್ಯಾಯರೊಬ್ಬರು ಕಾಲ್ನಡಿಗೆಯಲ್ಲಿ ಭಾರತ ಪ್ರವಾಸ ಮಾಡಿ, ತಾವು ಕಂಡುಂಡ ಸತ್ಯಗಳನ್ನು ಬರೆದಿರುವುದು, ಅದನ್ನು ತಾವು ಪ್ರಕಟಿಸಿರುವುದು ಮೆಚ್ಚಬೇಕಾದದ್ದೆ. ನಾನು ಈ ಹಿಂದೆ ಅವರೊಂದಿಗೆ ಪತ್ರವ್ಯವಹಾರ ಮಾಡಿದ್ದೆ. ಅವರು ಬರೆದ ಪತ್ರದಲ್ಲಿ 'ಕೆ.ಸಿ. ಲಕ್ಷ್ಮೀನರಸಯ್ಯ' ಎಂದು ಅವರು ಹೆಸರಿದೆ. ಆದರೆ ತಾವು 'ಕೆ.ಸಿ. ಲಕ್ಷ್ಮೀನರಸಿಂಹಯ್ಯ' ಎಂದು ಮಾಡಿದ್ದೀರಿ. ಹೀಗೇಕೆ?

✉ ಗೌ.ರು. ಓಂಕಾರಯ್ಯ
ಗೌರಾಪುರ

(ಅವರ ಲೇಖನದಲ್ಲಿಯೇ ಬಂದಿರುವಂತೆ ಅವರ ಹೆಸರು 'ಕೆ.ಸಿ. ಲಕ್ಷ್ಮೀನರಸಿಂಹಯ್ಯ'. ನಾವು ಹಾಗೆಯೇ ಪ್ರಕಟಿಸಿದ್ದೇವೆ. ನಮಗೆ ಅವರು ಬರೆದ ಪತ್ರದಲ್ಲಿಯೂ ನೀವು ತಿಳಿಸಿದಂತೆ ಅವರ ಹೆಸರು ಇರುವದೂ ನಿಜ.)

** ** **

'ಪಾದಯಾತ್ರಿಕ ಕಂಡ ಭಾರತ'ದ ಲೇಖಕರ ವಿಳಾಸ ಕೋರಿ ಹಲವಾರು ಓದುಗರು ಪತ್ರ ಬರೆದಿದ್ದಾರೆ. ಅವರ ವಿಳಾಸ ಹೀಗಿದೆ.

ಶ್ರೀ ಕೆ.ಸಿ. ಲಕ್ಷ್ಮೀನರಸಯ್ಯ (ಅಖಿಲ

(ಆರನೇ ಪುಟಕ್ಕೆ)



ಪುಸ್ತಕ ವಿಭಾಗ



ಭಾಗ - ೨




• ಕೆ.ಸಿ. ಲಕ್ಷ್ಮೀನರಸಿಂಹಯ್ಯ

ಆರೋಗ್ಯದಂಗಳ

೧೪೫

## ಮೂಲವ್ಯಾಧಿಗೆ ಇಲ್ಲಿದೆ ಉಪಚಾರ

● ಡಾ. ಹೆಚ್.ವಿ. ಮೂರ್ತಿ

# ಬೆಳ್ಳಿಕಿರಣ

ದಾಸದ ಅರಮನೆ ಮನೆಗಿಂತ ಸ್ವಾತಂತ್ರ್ಯದ ಸೆರೆಮನೆ ಲೇಸು.

★ ಸುಭಾಷಚಂದ್ರ ಬೋಸ್

ದೇಶಭಕ್ತಿ ಮೋಕ್ಷ ಮಾರ್ಗದಲ್ಲಿ ಒಂದು ಮೆಟ್ಟಿಲು.

★ ಮಹಾತ್ಮಾ ಗಾಂಧೀಜಿ

ಪರಾಧೀನತೆಗಿಂತ ಮರಣವೇ ಲೇಸು

★ ಮಹಾತ್ಮಾ ಗಾಂಧೀಜಿ

ಹಸಿವು, ಅನ್ಯಾಯ, ಅಸಮಾನತೆಗಳು ನಾಶವಾದ ಹೊರತು ನಿಜವಾದ ಪ್ರಜಾಪ್ರಭುತ್ವ ಬರುವುದಿಲ್ಲ.

★ ಜಯಪ್ರಕಾಶ ನಾರಾಯಣ

ಪ್ರಜಾಪ್ರಭುತ್ವ ಬರಿಯ ಬಲವಲ್ಲ; ಬರಿಯ ಬಹುಮತವೂ ಅಲ್ಲ; ಹಕ್ಕುಗಳಿಗಿಂತಲೂ ಹೆಚ್ಚಾಗಿ ಜವಾಬ್ದಾರಿಯನ್ನು ಬಯಸುವ ಬಲ್ಲಾಳುಗಳ ಬಾಳಿಕೆಯ ಆಳಿಕೆ.

★ ಡಿ.ವಿ.ಜಿ.

ನಾಯಕನ ಮಾತು ಜನಗಳಿಗೆ ತಿಳಿಯದೆ, ಜನರ ಮಾತು ನಾಯಕನಿಗೆ ತಿಳಿಯದೆ, ನಡೆಯುತ್ತಿರುವ ಪ್ರಜಾಪ್ರಭುತ್ವ, ಪ್ರಜಾಪ್ರಭುತ್ವ ಅಲ್ಲ; ಪ್ರಜಾಪ್ರಭುತ್ವದ ಹೆಣ.

★ ಮಾಸ್ತಿ

ಒಳ್ಳೆಯ ಪ್ರಜೆಗೆ ದೇಶದಲ್ಲಿ ಸುವ್ಯವಸ್ಥೆ ಇರುವಾಗ ಬಡವನಾಗಿರುವುದು ನಾಚಿಕೆ; ಅವ್ಯವಸ್ಥೆ ಇದ್ದಾಗ ಹಣವಂತನಾಗಿರುವುದು ಲಜ್ಜಾಸ್ಪದ.

★ ಕನ್‌ಫ್ಯೂಷಿಯಸ್

ರಾಜತ್ವ ಬಡತನದಿಂದ ಹಾಳಾದರೆ ಪ್ರಜಾರಾಜ್ಯಗಳು ವೈಭವದಿಂದ ಹಾಳಾಗುತ್ತವೆ.

★ ಮಾಂಟೆಸ್ಕ್ಯೂ

ದಾನದಿಂದ ಪ್ರಾಪಂಚಿಕ ವ್ಯವಹಾರ ಸುಲಭವಾಗುತ್ತದೆ. ತ್ಯಾಗದಿಂದ ಸಮಾಜದ ಏಳಿಗೆಯಾಗುತ್ತದೆ. ತ್ಯಾಗ ದಾನಕ್ಕಿಂತಲೂ ಕಷ್ಟಕರ.

★ ಕಾಕಾ ಕಾಲೇಲ್ಕರ್

ಹತ್ತು ಕುಚೇಷ್ಟೆಗಳಿಂದ ನೂರು ಶತ್ರುಗಳು ಹುಟ್ಟಿಕೊಳ್ಳುತ್ತಾರೆನ್ನುವುದನ್ನು ತಿಳಿದುಕೊಳ್ಳುವುದಕ್ಕೆ ಬಹಳ ಗಣಿತದ ಜ್ಞಾನವೇನೂ ಬೇಕಾಗುವುದಿಲ್ಲ.

★ ಸ್ಟರ್ನ್ ಲಾರೆನ್ಸ್

(ಮೂರನೆ ಪುಟದಿಂದ)
ಭಾರತ ಪಾದಯಾತ್ರಿಕ), ನಿವೃತ್ತ ಅಧ್ಯಾಪಕರು, ಅಂಚೆ-ಕೋಶಾಲ ತಾಲೂಕು-ಕೊರಟಗೆರೆ, ಜಿಲ್ಲೆ-ತುಮಕೂರು.

**ಮನಸೆಳೆದ 'ಹೃದಯ'!**

'ಕಸ್ತೂರಿ'ಯ ಮುಖಪುಟದ 'ಹೃದಯ' ಮನಸೆಳೆಯಿತು. ಚಿತ್ರ ನೋಡುತ್ತಿದ್ದಂತೆ ಕೊಂಡುಕೊಂಡೆ. 'ಹೃದಯ ರಕ್ಷಣೆ' (ಡಾ.ಜಿ.ಬಿ. ಸತ್ತೂರ) ಲೇಖನ ಕಣ್ಣು ತೆರೆಸಿತು. ಈ ಲೇಖನ ಮಾಹಿತಿ ಪೂರ್ಣವಾಗಿತ್ತು. ಹೃದಯ ರಕ್ಷಣೆಯ ಅಗತ್ಯವನ್ನು ಚೆನ್ನಾಗಿ ಪ್ರತಿಪಾದಿಸಿದ ಲೇಖಕ ವೈದ್ಯರು ಅವಶ್ಯಕ ಮಾಹಿತಿಯನ್ನೆಲ್ಲ ಒಂದೆಡೆಯಲ್ಲಿಯೇ ಕೊಟ್ಟಿದ್ದು ಹೆಚ್ಚು ಉಪಯುಕ್ತಕರ.

**☒ ಹುಸೇನಬಾಷಾ, ಮೋರಟಗಿ**
**ಪ್ರಕಾಶ ಅ. ಪೂರ್ವೆ, ಗಳತಗಾ**

** ** **

'ಹೃದಯ ರಕ್ಷಣೆ' ಯಂತಹ ಅತ್ಯುಪಯುಕ್ತ ಲೇಖನ. ಪ್ರಕಟಿಸಿದ ತಮಗೆ ಧನ್ಯವಾದಗಳು. ಇಂತಹ ಮಾಹಿತಿ ಪೂರ್ಣ, ಮಾರ್ಗದರ್ಶಕ ಲೇಖನಗಳಿಂದಲೇ 'ಕಸ್ತೂರಿ'ಸದಾ ಸಂಗ್ರಹಯೋಗ್ಯ ಪತ್ರಿಕೆಯಾಗಿದೆ.

**☒ ಎಲ್.ವಿ. ಕುಮಾರಸ್ವಾಮಿ**
**ಹಿರಿಯೂರು**
**ರೇಣುಕಾಲಾಲ್, ಲಾಲಸಹ ಆರ್.**
**ರೌಡಲಬಂಡಾ**
**ಬಸವರಾಜ ಕರಾಡೆ ವಿಜಾಪುರ**

ಸೂಕ್ತ ಮುನ್ನೆಚ್ಚರಿಕೆ ವಹಿಸಿದರೆ ಸಂಭವನೀಯ ಆಘಾತವನ್ನೂ ತಡೆಯುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಬಹುದೆಂದು ಸೂಚಿಸಿದ ಲೇಖಕ ಡಾ. ಜಿ.ಬಿ. ಸತ್ತೂರ ಅವರು ನಲವತ್ತು ವರ್ಷ ಮೀರಿದ ಜನರಿಗೆಲ್ಲ ಸೂಕ್ತ ಮಾರ್ಗದರ್ಶನ ನೀಡಿದ್ದಾರೆ. 'ಆರೋಗ್ಯವೇ ನೈಜ ಆಸ್ತಿ' ಎಂಬ ಸತ್ಯವನ್ನು ಜನತೆ ಎಷ್ಟು ಬೇಗ ಮನಗಾಣುತ್ತಾರೋ ಅಷ್ಟು ಬೇಗ ಸಾಮಾಜಿಕ ಸ್ವಾಸ್ಥ್ಯದ ರಕ್ಷಣೆಯಾಗುತ್ತದೆ. ಲೇಖಕರು ಎಲ್ಲೆಡೆಯ ಆಸ್ಪತ್ರೆಗಳ ವಿವರ, ವೆಚ್ಚದ ವಿವರ ನೀಡಿದ್ದು ಸ್ತುತ್ಯಾರ್ಹ.

**☒ ರೂಪಾಮರಿಗೇರಿ ಬೆಳಗಾವಿ**
**ಬಸನಗೌಡ ಪಾಟೀಲ ರಾಯಚೂರು**
**ಎಸ್. ಮಂಜುನಾಥ, ರಾಣೆಬೆನ್ನೂರ,**
**ಸೈಫುದ್ದೀನ್ ಖಾದ್ರಿ, ಕಲಬುರ್ಗಿ**
**ಟಿ.ಟಿ. ಸುರೇಶ್, ಬೆಂಗಳೂರು**

## ಹತ್ತಲ್ಲ ಹನ್ನೊಂದು

ಜೂನ್ ಸಂಚಿಕೆಯ 'ಪುಸ್ತಕ ವಿಭಾಗ'ದಲ್ಲಿ ಪ್ರಕಟವಾದ 'ಇತಿಹಾಸ ಕಲಿಸುವ ಪಾಠ' ಮೊದಲಿಗೆ ನೀಡಿರುವ ವಿವರದಲ್ಲಿ "ಡ್ಯೂರಾಂಟ್ ತನ್ನ ಪತ್ನಿ ಏರಿಯಲ್ ಡ್ಯೂರಾಂಟ್‌ಳೊಂದಿಗೆ ಸೇರಿ, ಬರೆದ ಗ್ರಂಥ.ಸ್ಟೋರಿ ಆಫ್ ಸಿವಿಲೈಜೇಶನ್" ಈ ಹತ್ತು ಸಂಪುಟಗಳಲ್ಲಿ ಪ್ರಕಟವಾದ ಈ ಗ್ರಂಥ....." ಎಂದು ಇದೆ. ಆದರೆ ಅವರು ಹನ್ನೊಂದು ಸಂಪುಟಗಳಲ್ಲಿ 'ಸ್ಟೋರಿ ಆಫ್ ಸಿವಿಲೈಜೇಶನ್' ನೀಡಿದ್ದಾರೆ. ಹನ್ನೊಂದನೇ ಸಂಪುಟದ ಹೆಸರು 'ಧಿ ಏಜ್ ಆಫ್ ನೆಪೋಲಿಯನ್'. ಲೆಸನ್ಸ್ ಆಫ್ ಹಿಸ್ಟರಿ'ಯ ಸಂಗ್ರಹಾನುವಾದ ನೀಡಿರುವ ಆರ್.ವಿ. ಕಟ್ಟೀಮನಿ, ತಡಕಲ್ ಅವರಿಗೆ ವಂದನೆಗಳು. ೧೯೭೭ರಲ್ಲಿ ಕೆ.ಎಸ್. ಭಗವಾನ್ ಅವರು 'ಇತಿಹಾಸದ ಪಾಠಗಳು' ಎಂದು ಇದರ ಪೂರ್ಣಾನುವಾದವನ್ನು ಮಾಡಿದ್ದಾರೆ. ನಮ್ಮ ದೇಶದ ಇಂದಿನ ಪರಿಸ್ಥಿತಿಯಲ್ಲಿ ಪ್ರತಿಯೊಬ್ಬ ಭಾರತೀಯನೂ ಓದಬೇಕಾದ ಕೃತಿ 'ಲೇಸನ್ಸ್ ಆಫ್ ಹಿಸ್ಟರಿ'ಆಗಿದೆ.

**★ ಜೆ. ಕೃಷ್ಣಪ್ಪ ಮೈಸೂರು**

ಕಸ್ತೂರಿ

ವರ್ಷ : ೪೧ ಅಗಸ್ಟ್ ೧೯೯೭ ಸಂಚಿಕೆ : ೧೨

# ಅಹಂಕಾರದ ದಾನ

ರಾಜ್ಯವೊಂದರ ರಾಜ ಬಹಳ ಧರ್ಮಾತ್ಮ, ಅವನು ಮಹಾದಾನಿ. ಆ ಬಗ್ಗೆ ಅವನಿಗೆ ಹೆಮ್ಮೆಯೂ ಇತ್ತು. ಒಂದು ದಿನ ಆ ರಾಜನ ಅರಮನೆಗೆ ಮಹಾತ್ಮರೊಬ್ಬರು ಬಂದರು. ರಾಜ ಅವರನ್ನು ಹೃತ್ಪೂರ್ವಕವಾಗಿ ಸ್ವಾಗತಿಸಿದ ನಂತರ ರಾಜ ವಿನೀತನಾಗಿ ಕೇಳಿದ:

"ಮಹಾತ್ಮರೆ, ಇಂದು ನೀವು ಕೇಳಿದ್ದನ್ನು ಕೊಡಬೇಕೆಂಬ ಇಚ್ಛೆ ನನಗಿದೆ. ದಯವಿಟ್ಟು ಏನಾದರೂ ಕೇಳಿ."

ಮುಗುಳ್ನಕ್ಕ ಮಹಾತ್ಮರು, "ರಾಜನ್, ನಿನಗೆ ಒಳ್ಳೆಯದೆನಿಸುವುದನ್ನು ಕೊಡು," ಎಂದರು.

"ರಾಜ್ಯದ ಸಮಸ್ತ ಭಾಂಡಾರ ತಮಗೆ ಅರ್ಪಿತ," ಎಂದು ರಾಜ ಧನ್ಯತಾಭಾವದಿಂದ.

"ಈ ಭಂಡಾರ ಪ್ರಜೆಗಳದು. ನೀನು ಅದರ ಸಂರಕ್ಷಕ ಮಾತ್ರ," ಮಹಾತ್ಮರು ಮರು ನುಡಿದರು. "ಈ ಅರಮನೆ, ಆನೆ ಕುದುರೆಗಳು ನನ್ನದಲ್ಲವೆ ? ಅವುಗಳನ್ನು ನಿಮಗೆ ಕೊಡುವೆ".

"ಮತ್ತೆ ಮರೆಯುತ್ತಿದ್ದೀ. ಇವೆಲ್ಲವೂ ಪ್ರಜೆಗಳದೇ. ಕೇವಲ ನಿನ್ನ ಅನುಕೂಲಕ್ಕಾಗಿ, ಆಡಳಿತ ಸಮರ್ಪಕವಾಗಿ ನಡೆಯಲೆಂದು ನಿನಗೆ ಕೊಡಲಾಗಿದೆ."

ಹತಾಶನಾದ ರಾಜ ಯೋಚಿಸಿ ಹೇಳಿದ, "ಸ್ವಾಮಿ, ಈ ಶರೀರ ಕೇವಲ ನನ್ನದು. ಅದನ್ನೇ ತಮಗೆ ದಾನವಾಗಿ ನೀಡುವೆ."

ನಸುನಕ್ಕ ಮಹಾತ್ಮರು, "ಶರೀರ ನಿನ್ನದೇ ಎಂಬುದು ನಿಜ. ಆದರೆ ಇದರ ಮೇಲೆ ನಿನ್ನ ಹೆಂಡತಿ ಮಕ್ಕಳ ಅಧಿಕಾರವಿದೆ. ನೀನೊಬ್ಬನೇ ಈ ಬಗ್ಗೆ ನಿರ್ಣಯ ತೆಗೆದುಕೊಳ್ಳಲಾಗದು," ಎಂದರು.

ರಾಜ ಈಗ ಗೊಂದಲದಲ್ಲಿ ಬಿದ್ದ. ಅವನ ಆತಂಕ ಕಂಡು ಕನಿಕರಪಟ್ಟ ಮಹಾತ್ಮರು, "ರಾಜನ್, ನಿನ್ನಲ್ಲಿರುವ ಅಹಂಕಾರ ಮಾತ್ರ ನಿನ್ನದು. ಬೇಕಿದ್ದರೆ ಅದನ್ನು ದಾನ ಮಾಡು," ಎಂದಾಗ ರಾಜನಿಗೆ ತನ್ನ ತಪ್ಪಿನ ಅರಿವಾಯಿತು. ಮತ್ತೆಂದೂ ಆತನಲ್ಲಿ ಅಹಂಕಾರ ಇಣುಕಲಿಲ್ಲ.

• ಟೀಕಲ್ ಗೋಪಾಲಕೃಷ್ಣ

# ಅಂಗಾರಕನಿಂದ ಬಂದ ಅವಧೂತ!

✳ ಬಿಂಡಿಗನವಿಲೆ ಭಗವಾನ್

ಅಗಾಧವೂ ಅನಂತವೂ ಆದ ನಭೋಮಂಡಲದ ಗ್ರಹ ತಾರೆಗಳನ್ನು ದಿಟ್ಟಿಸಿದಾಗಲೆಲ್ಲ ಅದೇ ಪ್ರಶ್ನೆ- ಭೂಮಿಯಂತೆ ಆ ಲೋಕಗಳಲ್ಲೂ ಜೀವಿಗಳಿದ್ದಾರೆಯೆ? ನಮಗೆ ತಿಳಿದಿರುವಂತೆ ನವಗ್ರಹಗಳು (ಬುಧ, ಶುಕ್ರ, ಭೂಮಿ, ಮಂಗಳ, ಗುರು, ಶನಿ, ಯುರೇನಸ್, ನೆಪ್ಚೂನ್, ಪ್ಲೂಟೋ) ಹಾಗೂ ಧೂಮಕೇತು, ಉಲ್ಕೆ, ಕ್ಷುದ್ರಗ್ರಹಗಳೆಂಬ ಕಿರಿಯ ಆಕಾಶ ಕಾಯಗಳು, ಸೂರ್ಯನನ್ನು ವಿವಿಧ ಪಥಗಳಲ್ಲಿ ಪ್ರದಕ್ಷಿಸುವ ವ್ಯವಸ್ಥೆಯ ಸೌರವ್ಯೂಹ ಕ್ಷೀರಪಥ ಎಂದು ಕರೆಯಲಾಗುವ ನಕ್ಷತ್ರರಾಶಿಯ ಒಂದು ಘಟಕಮಾತ್ರ. ಕ್ಷೀರಪಥದಲ್ಲಿ ಅಗಣಿತ ಸಂಖ್ಯೆಯ ತಾರೆಗಳುಂಟೆನ್ನುವುದು ಬೇರೆ ಮಾತು. ಅಷ್ಟೇಕೆ, ಬ್ರಹ್ಮಾಂಡದಲ್ಲಿ ಲೆಕ್ಕಕ್ಕೆ ನಿಲುಕದಷ್ಟು ನಕ್ಷತ್ರರಾಶಿಗಳೇ ಹರಡಿ ಹೋಗಿವೆ. ಕ್ಷೀರಪಥದ ಒಂದು ತುದಿಯಿಂದ ಇನ್ನೊಂದು ತುದಿಗೆ ಪಯಣಿಸಲು ಬೆಳಕಿನ ವೇಗದಲ್ಲಿ (ಸೆಕೆಂಡಿಗೆ ೩೦೦,೦೦೦ ಕಿಲೋ ಮೀಟರ್) ಧಾವಿಸಿದರೂ ಲಕ್ಷ



**ಮಂಗಳನ ಅಂಗಳದಲ್ಲಿ**

**೧೯೭೬ರ ವೈಕಿಂಗ್ ಉತ್ತಾರಕ (Lander)ದಿಂದ ತೆಗೆದ ಚಿತ್ರ. ಸುತ್ತಲೂ ನೇರಳೆ ಬಣ್ಣದ ಆಕಾಶ. ಮಂಗಳನ ಮೇಲ್ಭಾಗದಲ್ಲಿ ಕೆಮ್ಮಣ್ಣು ಹಾಗೂ ಶಿಲೆಗಳಿವೆ.**

ವರ್ಷಗಳು ಬೇಕು. ಸೌರವ್ಯೂಹದಾಚೆಗೆ ಕ್ಷೀರಪಥಕ್ಕೆ ಸೇರಿದ ನಮಗೆ ಅತಿ ಹತ್ತಿರದ ತಾರೆಯಾದ ಆಲ್ಫಾ ಸೆಂಟಾರಿಯೇ ನಾಲ್ಕೂವರೆ ಜ್ಯೋತಿವರ್ಷಗಳ (ಒಂದು ಜ್ಯೋತಿ ವರ್ಷ ಎಂದರೆ ಬೆಳಕು ಒಂದು ವರ್ಷದಲ್ಲಿ ಕ್ರಮಿಸುವ ದೂರ)ಅಂತರದಲ್ಲಿದೆ.

ಹೀಗಾಗಿ ಭೂಮ್ಯೇತರ ಜೀವಿಗಾಗಿ ಸೌರ ವ್ಯೂಹದಾಚೆಗಿನ ಆಕಾಶಕಾಯಗಳ ಕೈಬಿಟ್ಟು ಸೌರವ್ಯೂಹಕ್ಕೆ ಸೇರಿದ ಕಾಯಗಳಲ್ಲಿ ಅದರ ಸಾಧ್ಯತೆ ನೋಡೋಣ. ಈ ದಿಸೆಯಲ್ಲಿ ಬುಧ, ಶುಕ್ರ ಉಷ್ಣದ ವೈಪರೀತ್ಯದಿಂದ ನರಳಿದರೆ ಗುರುವಿಗೆ ಅಸದಳ ಗುರುತ್ವವೇ ಶಾಪ. ಶನಿ, ಯುರೇನಸ್, ನೆಪ್ಚೂನ್, ಪ್ಲೂಟೋಗಳಲ್ಲಿ ಅನಿಲಗಳದ್ದೇ ಕಾರುಬಾರು, ಜೊತೆಗೆ ಅತಿಶೈತ್ಯ. ನಮ್ಮ ನೆರೆಯ ಮಂಗಳ ಗ್ರಹ ಕೊಂಚಮಟ್ಟಿಗೆ ಆಸೆಗಣ್ಣಿನಿಂದ ನೋಡುವಂತಿದೆ. ಅದೂ ಇತ್ತೀಚೆಗೆ ಸುದೈವದಿಂದ ಮಂಗಳಗ್ರಹದಲ್ಲಿ ಜೀವವೈವಿಧ್ಯದ ಅಸ್ತಿತ್ವದ ಸಾಬೀತಿಗೆ ಮಹತ್ತರ ಪುರಾವೆಯೊಂದು ಸಿಕ್ಕು ಬೆರಳು ಕಚ್ಚುವಂತೆ ಮಾಡಿದೆ.

ಮಂಗಳ ಗ್ರಹಕ್ಕೆ ಆಂಗ್ಲಭಾಷೆಯಲ್ಲಿ 'ಮಾರ್ಸ್' ಎಂಬ ಹೆಸರು. ವಾಸ್ತವವಾಗಿ 'ಮಾರ್ಸ್'ರೋಮನ್ನರು ಯುದ್ಧದಲ್ಲಿ ಯಶಸ್ಸಿಗಾಗಿ ಪ್ರಾರ್ಥಿಸುತ್ತಿದ್ದ ದೇವತೆಯ ಹೆಸರು. ಮಿರುಗೆಂಪು ಬಣ್ಣದ ಮಂಗಳಕ್ಕೆ ಅಂಗಾರಕ, ಕುಜ ಎಂದೆಲ್ಲ ಹೆಸರು. ವ್ಯಾಸ ೬೭೫೫.೨ ಕಿಲೋ ಮೀಟರು. ನಮ್ಮಿಂದ ಐದೂವರೆ ಲಕ್ಷ ಕಿಲೋ ಮೀಟರ್ ದೂರ. ಶತಮಾನಗಳಿಂದಲೂ ಅತ್ಯಂತ ಕೌತುಕವೆನ್ನಿಸಿರುವ ಲೋಕವದು. ತನ್ನತನವನ್ನಿನ್ನೂ ನಿಗೂಢವಾಗಿರಿಸಿಕೊಂಡು ಸದಾ ವಿಜ್ಞಾನಿಗಳನ್ನು ನಿದ್ದೆಗೆಡಿಸುವ ಜಾಯಮಾನ ಅದರದು. ನಿಮ್ಮ ತೂಕ ಧರೆಯಲ್ಲಿ ೬೦ ಕಿಲೋ ಆದರೆ ಅಂಗಾರಕನ ಅಂಗಳದಲ್ಲಿ ಕೇವಲ ೨೭ ಕಿಲೋ. ಭೂಮಿಯ ಗುರುತ್ವದ ಹಂಗು ತೊರೆಯಲು ವಸ್ತುವಿಗೆ ಸೆಕೆಂಡಿಗೆ ೧೧.೨ ಕಿಲೋ ಮೀಟರಿನ ವೇಗ ಅಗತ್ಯವಾದರೆ ಮಂಗಳನಿಂದ ಜಿಗಿಯುಲಿಕ್ಕೆ ಸೆಕೆಂಡಿಗೆ ೫



**ಬಿಳಿಮುದ್ದೆಗಳು**
ದೂರದಿಂದ ನೋಡಿದರೆ ಮಂಗಳಗ್ರಹದ ಧ್ರುವ ಪ್ರದೇಶದ ಮೇಲೆ ಬಿಳಿ ಮುದ್ದೆಗಳು ಕಾಣುತ್ತವೆ. ಋತುಮಾನಕ್ಕೆ ತಕ್ಕಂತೆ ಗಾತ್ರ ಬದಲಿಸುವ ಇವು ಬಹುಶಃ ಹಿಮವಾಗಿರಬೇಕೆಂಬ ಗುಮಾನಿ ವಿಜ್ಞಾನಿಗಳಿಗೆ.

ಕಿಲೊ ಮೀಟರ್ ವೇಗ ಸಾಕು. ನಮ್ಮ ೬೮೭ ದಿನಗಳು ಅಲ್ಲಿ ಒಂದು ವರ್ಷ. ಆದರೆ ಮಂಗಳಲೋಕದಲ್ಲಿ ದಿನ ಎಂದರೆ ಹೆಚ್ಚು ಕಡಿಮೆ ನಮ್ಮ ಹಾಗೆಯೆ; ೨೪ ಗಂಟೆ ೩೭ ನಿಮಿಷ. ಋತುಮಾನದಲ್ಲೂ ಧರೆಯ ಸಾಮ್ಯತೆ. ಸಾಲದೆಂಬಂತೆ ಧ್ರುವಪ್ರದೇಶಗಳಲ್ಲಿ ಟೊಪ್ಪಿಗೆಗಳು ಬೇರೆ. ಅವು ಹಿಮಪ್ರದೇಶಗಳೆಂದೇ ಗುಮಾನಿ. ನಿಯತ ಕಾಲದಲ್ಲಿ ಅಲ್ಲೇಕೆ ಹಿಮಕರಗಿ ಹೊಳೆಯಾಗಿ ಹರಿಯುತ್ತಿರಬಾರದು? ನೂರಿಪ್ಪತ್ತು ವರ್ಷಗಳ ಹಿಂದೆಯೆ ಇಟಲಿಯ ಶ್ಚಿಯಾ ಪೆರೆಲಿ ಮಂಗಳಗ್ರಹದ ಮೇಲ್ಮೈಯ ಗೆರೆಗಳ ಜಾಲವನ್ನು ಗುರುತಿಸಿ ಅವು ಅಲ್ಲಿನ ಬುದ್ಧಿಜೀವಿಗಳು (?) ನೀರು ಹಾಯಿಸಲೆಂದು ತೋಡಿರುವ ಕಾಲುವೆಗಳೆಂದು ಸಾರಿದ್ದುಂಟು! ಅಮೆರಿಕದ ಲೋವೆಲ್ ಎಂಬ ಖಗೋಳ ತಜ್ಞ

ಕೂಡ ತನ್ನ ದೃಷ್ಟಿಗೆ ಬಂದ 'ನಾಲೆಗಳ' ಚಿತ್ರ ಬಿಡಿಸಿದ್ದ. ಹೆಚ್.ಜಿ. ವೆಲ್ಸ್ ಎಂಬ ಲೇಖಕ ನಂತೂ `The War of Worlds' ಎಂಬ ಕಾದಂಬರಿ ಬರೆದು ಬಿಸಿದೋಸೆಯಂತೆ ಪ್ರತಿಗಳನ್ನು ಮಾರಿದ್ದ. 'ಮಂಗಳ ಮಾನವರು' ಭೂಮಿಯನ್ನಾಕ್ರಮಿಸಲು ಬರುವ ಹವಣಿಕೆಯ ಚಿತ್ರವದು. ವೆಲ್ಸ್ ಕಥೆ ೧೯೩೮ರಲ್ಲಿ ಸಿ.ಬಿ.ಎಸ್. ಬಾನುಲಿ ಕೇಂದ್ರದಲ್ಲೂ ರೂಪಕವಾಗಿ ಪ್ರಸಾರವಾಗಿದ್ದು ಈಗ ಇತಿಹಾಸ.

ಆದರೆ ಒಮ್ಮೆಯಾದರೂ ಮಿಥ್ಯೆ ಸರಿದು ತಥ್ಯ ಬಯಲಾಗಲೇಬೇಕಲ್ಲ? ಮಂಗಳಗ್ರಹದಂಗಳಕ್ಕೆ ಬಾಹ್ಯಾಂತರಿಕ್ಷ ನೌಕೆಯನ್ನು ಉಡ್ಡಯಿಸಿದಾಗಲೆ ಸತ್ಯದ ಸಾಬೀತಾಗಿದ್ದು- ಅಂದುಕೊಂಡದ್ದು ಬರಿಯ ಭ್ರಮೆ ಎಂದು. ೧೯೬೫ರ ಜುಲೈನಲ್ಲಿ ಮರೀನರ್-೪ ನೌಕೆ ಮಂಗಳಗ್ರಹದಲ್ಲಿಳಿದು ಅಲ್ಲಿನ ಮೇಲ್ಮೈಯು ಚಂದ್ರನಲ್ಲಿರುವಂತೆ ಹೊಂಡಗಳಿಂದ ಕೂಡಿದೆ ಎಂಬ ಮಾಹಿತಿಯನ್ನು ರವಾನಿಸಿತು. ಆ ಅನ್ವೇಷಕದಲ್ಲಿರಿಸಿದ್ದ ಸಲಕರಣೆಗಳು ಮಂಗಳನಿಗೆ ಭೂಮಿಯ ಕೇವಲ ನೂರನೆಯ ಒಂದರಷ್ಟು ತೆಳುವಾದ ವಾಯುಮಂಡಲದ ಪದರವಿರುವುದನ್ನು ಗುರುತಿಸಿದ್ದವು. ವಾಯುಮಂಡಲ ಬಹುತೇಕ ಇಂಗಾಲದ ಡೈ ಆಕ್ಸೈಡ್. ಇನ್ನು ಮಣ್ಣಿನಿಂದ ತುಂಬಿ ಬರಿದಾಗುವ ಪ್ರದೇಶಗಳು ನಾಲೆಗಳೆಂಬ ಭ್ರಮೆಗೆ ಕಾರಣವಾಗಿದ್ದವು.

೧೯೭೦ರಲ್ಲಿ ಮರೀನರ್-೯ರ ಪ್ರಯೋಗ ಮಂಗಳನತ್ತ. ಬಂದೇ ಬಂದವು ಛಾಯಾಚಿತ್ರಗಳು. ಗೆರೆಗಳು ಹಿಂದೊಮ್ಮೆ ಸಮೃದ್ಧವಾಗಿ ಹರಿದು ಒತ್ತಿಹೋದ ನದೀಪಾತ್ರಗಳೆಂಬ ಕ್ರಾಂತಿಕಾರಿ ತೀರ್ಮಾನಕ್ಕೆ ಬರಲು ಅವು ನೆರವಾದವು. ಒಂದಾನೊಂದು ಕಾಲದಲ್ಲಿ ನೀರಿತ್ತು ಎಂದಾದರೆ ಅಲ್ಲಿ ಜೀವವೈವಿಧ್ಯವಿತ್ತೆ? ಒಮ್ಮಿಂದೊಮ್ಮೆಗೆ ವಿಜ್ಞಾನಿಗಳ ಆಶಾವಾದಿಗಳಾದರು. ವೈಕಿಂಗ್-೧



### ಕವಿ

ಕವಿ ಎಂದರೆ ಏನೆಂದುಕೊಂಡಿರಿ?
ಏನನ್ನಾದರೂ ನೋಡಿ
ಸಿಟ್ಟೆಗೆದ್ದು
ಕವಿ ತೆಗಳೆ
ಅದೂ
ಕವಿತೆಗಳೆ!

✷ -ಶುಭಾ ಮರವಂತೆ

ಮತ್ತು ವೈಕಿಂಗ್-೨ ವ್ಯೋಮ ನೌಕೆಗಳು ಅಂಗಾರಕನತ್ತ ಧಾವಿಸಿದವು. ಈ ಒಂದೊಂದು ನೌಕೆಯಲ್ಲೂ ಎರಡು ಘಟಕಗಳು. ಒಂದು ಆರ್ಬಿಟರ್ ಇನ್ನೊಂದು ಲ್ಯಾಂಡರ್. ಮಂಗಳನಿಗೆ ನಿರ್ದಿಷ್ಟ ಹತ್ತಿರದಲ್ಲಿ ಸುಳಿದಾಗ ಎರಡು ಘಟಕಗಳೂ ಪ್ರತ್ಯೇಕಗೊಂಡು ಆರ್ಬಿಟರ್ ಕಾವಲುಗಾರನಂತೆ ಗ್ರಹವನ್ನು ಪ್ರದಕ್ಷಿಣೆ ಹಾಕುತ್ತಿರುವುದು, ಲ್ಯಾಂಡರ್ ಗ್ರಹದಂಗಳಕ್ಕೆ ಇಳಿಯುವುದು- ಇದೇ ಕಾರ್ಯತಂತ್ರ. ಲ್ಯಾಂಡರ್‌ನಲ್ಲಿ ಕ್ಯಾಮೆರಾ, ವಾತಾವರಣ ವಿಶ್ಲೇಷಕ, ಮಾರುತ ತೀವ್ರತೆ ಮಾಪಕ ಇತ್ಯಾದಿ ಅನೇಕ ಉಪಕರಣಗಳು, ಕೇವಲ ಒಂದು ಘನ ಅಡಿ ಗಾತ್ರದಷ್ಟು ಸ್ಥಳದಲ್ಲಿ ಅಡಕವಾಗಿರಿಸಿದ ಸೂಕ್ಷ್ಮ ಜೀವಶಾಸ್ತ್ರ ಪ್ರಯೋಗಾಲಯಗಳು. ಜೀವಾವಶೇಷವಿದ್ದರೂ ಸರಿ, ಇಲ್ಲದಿದ್ದರೂ

## ಪ್ರೀತಿ ಹೃದಯವೆಂಬ ಹೂವಿನಲ್ಲಿರುವ ಮಕರಂದ

• ಜಿ. ಪವನ್‌ಕುಮಾರ್

ಸರಿ, ಏನೆಂಬುದನ್ನು ಬಯಲು ಮಾಡೋಣ ಎಂಬ ಛಲ ವಿಜ್ಞಾನಿಗಳಿಗೆ.

ವೈಕಿಂಗ್ ಯೋಜನೆ ಯಶಸ್ವಿಯಾಯಿತು. ವಾರವಾರಕ್ಕೂ 'ತಾಜಾ' ಛಾಯಾಚಿತ್ರಗಳು ರವಾನೆಯಾದವು. ವರದಿಗಳು ಬಂದವು. ೧೯೭೬ರ ಜುಲೈ ೨೦ ರಂದು ಶುಭದಿನ. ವೈಕಿಂಗ್-೧ ಮಂಗಳನನ್ನು ಸ್ಪರ್ಶಿಸಿತು. ವಿಜ್ಞಾನಿಗಳಿಗೆ ಹಿಗ್ಗೇ ಹಿಗ್ಗು. ಮಂಗಳನ ಮಣ್ಣೇ ವಿಶಿಷ್ಟ. ಎರಡುವಾರಗಳ ತರುವಾಯ ವೈಕಿಂಗ್ -೨ ಕೂಡ ಉತ್ತಮದರ್ಜೆಯ ಚಿತ್ರಗಳನ್ನೇ ಕಳಿಸಿಕೊಟ್ಟಿತ್ತು. ಒಟ್ಟಾರೆ ವೈಕಿಂಗ್ ಅನ್ವೇಷಕಗಳು ಮಂಗಳ ಗ್ರಹದಲ್ಲಿ ಜೀವಿಗಳನ್ನು ಶೋಧಿಸಲಿಲ್ಲವಾದರೂ ಅಲ್ಲಿನ ಎಲ್ಲ ಪ್ರದೇಶಗಳೂ ಬರಡೇ ಎಂಬ ನಿರ್ಣಯಕ್ಕೆ ಬರುವಂತಿರಲಿಲ್ಲ. ಜಲ ಬತ್ತಿದ್ದರೂ ಮಣ್ಣಗರ್ಭದಲ್ಲಿ ಸುರಕ್ಷಿತವಾಗಿ ಜೀವಿ ಇಲ್ಲವೆ ಪಳೆಯುಳಿಕೆಯಾದರೂ ಇಣುಕಿನೋಡುತ್ತಿರಬಹುದಲ್ಲ ಎಂಬ ಅನುಮಾನ ವಿಜ್ಞಾನಿಗಳಿಗೆ. ಮಂಗಳನಲ್ಲಿ ಇರುಳ ಉಷ್ಣತೆ ಸೊನ್ನೆಗಿಂತ ೧೩೦ ಡಿಗ್ರಿ ಸೆಲ್ಸಿಯಸ್ ಕಡಿಮೆ. ಭೂಮಿಯಹಾಗೆ ಅಲ್ಲಿ ಸೂರ್ಯನಿಂದ ಬರುವ ಅತಿ ನೇರಳೆ ಕಿರಣಗಳನ್ನು ತಡೆಯುವ ಓಝೋನ್ ಪದರವಿಲ್ಲ. ಚಂದ್ರನಲ್ಲಿ ಇಳಿದಹಾಗೆ ಮಂಗಳಗ್ರಹದಲ್ಲಿ ಮಾನವ ಇಳಿದು ಅವಲೋಕಿಸಿದ ಹೊರತು ವಾಸ್ತವ ಏನೆಂಬುದು ತಿಳಿಯದು.

ಅಂಗೈಯಲ್ಲಿ ಬೆಣ್ಣೆ ಇಟ್ಟುಕೊಂಡು ತುಪ್ಪಕ್ಕಾಗಿ ಊರನ್ನೆಲ್ಲ ಅಲೆದಾಡುವಿರೇಕೆ ಎಂದು ಅಲ್ಲಿಂದ ಬಂದ ಸಾಕ್ಷಿ ಕಲ್ಲೊಂದು ಅಣಕಿಸಲಾರಂಭಿಸಿದೆ. ಇದರ ಹೆಸರು ALH ೮೪೦೦೧. ಇದು ಪ್ರಾಚೀನ ಕಾಲದಲ್ಲಿ ಮಂಗಳಗ್ರಹದಿಂದ ತೂರಿ ಬಂದ ಶಿಲಾತುಣುಕು- ಉಲ್ಕೆ. ಭುವಿಗೆ ಹೊರ ಆಗಸ ನೆಲೆಗಳಿಂದ ಗಣನೀಯ ಸಂಖ್ಯೆಯಲ್ಲಿ ಬಂದು ಅಪ್ಪಳಿಸುತ್ತಲೇ ಇರುತ್ತವೆ ಉಲ್ಕೆಗಳು. ಅಂತಹ ಚೂರುಪಾರುಗಳಲ್ಲಿ ALH ೮೪೦೦೧ ಸಹ ಒಂದು. ಆದರೆ ಅಸಾಮಾನ್ಯ ಶಿಲೆಯಿದು. ಅಮೆರಿಕದ ವಿಜ್ಞಾನಿಗಳ ತಂಡವೊಂದು ಅಂಟಾರ್ಕ್ಟಿಕದ ಹಿಮಪ್ರದೇಶದಲ್ಲಿ ೧೯೮೪ರಲ್ಲಿ ಕಂಡುಕೊಂಡ ಅತ್ಯಮೂಲ್ಯ ಸಂಪತ್ತಿದು. ಆ ಪ್ರದೇಶಕ್ಕೆ ಅಲಾನ್ ಹಿಲ್ಸ್ ಎಂಬ ಹೆಸರಿರುವ ಕಾರಣ ದೊರೆತ ಆ ಸಾಕ್ಷಿ ಕಲ್ಲಿಗೆ ALH ೮೪೦೦೧ ಎಂಬ ನಾಮಕರಣ. ಸತತ ಪರೀಕ್ಷೆಗಳ ತರುವಾಯವೇ ಗೊತ್ತಾದದ್ದು ಅದು ಭೂಮ್ಯೇತರ ಆಗಸ ನೆಲೆಯಲ್ಲಿ ಜೀವಿಗಳ ಕುರುಹು ಒದಗಿಸುವ ಮೊಟ್ಟಮೊದಲ ಸಾಕ್ಷಿಯೆಂದು. ಇದರ ತೂಕ ೮೦೦ ಗ್ರಾಮುಗಳಷ್ಟು.

ALH ೮೪೦೦೧ ಮಾದರಿಯ ಗುಣಲಕ್ಷಣಗಳು ಸ್ವಾರಸ್ಯಕರವಾಗಿವೆ. ಕಾಯಿಸಿದಾಗ ಅನಿಲಗಳು ಭುಗಿಲೆದ್ದು ಈಗಾಗಲೇ ಸಂಗ್ರಹಿಸಲಾಗಿರುವ ಹನ್ನೊಂದು ಮಂಗಳ ಶಿಲೆಗಳಂತೆಯೆ ವರ್ತಿಸುತ್ತದೆ ಅದು ರಾಸಾಯನಿಕ ಲಕ್ಷಣಗಳಲ್ಲಿ. ಮಂಗಳನ ಹವೆ ಅವಲೋಕಿಸಿದ ವರದಿಗೂ ಹೊರಬರುವ ಅನಿಲಗಳ ಜಾಯಮಾನಕ್ಕೂ ಸಾಮ್ಯವಿದೆ.

ALH ೮೪೦೦೧ ಸುಮಾರು ೪೦೦ ಕೋಟಿ ವರ್ಷಗಳಷ್ಟು ಹಳೆಯದೆನ್ನಲಾಗಿದೆ. ಒಂದೂವರೆ ಕೋಟಿ ವರ್ಷಗಳ ಹಿಂದೆ

ಧೂಮಕೇತುವೋ ಅಥವಾ ಕ್ಷುದ್ರಗ್ರಹವೋ ಮಂಗಳ ಗ್ರಹಕ್ಕೆ ಅಪ್ಪಳಿಸಿ ಈ ತುಂಡು ಬೇರ್ಪಟ್ಟಿರಬೇಕು. ಹಾಗೆ ಬೇರೆಯಾದ ತುಣುಕು ಲಕ್ಷಾಂತರ ವರ್ಷಗಳ ಕಾಲ ಅಂತಃ ಗ್ರಹ ಆಗಸದಲ್ಲಿ ಸಾಗಿ ಸುಮಾರು ೧೩೦೦೦ ವರ್ಷಗಳ ಹಿಂದೆಯಷ್ಟೆ ಅಂಟಾರ್ಕ್ಟಿಕದ ಹಿಮದಲ್ಲಿ ಹೊಕ್ಕಿತು. ಸುಮ್ಮನೆ ಅದು ಅಲ್ಲಿಂದಿಲ್ಲಿಗೆ ತೂರಿಬಂದಿದ್ದೇ ಅತಿಶಯವಲ್ಲ. ಅದು ಮಂಗಳ ಗ್ರಹದ ಜೀವಿಯೊಂದರ ಪಳೆಯುಳಿಕೆಯೆಂದೇ ತಜ್ಞರ ತರ್ಕ. ೩೬೦ ಕೋಟಿ ವರ್ಷಗಳ ಪ್ರಾಚೀನದಲ್ಲಿ ಮಂಗಳನ ಪರಿಸರ ಬಹುತೇಕ ಭುವಿಯನ್ನೇ ಹೋಲುತ್ತಿತ್ತೆಂದೇ ಅವರ ನಿರ್ಣಯ. ವಾಯುಮಂಡಲ ಮಂದ, ಮೇಲ್ಮೈಯಲ್ಲಿ ನದಿ, ಸರೋವರಗಳು, ಬುಗ್ಗೆಗಳು ಜಲಪಾತಗಳು ಅಲ್ಲಿ ಇದ್ದವೆಂದೇ ವಿಜ್ಞಾನಿಗಳ ವಾದ. ಆದರೆ ಪರಿಸರ ಹದಗೆಟ್ಟು ನೀರು ಬತ್ತಿತು. ಇಂದು ಮಂಗಳ ಬರಡು. ALH ೮೪೦೦೧ ಮಾದರಿಯನ್ನು ಸುಟ್ಟರೆ ದೊರೆವ ಪಾಲಿಸೈಕ್ಲಿಕ್ ಆರೋಮ್ಯಾಟಿಕ್ ಹೈಡ್ರೋಕಾರ್ಬನ್‌ಗಳು ಯಾವುದೇ ಜೀವಿಯನ್ನು ಸುಟ್ಟರೆ ಬರುವಂಥವು! ಎಲೆಕ್ಟ್ರಾನ್ ಮೈಕ್ರೋಸ್ಕೋಪಿನ ಮೂಲಕ ತುಣುಕನ್ನು ವೀಕ್ಷಿಸಿದಾಗ ಪದರು ನಾರಿನೋಪಾದಿಯಲ್ಲಿ ಕಂಡುಬರುವುದಲ್ಲದೆ ಭೂಮಿಯ ಸೂಕ್ಷ್ಮ ಜೀವಿಗಳನ್ನೇ ಹೋಲುತ್ತದೆ. ನಾಸಾದ ತಜ್ಞರಂತೂ 'ಸಾಕ್ಷಿ ಕಲ್ಲಿ'ನಲ್ಲಿ ಅಮೈನೋ ಆಮ್ಲಗಳು ಹಾಗೂ ಡಿ.ಎನ್.ಎ. ಕೂಡ ಲಭ್ಯವಾದೀತೆಂದು ಹೇಳುತ್ತಾರೆ. ಅಸದೃಶವೆನ್ನಲಾಗಿರುವ ಈ 'ಅವಧೂತ'ನ ಸಂದೇಶವೇನೇ ಇರಲಿ, ಮಂಗಳಗ್ರಹದ ನಮ್ಮ 'ಸಹಪಾಠಿ'ಗಳನ್ನು ಭೇಟಿಯಾಗಬಹುದೆ ಎಂಬ ತವಕ ತಣಿಯಲು ಕಾಲವೇ ಉತ್ತರಿಸಬೇಕು.

## ಇರುವೆಗಳಲ್ಲಿ ಸಗೋತ್ರ ವಿವಾಹ!

ಇರುವೆಗಳ ಪ್ರಪಂಚದಲ್ಲಿ ರಾಣಿ ಇರುವೆಗೆ ಸಂತಾನೋತ್ಪತ್ತಿಯ ಜವಾಬ್ದಾರಿ ಇರುವಂತೆ, ಕೆಲಸಗಾರ ಇರುವೆಗಳಿಗೆ ಗೂಡಿನ ನಿರ್ಮಾಣ, ಅದರ ಸ್ವಚ್ಛತೆ ಹಾಗೂ ಮೊಟ್ಟೆ-ಮರಿಗಳ ಪಾಲನೆ-ಪೋಷಣೆಗಳ ಹೊಣೆಗಾರಿಕೆ ಇದೆ. ಕೆಲವು ಜಾತಿಯ ಇರುವೆಗಳಲ್ಲಿ ಗೂಡಿನ ರಚನೆ ಸಂಕೀರ್ಣವಾಗಿದ್ದು, ಪ್ರತಿಕೂಲ ಪರಿಸ್ಥಿತಿಗಳಲ್ಲಿ ಗೂಡಿನ ರಕ್ಷಣೆ ಕಷ್ಟಕರವಾಗಿರುತ್ತದೆ. ಅಪಾರ ಸಮಯ ಮತ್ತು ಶ್ರಮದಿಂದ ನಿರ್ಮಿತವಾದ ಇಡೀ ಕುಟುಂಬ, ರಾಣಿಯ ಸಾವಿನೊಂದಿಗೆ ವ್ಯರ್ಥವಾಗುವುದೂ ಉಂಟು.

ರಾಣಿ ಇರುವೆಯ ಅಕಾಲಿಕ ಮರಣದಿಂದ ತಮ್ಮ ಸಮಯ, ಶ್ರಮ ವ್ಯರ್ಥವಾಗದಂತೆ 'ಫಾರ್ಮಿಕಾ' ಮತ್ತು 'ಕ್ಯಾಂಪೈಂಟನೋಸ್' ಇರುವೆಗಳು ಪರ್ಯಾಯ ವ್ಯವಸ್ಥೆ ರೂಪಿಸಿಕೊಂಡಿವೆ. ಈ ಜಾತಿಯ ಇರುವೆಗಳಲ್ಲಿ ಆಯ್ಕೆಯಾದ ಕೆಲವು ಹೆಣ್ಣಿರುವೆಗಳು ಬೇರೆ ಗೂಡಿನ ಗಂಡುಗಳಿಂದ ಗರ್ಭಧರಿಸುತ್ತವೆ. ರಾಣಿಯ ಮರಣದ ನಂತರ ಸಂತಾನೋತ್ಪತ್ತಿಯನ್ನು ಆರಂಭಿಸುತ್ತವೆ. ಭಾರತೀಯ ಮೂಲದ ಫೋಸಸ್ಕೈನ್ ಇರುವೆಗಳಲ್ಲಿ, ಕೆಲಸಗಾರ್ತಿ ಹೆಣ್ಣು ಇರುವೆಗಳು ತಮ್ಮ ಸೋದರ ಗಂಡಿರುವೆಗಳೊಂದಿಗೆ ಸಂಪರ್ಕ ಹೊಂದಿ ಸಂತಾನೋತ್ಪತ್ತಿಗೆ ಸಿದ್ಧವಾಗುತ್ತವೆ. ಹೀಗೆ ರಾಣಿಯ ಮರಣದ ನಂತರವೂ ಸಂತಾನ ಪ್ರಕ್ರಿಯೆ ಅಬಾಧಿತವಾಗಿ ಮುಂದುವರಿಯುತ್ತದೆ. ಇದೊಂದು ರೀತಿಯ ಸಗೋತ್ರ ವಿವಾಹವೇ ಆದರೂ ರಾಣಿಯ ತಳಿ ಮುಂದುವರೆಯುತ್ತದೆ.

✍ ಶಂಕರ ಅಜ್ಜಂಪುರ

# ಸಂಸ್ಮರಿಸಿರಿ ಆ ಬಲಿದಾನ....

# ಆಜಾದರ ಅಂತಿಮ ಸಮರ

✍ ಸ್ವಯಂಭೂ

*೧೯೩೧ರ ಫೆಬ್ರುವರಿ ೨೭!*

ದೇಶಪ್ರೇಮಿಗಳೆಲ್ಲ ತುಂಬ ಹೆಮ್ಮೆಯಿಂದ ಹಾಗೂ ಅಷ್ಟೇ ವಿಷಾದದಿಂದ ನೆನಪಿಡಬೇಕಾದ ದಿನವಿದು.

ಅಂದು ಶುಕ್ರವಾರ. ಅಲಹಾಬಾದದ ಆಲ್‌ಫ್ರೆಡ್ ಪಾರ್ಕ್ ಬ್ರಿಟಿಷ್ ಅಧಿಕಾರಿಗಳು ಹಾಗೂ ಅವರ ಅಧೀನರಾದ ಭಾರತೀಯ ಪೊಲೀಸರಿಂದ ಸುತ್ತುವರೆಯಲ್ಪಟ್ಟಿದೆ. ಅದೊ, ಅಲ್ಲಿ, ಆ ನೇರಳೆಮರದ ಕೆಳಗಿನ ಬೆಂಚ್ ಮೇಲೆ ಕುಳಿತ ಇಬ್ಬರು ಯುವಕರು ಗಹನ ಚರ್ಚೆಯಲ್ಲಿ ತೊಡಗಿದ್ದಾರೆ. ತಮ್ಮನ್ನು ಬೇಟೆಯಾಡಲು ಪೊಲೀಸರು ಅಲ್ಲಿಯೇ ಹೊಂಚು ಹಾಕಿದ್ದಾರೆಂಬ ಕಿಂಚಿತ್ ಸುಳಿವೂ ಅವರಿಗಿಲ್ಲ.

ರಣರಂಗ ಸಿದ್ಧವಾಗಿತ್ತು. ಸಿ.ಐ.ಡಿ. ವಿಭಾಗದ ಎಸ್.ಪಿ. ಜಾನ್ ನಾಟ್ ಬೋವರ್ ಕಾರಿನಿಂದ ಹೊರಬಂದ. ಬೇಟೆ ಕಣ್ಣೆದುರೇ ಇತ್ತು. ಪಿಸ್ತೂಲ್ ತೆಗೆದವನೇ ಗುರಿ ಇಟ್ಟು ಗುಂಡು ಹಾರಿಸಿದ. ಧೋತ್ರ ಉಟ್ಟಿದ್ದ ಯುವಕನ ತೊಡೆ ಸೀಳಿ ರಕ್ತ ಚಿಮ್ಮಿತ್ತು. ಮತ್ತಾರಾದರೂ ಆಗಿದ್ದರೆ ಆ ಅನಿರೀಕ್ಷಿತ ಗುಂಡೇಟಿಗೆ ಬೆದರಿ ಎದೆಯೊಡೆದು ಅಲ್ಲಿಯೇ ಪ್ರಾಣ ಬಿಡಬಹುದಿತ್ತು. ಆದರೆ ಆ ಯುವಕನದು ಗಟ್ಟಿ ಗುಂಡಿಗೆ!

ತನ್ನ ಮೃತ್ಯು ಸನ್ನಾಹವನ್ನು ಕಂಡುಕೊಂಡ ಆ ಯುವಕ ತಕ್ಷಣ ಜೊತೆಗಾರನನ್ನು ಅಲ್ಲಿಂದಾಚೆ ಕಳಿಸಿದ. ಒಬ್ಬರನ್ನೇ ಬಿಟ್ಟುಹೋಗಲೊಪ್ಪದ ಜೊತೆಗಾರನನ್ನು ಬಲವಂತದಿಂದಲೇ ಹೊರಕಳಿಸಿದ. ಜೇಬಿನಿಂದ ಗುಂಡು ತುಂಬಿದ ಮೌಸರ್ ಪಿಸ್ತೂಲನ್ನು ಹೊರತೆಗೆದ. ಅಷ್ಟರಲ್ಲಿಯೇ ಡಿ.ಎಸ್.ಪಿ. ವಿಶ್ವೇಶ್ವರ ಸಿಂಗ್ ಹಾರಿಸಿದ ಗುಂಡು ಯುವಕನ ಬಲಗೈಯನ್ನು ಛಿದ್ರಗೊಳಿಸಿತ್ತು. ಆದರೇನು? ಎಡಗೈ ಇನ್ನೂ ಇತ್ತಲ್ಲ! ಅದಮ್ಯ ಬಲದ, ಅಪ್ರತಿಮ ಛಲದ ಯುವಕನ ಎಡಗೈಗೆ ಬಂದ ಪಿಸ್ತೂಲು ಬೋವರ್‌ನ ಕಾರಿನ ಮೇಲೆ ಗುಂಡಿನ ಮಳೆಗರೆಯಿತು. ತನ್ನನ್ನು ಬೇಟೆಯಾಡಬಂದವ ತಪ್ಪಿಸಿಕೊಂಡು ಹೋಗಬಾರದೆಂಬ ಉದ್ದೇಶ ಯುವಕನದಾಗಿತ್ತು. ಅನಂತರದ ಸರದಿ ಬೋವರ್‌ನ ಬಲಗೈದಾಗಿತ್ತು. ಚಕಚಕನೆ ಸುತ್ತೆಲ್ಲ ಗುಂಡಿನ ಮಳೆಗರೆದ ಆ ಯುವಕ ಹಲವರನ್ನು ಗಾಯಗೊಳಿಸಿದ, ಇನ್ನುಳಿದವರ ರಿವಾಲ್ವರ್ ಕೆಳಗುರುಳಿಸಿದ. ದಿಗ್ಭ್ರಮೆಗೊಂಡ ಪೊಲೀಸರು ಮನಬಂದಂತೆ ಗುಂಡು ಹಾರಿಸಿದರು. ದಾಳಿ-ಪ್ರತಿದಾಳಿ ಅವ್ಯಾಹತವಾಗಿ ಸಾಗಿತ್ತು. ಗುಂಡಿನ ಸಪ್ಪಳ ಪಾರ್ಕಿನಲ್ಲಿ ಪ್ರತಿಧ್ವನಿಸಿತು. ಗಾಬರಿಗೊಂಡ ಜನ ಪಾರ್ಕಿನತ್ತ ದೌಡಾಯಿಸಿದರು. ಕುತೂ

ಹಲದಿಂದ ಘೇರಾಯಿಸಿದರು. ಅಲ್ಲಿ ತುಸು ದೂರದಲ್ಲಿ ಯುವಕನೊಬ್ಬ ನೂರಾರು ಪೊಲೀಸರ ವಿರುದ್ಧ ಏಕಾಂಗಿಯಾಗಿ ಹೋರಾಡುತ್ತಿದ್ದಾನೆ. ತೊಟ್ಟ ಬಟ್ಟೆಯೆಲ್ಲ ರಕ್ತಮಯವಾಗಿದೆ ದೇಹ ಜರ್ಜರಿತವಾಗಿದ್ದರೂ ಪಿಸ್ತೂಲಿನ ಮೇಲೆ ಉಡದ ಹಿಡಿತ. ಬಿಡದ ಛಲ. ಜನರಿಗೆಲ್ಲ ಕುತೂಹಲ. ಗುಂಪಿನೊಳಗಿನ ಒಬ್ಬ ಧೈರ್ಯವಹಿಸಿ ಮುಂದೆ ಬಂದು ಪೊಲೀಸರಿಗೆ ಕೇಳಿದ;

"ಯಾರಿವನು"?

"ಅವನೊಬ್ಬ ಕುಖ್ಯಾತ ಡಕಾಯಿತ"!

ಇದು ಹಸಿ ಸುಳ್ಳು ಉತ್ತರವಾಗಿತ್ತು.

ಆಲ್‌ಫ್ರೆಡ್ ಪಾರ್ಕಿನತ್ತ ಸೆಣಸಾಡುತ್ತಿದ್ದ ಆ ಪುರುಷಸಿಂಹ ಚಂದ್ರಶೇಖರ ಆಜಾದ್! ಅಪ್ಪಟ ದೇಶಪ್ರೇಮಿ, ಮಹಾನ್ ಕ್ರಾಂತಿಕಾರಿ. ಅವರೊಂದಿಗಿದ್ದ ಇನ್ನೊಬ್ಬ ಯುವ ಕ್ರಾಂತಿಕಾರಿ ಸುಖದೇವರಾಜ್.

ಆಜಾದ್ ಆರ್ಭಟದೆದುರು ಬೋವರ್‌ನ ಸತ್ವ ಉಡುಗಿತ್ತು. ಆತ ಗಿಡಗಳ ಮರೆಯಲ್ಲಡಗಿ ಗುಂಡು ಹಾರಿಸುತ್ತಿದ್ದಂತೆ, "ಏ ಬ್ರಿಟಿಷ್ ಹೇಡಿ, ಮರೆಯಲ್ಲೇಕೆ ಅಡಗುವೆ? ಭಾರತೀಯ ಕ್ರಾಂತಿಕಾರರನ್ನು ಮುಖಾ ಮುಖಿ ಎದುರಿಸುವ ಎದೆಗಾರಿಕೆ ಇಲ್ಲವೆ? ನಿಜವಾದ ಪುರುಷನಾಗಿದ್ದರೆ ಎದುರಿಗೆ ಬಾ," ಎಂದು ಆಜಾದ್ ಅಬ್ಬರಿಸಿದರು.

ಈ ಕ್ರಾಂತಿಕಾರಿಯನ್ನು 'ಜೀವಂತ ಇಲ್ಲವೆ ಶವವಾಗಿ' ಹಿಡಿಯಲೆಂಬ ಸಂಕಲ್ಪದಿಂದಲೇ ಬಂದಿದ್ದ ಆ ಅಧಿಕಾರಿ 'ಫೈರ್' ಎಂದು ಮತ್ತೊಮ್ಮೆ ಕೂಗಿದ. ಪೋಲೀಸರು ನೆಲದ ಮೇಲೆ ಬಿದ್ದು ಬಂದೂಕು ಗುರಿ ಇಡತೊಡಗಿದರು.

"ಓ ನನ್ನ ಭಾರತೀಯ ಬಂಧುಗಳೆ, ನೀವೇಕೆ ನನ್ನನ್ನು ಬೇಟೆಯಾಡುತ್ತಿದ್ದೀರಿ?



ನನ್ನ ಹೋರಾಟ ನಿಮ್ಮ-ನಮ್ಮೆಲ್ಲರ ಗುಲಾಮು ಗಿರಿಯ ನೊಗವನ್ನು ಕಳಚಲೆಂದೇ ಎಂಬುದು ನಿಮಗೆ ತಿಳಿದಿಲ್ಲವೆ? ನೀವೆಷ್ಟೇ ಗುಂಡು ಹಾರಿಸಿ. ನಾನು ನಿಮ್ಮ ಮೇಲೆ ದಾಳಿ ಮಾಡು ವುದಿಲ್ಲ. ನನ್ನ ಗುರಿ ಏನಿದ್ದರೂ ಈ ಪರಕೀ ಯರು ಮಾತ್ರ" ಎಂದು ನುಡಿದ ಆಜಾದ್ ಅದರಂತೆ ನಡೆದರು. ಆ ಸ್ಥಿತಿಯಲ್ಲೂ ಎಂತಹ ಸಮತೋಲನ! ಆ ನಿಕರ ಕಾಳಗ ದಲ್ಲಿ-ಒಂದು ಪ್ರಸಂಗ ಹೊರತುಪಡಿಸಿ- ಅವರು ಅಪ್ಪಿ ತಪ್ಪಿಯೂ ಭಾರತೀಯರತ್ತ ಗುಂಡು ಹಾರಿಸಲಿಲ್ಲ. ಅವರ ಗುರಿ ಕೇವಲ ಬೋವರ್ ಮಾತ್ರ. ಅವನ ಇರುವಿಕೆ ಕಂಡ ಲ್ಲೆಲ್ಲ ಗುಂಡಿನ ಮಳೆಗರೆದರು. ಆದರೆ, ಸಾಹೇಬರ ಗುಲಾಮನಾಗಿದ್ದ ವಿಶ್ವೇಶ್ವರಸಿಂಗ್ ಆ ನೇರಳೆ ಮರದ ಸನಿಹಕ್ಕೆ ಬಂದು ಆಜಾದ್‌ರ ಮೇಲೆ ಗುಂಡು ಹಾರಿಸಿದ. ಜೊತೆಗೆ ಪುಂಖಾನುಪುಂಖವಾಗಿ ಅಶ್ಲೀಲ ಬೈಗಳ ಮಳೆಗರೆದ. ಆಜಾದ್‌ರ ಸ್ಥೈರಣೆ ಆಗ ತಪ್ಪಿತು. ನೇರವಾಗಿ ಅವನ ದವಡೆಗೇ ಗುರಿ ಇಟ್ಟು ಗುಂಡು ಹಾರಿಸಿದರು. ಇನ್ನೊಂದು ಕೆಟ್ಟ ಮಾತನಾಡದಂತೆ ಅವನ ಬಾಯಿಯನ್ನು ನುಜ್ಜುಗುಜ್ಜುಗೊಳಿಸಿದರು.

ಪೊಲೀಸರ ಗುಂಡಿನಿಂದ ಮೈಯೆಲ್ಲ ತೂತಾಗಿದ್ದರೂ ಪ್ರತಿಯಾಗಿ ೩೯ ಸುತ್ತು ಗುಂಡು ಹಾರಿಸಿದ ಆಜಾದ್ ಈಗ ಬಸವಳಿದಿ ದ್ದರು. ಚೈತನ್ಯ ಉಡುಗತೊಡಗಿತ್ತು. ನೂರಾರು ಪೊಲೀಸರ ವಿರುದ್ಧ ಒಬ್ಬನೇ ಎಷ್ಟು ಹೊತ್ತು ಹೋರಾಡಲು ಸಾಧ್ಯ? ಧಾರಾಕಾರವಾಗಿ ರಕ್ತ ಸುರಿದು ದೇಹ ಜರ್ಜರಿ ತವಾಗಿದ್ದರೂ ಆಜಾದ್‌ರು ಮಾನಸಿಕವಾಗಿ ಜಾಗ್ರತರಾಗಿದ್ದರು. ತಾವು ಹಾರಿಸುತ್ತಿದ್ದ ಗುಂಡುಗಳ ಲೆಖ್ಖವನ್ನು ಸರಿಯಾಗಿಯೇ ಇಟ್ಟಿ ದ್ದರು. ಪಿಸ್ತೂಲಿನಲ್ಲಿ ಉಳಿದದ್ದು ಇನ್ನೊಂದೇ ಗುಂಡು!

ಬ್ರಿಟಿಷರಿಗೆಂದೂ ತಲೆಬಾಗದ ದೃಢನಿ ರ್ಧಾರ ಮಾಡಿದ್ದ ಆಜಾದ್ ಈ ಕೊನೆಗಳಿಗೆ ಯಲ್ಲೂ ತಮ್ಮ ಸಂಕಲ್ಪಕ್ಕೆ ಬದ್ಧರಾಗಿದ್ದರು. ಪಿಸ್ತೂಲನ್ನು ಹಣೆಗಿಟ್ಟುಕೊಂಡು ಕೊನೆಯ ಬಾರಿ ಕುದುರೆ ಎಳೆದರು..... ಕ್ಲಿಕ್.... !

ಮಹಾನ್ ಕ್ರಾಂತಿಕಾರಿಯ ರೋಮಾಂ ಚಕ ಜೀವನ ನಾಟಕಕ್ಕೆ ಕೊನೆಯ ಪರದೆ ಬಿದ್ದಿತ್ತು. ದೇಶದ ಸ್ವಾತಂತ್ರ್ಯಕ್ಕಾಗಿ ನಡೆದ ಸುದೀರ್ಘ ಹೋರಾಟದಲ್ಲಿ ಮತ್ತೊಂದು ಪುಣ್ಯಜೀವಿಯ ನಿಃಸ್ವಾರ್ಥ ದೇಶಪ್ರೇಮಿಯ ಬಲಿದಾನವಾಗಿತ್ತು. ಅಷ್ಟೊಂದು ಹೋರಾಡಿ ದ್ದರೂ ಕೊನೆಗೂ ಬ್ರಿಟಿಷರಿಗೆ ಶರಣಾಗಲಿಲ್ಲ ವೆಂಬ ಸಾರ್ಥಕ ಭಾವ ಆ ಮುಖದಲ್ಲಿತ್ತು.

ಆಲ್‌ಫ್ರೆಡ್ ಪಾರ್ಕಿನಲ್ಲಿ ನಡೆದ ಮೂವ ತ್ತೆರಡು ನಿಮಿಷದ ಈ ನಾಟಕ ಸ್ವಾತಂತ್ರ್ಯ ವೀರನ ಆತ್ಮಾಹುತಿಯೊಂದಿಗೆ ಮುಗಿದಿತ್ತು. ಆ ಪುರುಷಸಿಂಹ ವೀರಮರಣವನ್ನೇ ಪಡೆ ದಿತ್ತು.

** ** **

ದೇಶವಿಂದು ಸ್ವಾತಂತ್ರ್ಯೋತ್ಸವದ ಸ್ವರ್ಣಮಹೋತ್ಸವದ ಸಂಭ್ರಮದಲ್ಲಿದೆ. ಈ ಸ್ವಾತಂತ್ರ್ಯವನ್ನು ಬ್ರಿಟಿಷರು ನಮಗೆ ಬೆಳ್ಳಿಯ ತಟ್ಟೆಯಲ್ಲಿ ಇಟ್ಟು ಕೊಟ್ಟವರಲ್ಲ. ಶತಮಾ ನದ ಸುದೀರ್ಘ ಹೋರಾಟ ನೀಡಿದ ಫಲ ವಿದು. ಈ ಹೋರಾಟಕ್ಕೆ ಹಲವು ಆಯಾಮ ಗಳಿವೆ. ಬಂಡಾಯ, ಯುದ್ಧ, ಕ್ರಾಂತಿಯ ಮಜಲುಗಳನ್ನು ದಾಟಿ ಕೊನೆಗೆ ಅಹಿಂಸಾ ತ್ಮಕ, ಅಸಹಕಾರ ಚಳುವಳಿ ನಡೆದಾದ ನಂತರ ನಮ್ಮ ದೇಶ ಸ್ವತಂತ್ರವಾಯಿತು. ಸಹಸ್ರಾವಧಿ ಪುಣ್ಯಪುರುಷರು ತಮ್ಮ ಜೀವನವನ್ನೇ ಬಲಿ ದಾನ ಮಾಡಿದರು. ಲಕ್ಷಾಂತರ ಜನರು ಮನೆ-ಮಠಗಳನ್ನು ಕಳೆದುಕೊಂಡು ಬ್ರಿಟಿಷರ

ಜೈಲುಗಳಲ್ಲಿ ಜೀವ ಸವೆಸಿದರು. ಈ ಸ್ವಾತಂತ್ರ್ಯ ಅವರೆಲ್ಲರ ತ್ಯಾಗದ ಫಲ. ಅಸಂಖ್ಯ ಜನರ ಸಾವು-ನೋವುಗಳ ಬೆಲೆ ತೆತ್ತು ಪಡೆದ ಸ್ವಾತಂತ್ರ್ಯವಿದು. ಈ ಸಂದರ್ಭ ದಲ್ಲಿ ಆ ಎಲ್ಲ ಪುಣ್ಯಜೀವಿಗಳ ತ್ಯಾಗ ಹಾಗೂ ಬಲಿದಾನವನ್ನು ಸಂಸ್ಮರಿಸಿ, ಆ ಹುತಾತ್ಮರಿಗೆ ಗೌರವ ಸೂಚಿಸಬೇಕಾದುದು ನಮ್ಮ ಕರ್ತವ್ಯ. ಈ ಸ್ವಾತಂತ್ರ್ಯ ಹೋರಾಟದ ರೋಮಾಂಚಕ ಕಥನವನ್ನು ಇಂದಿನ ಮಕ್ಕ ಳಿಗೆ ಇಡಿಯಾಗಿ ತಿಳಿಸುವ ಕೆಲಸವಾಗಬೇಕು. ಹಿರಿಯರಲ್ಲಿ ಪ್ರಾಮಾಣಿಕವಾಗಿ ಶ್ರದ್ಧೆಯಿಂದ ತಿಳಿಸುವ ಉತ್ಸಾಹವಿರಬೇಕು. ಕಿರಿಯರಲ್ಲಿ ಈ ಕುರಿತು ಕುತೂಹಲ ಇರಬೇಕು.

** ** **

ಇಷ್ಟಾಗಿ ಚಂದ್ರಶೇಖರ್ ಆಜಾದ್ ಮಾಡಿದ್ದ ಅಪರಾಧವಾದರೂ ಏನಿತ್ತು?

ದೇಶ ಸ್ವತಂತ್ರವಾಗಬೇಕು, ಪರಕೀಯರ ಕಪಿಮುಷ್ಟಿಯಿಂದ ದೇಶ ಮುಕ್ತವಾಗಬೇ ಕೆಂದು ಬಯಸಿದ್ದು ತಪ್ಪೆ? ಆ ದಿಶೆಯಲ್ಲಿ ಯತ್ನಿಸಿದ್ದು ಅಪರಾಧವೆ?

ಸ್ವಾತಂತ್ರ್ಯ ಹೋರಾಟಗಾರರೆಲ್ಲರ ಮೇಲೆ ಕಣ್ಣಿಟ್ಟಿದ್ದ ಬ್ರಿಟಿಷ್ ಆಧಿಪತ್ಯ ಕ್ರಾಂತಿ ಕಾರಿಗಳ ಬಗ್ಗೆ ಹೆಚ್ಚಿನ ನಿಗಾವಹಿಸಿತ್ತು. ಪಿಳ್ಳೆ ನೆಪಕ್ಕೂ ಅವರನ್ನು ಬಂಧಿಸುವ, ಅವರ ಹುಟ್ಟಡಗಿಸುವ ಹುನ್ನಾರ ನಿರಂತರ ನಡೆ ದಿತ್ತು. ಆಜಾದ್ ಅವರಂತಹ ಉಜ್ವಲ ದೇಶಭ 'ಕ್ತರನ್ನು ಯಾವುದಾದರೊಂದು ನೆಪದಲ್ಲಿ ಕಟ್ಟಿಹಾಕುವ ಸಂಕಲ್ಪ ಬ್ರಿಟಿಷ್ ಅಧಿಕಾರಿಗಳ ದಾಗಿತ್ತು. ಈ ಬಾರಿ ಅವರಿಗೆ ಒಂದು ಪ್ರಬಲ ಕಾರಣ ಸಿಕ್ಕಿತ್ತು.

ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಹಲವು ಸಂಘ-ಸಂಸ್ಥೆಗಳಲ್ಲಿ 'ಹಿಂದುಸ್ತಾನ್ ರಿಪಬ್ಲಿ




ಏನಯ್ಯಾ ಮದುವೆ ಆಗಿದ್ದೇ ಒಳ್ಳೆ 'ಚಪಾತಿ'ತರ ಆಗಿದ್ದೀಯಲ್ಲ?

ನನ್ನವಳು ಚಪಾತಿ ಸ್ಪೆಶಲಿಸ್ಟ್...!

ಕನ್ ಅಸೋಸಿಯೇಶನ್' ಕೂಡ ಒಂದು. ಬ್ರಿಟಿಷ್ ಆಡಳಿತವನ್ನು ಕೊನೆಗಾಣಿಸುವ ಉದ್ದೇಶದೊಂದಿಗೆ ೧೯೨೦ರಲ್ಲಿ ಶಾಂತಿ ಯುತ ಚಳುವಳಿ ಮಾಡಿದ ಈ ಸಂಸ್ಥೆ ಕೊನೆಗೆ ಕ್ರಾಂತಿಯ ಮಾರ್ಗ ಹಿಡಿಯಿತು.

ಈ ಕ್ರಾಂತಿಕಾರಿ ಪಕ್ಷದ 'ಕಮಾಂಡರ್ ಇನ್ ಚೀಫ್' ಪಂ. ರಾಮಪ್ರಸಾದ ಬಿಸ್ಮಿಲ್ಲ ಅವರ ನೇತೃತ್ವದಲ್ಲಿ ೧೯೨೫ರ ಅಗಸ್ಟ್ ೮ ರಂದು ಕಾಕೋರಿ ನಿಲ್ದಾಣದ ಬಳಿ ರೈಲೊಂ ದನ್ನು ಲೂಟಿ ಮಾಡಲಾಯಿತು. ಜರ್ಮ ನಿಯ ಮೌಸರ್ ಪಿಸ್ತೂಲುಗಳನ್ನು ಖರೀದಿ ಸಲು ತುರ್ತಾಗಿ ಹಣ ಬೇಕಾಗಿದ್ದರಿಂದ ಕ್ರಾಂತಿಕಾರಿಗಳು ಇಂತಹ ಕ್ರಮಕ್ಕೆ ಅನಿವಾರ್ಯ ವಾಗಿ ಮುಂದಾಗಬೇಕಾಯಿತು.

ಈ ದರೋಡೆ ಬ್ರಿಟಿಷ್ ಅಧಿಕಾರಿಗಳನ್ನು ತಲ್ಲಣಗೊಳಿಸಿತು. ಅಧಿಕಾರಿಗಳು ಸ್ಥಳಕ್ಕೆ ಧಾವಿಸಿ ವಿಚಾರಣೆ ನಡೆಸಿದರು. ಮಾಹಿತಿ ಸಂಗ್ರಹಿಸಿದರು. ದೇಶಭಕ್ತರ ವೇಷದಲ್ಲಿದ್ದ ಕೆಲ ದ್ರೋಹಿಗಳು ಅಗತ್ಯ ಮಾಹಿತಿ ಒದಗಿಸಿ ದರು.

ಇಂತಹ ಕೆಲ 'ದೇಶಭಕ್ತ'ರು ಬೇಹುಗಾ ರಿಕೆ ಇಲಾಖೆಯಿಂದ ನಿಯಮಿತ ಮಾಸಿಕ ವೇತನ (ಗೌರವಧನ ?) ಪಡೆಯುತ್ತಿದ್ದರೆಂ ಬುದು ಲಜ್ಜಾಸ್ಪದ ವಿಷಯ. ವ್ಯಾಪಾರ ಮಾಡಲೆಂದು ಬಂದ ಬ್ರಿಟಿಷರು ಶತಮಾನ ಗಳ ಕಾಲ ಇಡೀ ದೇಶವನ್ನು ಆಳಲು ಸಾಧ್ಯ ವಾದದ್ದು ಇಂತಹ ಮನೆಮುರುಕರಿಂದಲೇ ಎಂಬುದು ಐತಿಹಾಸಿಕ ಸತ್ಯ. ಪ್ರಾಮಾಣಿಕ ದೇಶಭಕ್ತರೊಂದಿಗೆ ಇದ್ದ ಈ 'ಹಸ್ತಕ'ರು ಕೇವಲ ಕೆಲ ನೂರು ರೂಪಾಯಿಗಳಿಗಾಗಿ ತಮ್ಮ ನೈತಿಕತೆಯನ್ನು ಬಲಿಗೊಟ್ಟರು. ನಂಬಿ ದವರ ಬೆನ್ನಲ್ಲಿ ಚೂರಿ ಹಾಕಿದರು. ರಾಷ್ಟ್ರ ಪರದಾಸ್ಯದಲ್ಲಿ ಸಿಲುಕಿ ನರಳುವಂತೆ ಮಾಡಿ ದರು.

ಹೀಗಾಗಿ 'ಕಾಕೋರಿ ರೈಲು ದರೋಡೆ' ಪ್ರಕರಣಕ್ಕೆ ಸಂಬಂಧಿಸಿದಂತೆ ಪೋಲೀಸರು ಕೇವಲ ಒಂದೂವರೆ ತಿಂಗಳಿನಲ್ಲಿಯೇ ಬಹು ತೇಕ ಕ್ರಾಂತಿಕಾರಿಗಳನ್ನು ಹಿಡಿದು ಹಾಕಿದರು. ಅವರ ಕೈಗೆ ಸಿಗದವರೆಂದರೆ ಚಂದ್ರಶೇಖರ ಆಜಾದ ಹಾಗೂ ಕುಂದನಲಾಲ ಎಂಬ ಇನ್ನೊಬ್ಬ ಕ್ರಾಂತಿಕಾರಿ ಮಾತ್ರ.

'ಕಾಕೋರಿ ಸಂಚು' ಎಂದೇ ಪ್ರಸಿದ್ಧವಾದ ಈ ಪ್ರಕರಣದ ಬಗ್ಗೆ ನ್ಯಾಯಮೂರ್ತಿ ಹ್ಯಾಮಿಲ್ಟನ್ ನೇತೃತ್ವದ ವಿಶೇಷ ನ್ಯಾಯಾ ಲಯ ಆರೋಪಿಗಳ ವಿಚಾರಣೆ ನಡೆಸಿತು. ಸರಕಾರದ ಪರವಾಗಿ ಖ್ಯಾತ ಕ್ರಿಮಿನಲ್ ವಕೀಲ ಜಗತ್ ನಾರಾಯಣ ಮುಲ್ಲಾ ವಕಾ ಲತ್ತು ವಹಿಸಿದ್ದರು. ರೂಪಾಯಿಗೆ ೩೦ ಶೇರು ಗೋದಿ ದೊರಕುತ್ತಿದ್ದ, ಒಂದು ತೊಲೆ ಬಂಗಾರಕ್ಕೆ ೨೦-೨೨ ರೂಪಾಯಿ ದರವಿದ್ದ ಅಂದಿನ ಕಾಲದಲ್ಲಿ ಈ ವಕೀಲರಿಗೆ ಸರಕಾರ ದಿನಂಪ್ರತಿ ೫೦೦ ರೂಪಾಯಿ ಶುಲ್ಕ ನೀಡು ತ್ತಿತ್ತಂತೆ! ಅವರ ಮಗ ಆನಂದ ನಾರಾಯಣ ಮುಲ್ಲಾ ಹಾಗೂ ಶ್ಯಾಮಸುಂದರ ನಾರಾ ಯಣ ಸಹಾಯಕರಾಗಿದ್ದರು. (ಇವರಿಗೆ ದಿನ ವೊಂದಕ್ಕೆ ನೂರು ರೂಪಾಯಿ ಶುಲ್ಕ) ಆದರೆ ಪ್ರಜ್ಞಾಪರಾಧದಿಂದ ಲಜ್ಜಿತರಾದ ಶ್ಯಾಮಸುಂ ದರ ನಾರಾಯಣ ಒಂದೇ ವಾರದಲ್ಲಿ ಸರಕಾ ರದ ಪರ ವಕಾಲತ್ತಿನಿಂದ ಹಿಂದೆ ಸರಿದರು.

ಕ್ರಾಂತಿಕಾರಿಗಳ ಪರವಾಗಿ ಬ್ಯಾರಿಸ್ಟರ್ ಎ.ಎಂ.ಚೌಧರಿ, ಪ್ರೊ. ಕೃಪಾಶಂಕರ ಹಜೇಲಾ, ಗೋವಿಂದ ವಲ್ಲಭ ಪಂತ, ಚಂದ್ರ ಭಾನು ಗುಪ್ತಾ ಮೊದಲಾದ ದೇಶಾಭಿಮಾನಿ ನ್ಯಾಯವಾದಿಗಳು ವಕಾಲತ್ತು ವಹಿಸಿದ್ದರು.

ಅತ್ಯಂತ ಕುತೂಹಲ ಕೆರಳಿಸಿದ್ದ ಈ ಪ್ರಕರಣದಲ್ಲಿ ಕ್ರಾಂತಿಕಾರಿಗಳ ಪರವಾಗಿ ವಕೀಲರು ಏನೆಲ್ಲ ಸಮರ್ಥನೀಯ ವಾದ ಮಂಡಿಸಿದರೂ ಪ್ರಯೋಜನವಾಗಲಿಲ್ಲ. ನ್ಯಾಯಾಲಯದ ದೃಷ್ಟಿಯಲ್ಲಿ ಅಂತಿಮ ತೀರ್ಪು ಪೂರ್ವ ನಿರ್ಧಾರಿತವಾದಂತಿತ್ತು. ರಾಮಪ್ರಸಾದ ಬಿಸ್ಮಿಲ್ಲ, ಅಶ್ಫಾಕ್‌ಉಲ್ಲಾಖಾನ್ ವಸೀರ್, ರೋಶನ್‌ಸಿಂಗ್ ಹಾಗೂ ರಾಜೇಂದ್ರ ಲಾಹಿರಿ ಅವರಿಗೆ ಗಲ್ಲು ಶಿಕ್ಷೆ ವಿಧಿಸಲ್ಪಟ್ಟಿತು. ಕೆಲವರಿಗೆ ಗಡಿಪಾರು, ಹಲವರಿಗೆ ಸಶ್ರಮ ಶಿಕ್ಷೆ ವಿಧಿಸಲಾಯಿತು.

ಈ ತೀರ್ಪು ಹೊರಬಿದ್ದ ನಂತರ ಬ್ರಿಟಿಷ್ ಅಧಿಕಾರಿಗಳು ಚಂದ್ರಶೇಖರ ಆಜಾದ್ ಅವರ ಶೋಧನಾ ಕಾರ್ಯವನ್ನು ಇನ್ನಷ್ಟು ಚುರುಕುಗೊಳಿಸಿದರು. ಅವರ ಕಾರ್ಯಾಚರಣೆಯ ಕ್ಷೇತ್ರಗಳಾಗಿದ್ದ ಕಾನಪುರ, ಝಾಂಸಿ, ಜಲಾನ್ ಹಾಗೂ ಅಲಹಾಬಾದದ ಪೊಲೀಸರು ಕಟ್ಟೆಚ್ಚರ ವಹಿಸಿ, ಮೈಯೆಲ್ಲ ಕಣ್ಣಾಗಿ ಕಾಯ್ದರು. ಕಾನಪುರದ ಜಿಲ್ಲಾ ಬೇಹುಗಾರಿಕೆ ಕಚೇರಿಯ ಉಸ್ತುವಾರಿ ಅಧಿಕಾರಿ ಆಗಿದ್ದ ಶಂಭುನಾಥರಿಗೆ ಅಝಾದರನ್ನು ಹಿಡಿಯುವ ಹೊಣೆಗಾರಿಕೆ ವಹಿಸಲಾಗಿತ್ತು.

ಕ್ರಾಂತಿಯ ಅಲೆ ವಿದ್ಯಾರ್ಥಿಗಳನ್ನೂ ತಟ್ಟಿತ್ತು. ದೇಶಭಕ್ತರಾದ ವಿದ್ಯಾರ್ಥಿಗಳು ಅಮಿತೋತ್ಸಾಹದಿಂದ ಕ್ರಾಂತಿಕಾರಿ ಚಟುವಟಿಕೆಗಳಲ್ಲಿ ತೊಡಗಿದ್ದರು. ಕಾನಪುರದ ಡಿ.ಎ.ವಿ. ಕಾಲೇಜಿನ ಹಾಸ್ಟೆಲ್ ಕ್ರಾಂತಿಕಾರಿ ವಿದ್ಯಾರ್ಥಿಗಳ ನೆಲೆವೀಡಾಗಿತ್ತು. ಎಲ್ಲೆಡೆಯ ಚಟುವಟಿಕೆಗಳನ್ನು ಹದ್ದಿನ ಕಣ್ಣಿನಿಂದ ಗಮನಿಸುತ್ತಿದ್ದ ಶಂಭುನಾಥ, ಈ ಹಾಸ್ಟೆಲ್ ಮುಖಾಂತರವೇ ಕ್ರಾಂತಿಕಾರಿಗಳ ಚಟುವಟಿಕೆ ಹಾಗೂ ಆಜಾದರ ಚಲನವಲನ ಅರಿಯಲು ಯೋಜನೆ ಹಾಕಿದರು. ಹಣದ ಆಮಿಷ ತೋರಿಸಿ, ಕೆಲ ವಿದ್ಯಾರ್ಥಿಗಳನ್ನು ಬುಟ್ಟಿಗೆ ಹಾಕಿಕೊಂಡರು. ಪೊಲೀಸರ ಮಾಹಿತಿದಾರರಾಗುವಂತೆ ಪ್ರೇರೇಪಿಸಿದರು. ಈ ವ್ಯವಸ್ಥೆಯಿಂದ ಅವರಿಗೆ ಸಾಕಷ್ಟು ಪ್ರಯೋಜನವಾಯಿತು. ವಿದ್ಯಾರ್ಥಿಗಳಿಂದ ದೊರೆತ ಮಾಹಿತಿಯನ್ನು ಅಚ್ಚುಕಟ್ಟಾಗಿ ಮೇಲಧಿಕಾರಿಗಳಿಗೆ ರವಾನಿಸಿ ಅವರ ಮೆಚ್ಚುಗೆ ಪಡೆದರು. ಜೊತೆಗೆ ಪದೋನ್ನತಿ ಸಹ.

**ಕಲ್ಲು-ಮುಳ್ಳು**

**ಅಲ್ಲಿ ಕಲ್ಲು ಇಲ್ಲಿ ಮುಳ್ಳು**
**ಎಲ್ಲಿ ಇಡಲಿ ನನ್ನ ಕಾಲು**
**ಕಲ್ಲು ಕೆಳಗೆ ಹಾವು ಚೇಳು**
**ಮುಳ್ಳಿನೊಳಗೆ ವಿಷದ ಹಲ್ಲು**
**ಹೂವು ಕೀಳಲೇಗೆ ಹೇಳು.**

**• ಮಾಸ್ತಿ ಕೆ.ಆರ್. ಕೃಷ್ಣಪ್ಪ**

ಇದರಿಂದ ಉತ್ತೇಜಿತರಾದ ಶಂಭುನಾಥ ಕ್ರಾಂತಿಕಾರಿಗಳ ಮೂಲ ಶಿಬಿರಕ್ಕೆ ಕೈ ಹಾಕಿದರು. ದುಡ್ಡಿಗೆ ಬಾಯಿ ಬಿಡುವ ದುರ್ಬಲರು ಎಲ್ಲೆಡೆ ಇದ್ದೇ ಇರುತ್ತಾರೆ ಎಂಬ ಅವರ ಲೆಕ್ಕಾಚಾರ ಇಲ್ಲಿಯೂ ಸರಿಯಾಯಿತು. ಈ ಬಾರಿ ಶಂಭುನಾಥರ ಬಲೆಗೆ ಹಿಂದುಸ್ಥಾನ ಸೋಶಿಯಾಲಿಸ್ಟ್ ರಿಪಬ್ಲಿಕನ್ ಆರ್ಮಿಯ ಕಾರ್ಯಕಾರಿಣಿ ಸದಸ್ಯ ವೀರಭದ್ರ ತಿವಾರಿ ಬಿದ್ದರು. ಸಾಮಾನ್ಯವಾಗಿ ಆಜಾದರ ಓಡಾಟವೆಲ್ಲ ರಹಸ್ಯಪೂರ್ಣವಾಗಿರುತ್ತಿತ್ತು. ಆದರೆ ಸಂಘಟನೆಯ ಉನ್ನತ ಸಮಿತಿಯಲ್ಲಿದ್ದ ವೀರಭದ್ರ ತಿವಾರಿಗೆ ಈ ಚಲನವಲನದ ಸ್ಥೂಲ ಮಾಹಿತಿ ಇದ್ದೇ ಇರುತ್ತಿತ್ತು. ಪೊಲೀಸರ ಎಂಜಲಿಗೆ ಕೈಯೊಡ್ಡಿದ ವೀರಭದ್ರ ತಿವಾರಿ

ಎಲ್ಲ ಮಾಹಿತಿಯನ್ನು ಅವರಿಗೆ ಒದಗಿಸುತ್ತಿದ್ದರು. ಯಶಪಾಲ ಎಂಬ ಇನ್ನೊಬ್ಬ ಕ್ರಾಂತಿಕಾರಿ ಕೂಡ ಪೋಲೀಸರ 'ಹಸ್ತಕ'ರಾಗಿದ್ದರು.

ಅಲಹಾಬಾದಿನಲ್ಲಿ ಆಜಾದ ವಾಸ್ತವ್ಯದ ರಹಸ್ಯವನ್ನು ಶಂಭುನಾಥರಿಗೆ ತಿಳಿಸಿದ್ದು ಇದೇ ತಿವಾರಿ. "ಪಂಡಿತ್ ಜೀ (ಆಜಾದರನ್ನು ಹಾಗೆಂದೇ ಸಂಬೋಧಿಸಲಾಗುತ್ತಿತ್ತು) ಕಳೆದೊಂದು ವಾರದಿಂದ ಅಲಹಾಬಾದಿನಲ್ಲಿ ಇದ್ದಾರೆ" ಎಂದು ವೀರಭದ್ರ ತಿಳಿಸಿದ ತಕ್ಷಣ ಶಂಭುನಾಥ ಅಲಹಾಬಾದಿಗೆ ಹೊರಟೇಬಿಟ್ಟರು. ಸಿ.ಐ.ಡಿ. ವಿಭಾಗದ ಎಸ್.ಪಿ. ನಾಟ್‌ಬೋವರ್, ಅಲಹಾಬಾದ್ ಎಸ್.ಪಿ. ಮೇಜರ್ಸ್, ಎ.ಎಸ್.ಪಿ. ಆರ್ಕ್‌ಬೋಲ್ಡ್, ಡಿ.ವೈ.ಎಸ್.ಪಿ. ವಿಶ್ವೇಶ್ವರಸಿಂಗ್ ತುರ್ತುಸಭೆ ಸೇರಿ ಕಾರ್ಯತಂತ್ರ ರೂಪಿಸಿದರು.

ಆಜಾದ್ ಯಾರ ಮನೆಯಲ್ಲಿ ಉಳಿದುಕೊಂಡಿದ್ದಾರೆ ಎಂಬುದೂ ಪೊಲೀಸರಿಗೆ ತಿಳಿದಿತ್ತು. ಅಲ್ಲಿಗೇ ತೆರಳಿ ಅವರನ್ನು ಬಂಧಿಸುವ ಇಚ್ಛೆ ಪೊಲೀಸರಿಗೆ ಇದ್ದಿತಾದರೂ ಜಿಲ್ಲಾಧಿಕಾರಿ ನಕಾರ ಸೂಚಿಸಿದರು. ಇದಕ್ಕೆ ಎರಡು ಕಾರಣಗಳಿದ್ದವು. ಆಜಾದ್ ಹಾಗೂ ಇತರ ಕ್ರಾಂತಿಕಾರಿಗಳ ಬಳಿ ಪಿಸ್ತೂಲುಗಳಿದ್ದ ಖಚಿತ ಮಾಹಿತಿ ಇತ್ತು. ಅಲ್ಲದೆ ಆಜಾದ್ ಅದ್ಭುತ ಗುರಿಕಾರ. ಹೀಗಾಗಿ ಗುಂಡಿನ ವಿನಿಮಯದ ಸಾಧ್ಯತೆ ಹೆಚ್ಚೆಂಬುದು ಒಂದು ಕಾರಣವಾದರೆ, ಈ ಗಲಾಟೆ ಜನರ ಗಮನ ಸೆಳೆದು ಮತ್ತಷ್ಟು ಗೊಂದಲಕ್ಕೆ ಕಾರಣವಾಗಬಹುದೆಂಬ ಭೀತಿ ಇನ್ನೊಂದಾಗಿತ್ತು. ಜಿಲ್ಲಾಧಿಕಾರಿಯ ಸಲಹೆಗೆ ಪೊಲೀಸರು ಸಮ್ಮತಿಸಿದರು.

ಫೆಬ್ರುವರಿ ೨೭ರಂದು ಆಜಾದ್ ಆಲ್‌ಫ್ರೆಡ್ ಪಾರ್ಕಿಗೆ ಬರಲಿದ್ದಾರೆಂಬ ಖಚಿತ ಮಾಹಿತಿ ವಿದ್ರೋಹಿಗಳಿಂದ ಬಂದ ತಕ್ಷಣ ಪೊಲೀಸರು ಸಕಲ ಸನ್ನದ್ಧರಾಗಿ ಪಾರ್ಕಿಗೆ ಮುತ್ತಿಗೆ ಹಾಕಿದರು.

ಮುಂದಿನದು ಇತಿಹಾಸ.........

(ವಿವಿಧ ಮೂಲಗಳಿಂದ)



ನಾನು ಮೈಸೂರಿನ ಯುವರಾಜ ಕಾಲೇಜಿನಲ್ಲಿ ಓದುತ್ತಿದ್ದಾಗ ನಡೆದ ಘಟನೆ. ಕ್ಲಾಸಿಗೆ ಬಿಡುವಿದ್ದಾಗಲೆಲ್ಲ ನನಗೆ ಲೈಬ್ರರಿಗೆ ನುಸುಳಿ ಕತೆ ಕಾದಂಬರಿ ಇಲ್ಲವೆ ಮ್ಯಾಗಝೀನ್ಸ್ ಓದೋ ಹುಚ್ಚು. ಲೈಬ್ರೇರಿಯನ್ ಮಧ್ಯ ವಯಸ್ಸಿನವರು. ಪುಸ್ತಕಗಳನ್ನು ಇಶ್ಯೂ ಮಾಡುವಾಗಲೆಲ್ಲಾ ಒಂದು ಥರಾ ನಗೆ! ನಾವು ಅವರ ವಯಸ್ಸು ನೋಡಿ ಸುಮ್ಮನಿರುತ್ತಿದ್ದೆವು.

ಅಂದು ನಾನು ಲೈಬ್ರರಿಯಲ್ಲಿ ಪುಸ್ತಕ ಹುಡುಕುತ್ತಿದ್ದಾಗ ಒಬ್ಬ ಕಾಲೇಜು ಯುವಕ ಬಂದು ಲೈಬ್ರೇರಿಯನ್ ಮೇಲೆ ಕೂಗಾಡಿದ 'ರೀ.... ಮಿಸ್ಟರ್.... ಸ್ವಲ್ಪ ನಿಧಾನ... ಮೋಹಿನಿಗೆ ಫುಲ್ ಡಿಮಾಂಡ್ ಇದೆ.... ಎಲ್ಲರ ಕೈಗೂ ಸಿಕ್ಕ ಈಗ ಬಂದಿದ್ದಾಳೆ.... ಬಲು ಸೊಗಸಾಗಿದೆ. ಆದರೆ ಬಲು ಗಾತ್ರ.... ಕೈ ಹಿಡಿಗೆ ಸಿಗೋಲ್ಲ...." ಲೈಬ್ರೇರಿಯನ್ ಹೇಳುತ್ತಿದ್ದಂತೆಯೇ ನನಗೆ ಪಿತ್ತ ನೆತ್ತಿಗೇರತೊಡಗಿತು. ನೆಟ್ಟಗೆ ಅವರ ಬಳಿಹೋದೆ. 'ವಯಸ್ಸಾದರೂ ನಿಮ್ಗೆ ನಾಚಿಕೆ ಬೇಡ್ವಾ.... ಹೆಣ್ಣು ಮಕ್ಕಳೆಂದರೆ ಏನೆಂದುಕೊಂಡಿದಿರಿ...' ಅವರಿಗೆ ತಕ್ಷಣ ನನ್ನ ಹೆಸರೂ ನೆನಪಾಗಿರಬೇಕು.... 'ಓಹ್.... ಕ್ಷಮಿಸು ಮಗಳೇ... ನಾನು ಹೇಳಿದ್ದು 'ಮೋಹಿನಿ' ಬೃಹತ್ ಕಾದಂಬರಿ ಕುರಿತು. ಬಹಳ ವರ್ಷಗಳ ಹಿಂದೆ ಇನಾಂದಾರರ 'ಕನಸಿನ ಮನೆ'ಯ ನಾಲ್ಕು ಸಂಪುಟ ಈಗ 'ಮೋಹಿನಿ'ಎಂಬ ಒಂದೇ ಬೃಹತ್ ಕಾದಂಬರಿಯಾಗಿ ಪ್ರಕಟವಾಗಿದೆ. ನಿನ್ನ ಕುರಿತು ಖಂಡಿತಾ ಅಲ್ಲ' ಎಂದು ಆ ದೊಡ್ಡ ಸಂಪುಟ ತೋರಿಸಿದರು. ನನಗೆ ನಾಚಿಕೆಯಾಯಿತು.

★ ಮೋಹಿನಿರಾಜನ್

# ಸ್ನೇಹ ಸಿಂಧು ಅಮೃತ ಬಿಂದು

★ *ಶಾಂತಾದೇವಿ ಮಾಳವಾಡ*

ನನ್ನ ಆತ್ಮೀಯ ಸೋದರಿ ಚಿ.ನ. ಮಂಗಳಾ ಅವರು ೩೦-೫-೧೯೯೭ರಂದು ನಮ್ಮನ್ನಗಲಿದ ಸಮಾಚಾರ ಪತ್ರಿಕೆಯ ಮೂಲಕ ತಿಳಿದು ದುಃಖವಾಯಿತು. ಮಂಗಳಾ ಅವರ ಬಗೆಗೆ ಒಂದು ಲೇಖನ ಬರೆಯಬೇಕು ಎಂದು ಅವರ ಗ್ರಂಥಗಳನ್ನು ತಂದು ನನ್ನ ಟೇಬಲ್ ಮೇಲೆ ಇಟ್ಟುಕೊಂಡ ದಿನವೇ ದುಃಖದಾಯಕ ವಾರ್ತೆ ತಿಳಿದುದರಿಂದ ಮನ ನೊಂದಿತು. ನಾಲ್ಕು ದಿನ ಬರೆಯುವ ಮನಸ್ಸಾಗಲಿಲ್ಲ. ನನ್ನ ನುಡಿ-ಪುಷ್ಪ ಸೋದರಿಯ ಆತ್ಮಕ್ಕೆ ಅರ್ಪಿತವಾಗಲಿ ಎಂದು ಬರೆಯಲು ಕುಳಿತಿರುವೆ.

ಮಂಗಳಾ ಅವರಂಥ ವ್ಯಕ್ತಿ ದೊರೆಯುವುದು ದುರ್ಲಭ. ಅವರು ಪ್ರತಿಭೆ, ಪಾಂಡಿತ್ಯದ ಆಗರವಾಗಿದ್ದರು. ತ್ಯಾಗ, ಸೇವಾಭಾವನೆಯ ಸಾಗರವಾಗಿದ್ದರು, ಮಾನವೀಯತೆಯೇ ಮೈವೆತ್ತಿದಂತಿದ್ದರು. ಸದಾ ಶಿಕ್ಷಣಕ್ಷೇತ್ರದ ಅಭಿವೃದ್ಧಿ, ಮಹಿಳೆಯರ ಏಳಿಗೆಯನ್ನು ಕುರಿತೇ ಯೋಚಿಸುತ್ತಿದ್ದರು. ಅಜ್ಞಾನ, ಮೂಢನಂಬಿಕೆ, ಸ್ತ್ರೀಶೋಷಣೆಯ ವಿರುದ್ಧ ಹೋರಾಟವನ್ನೇ ನಡೆಸಿದರು.

ನಾನು ಚಿ.ನ. ಮಂಗಳಾ ಅವರನ್ನು ಹಲವಾರು ಸಲ ಸಭೆ ಸಮ್ಮೇಳನಗಳಲ್ಲಿ ಭೇಟಿಯಾಗಿದ್ದೆ, ಪ್ರಿ. ಗೋಕಾಕರ ಮನೆಯಲ್ಲಿ



ಎರಡು ಸಲ ಭೇಟಿಯಾಗಿದ್ದೆ. ಆ ಪರಿಚಯ ಕೆಲ ವರ್ಷಗಳಲ್ಲಿ ಸ್ನೇಹವಾಗಿ ಬೆಳೆಯಿತು, ಪರಸ್ಪರ ಪ್ರೀತಿ, ಅಂತಃಕರಣೆಯ ಬೆಸುಗೆ ಸ್ನೇಹದಲ್ಲಿತ್ತು, ಮಂಗಳಾ ನನ್ನನ್ನು ಹಿರಿಯಳೆಂದು ಗೌರವಿಸುತ್ತಿದ್ದರು.

ಆದರೆ ನಾನು ಮಾತ್ರ ಅವರನ್ನು ತಂಗಿ, ಸ್ನೇಹಿತೆ ಎಂದೇ ಭಾವಿಸಿದ್ದೆ. "ಗೆಳೆತನ ದೇವರ ಅನುಪಮ ಸೃಷ್ಟಿ" ಎಂಬ ಮಾತು ಮಂಗಳಾ ಅವರ ವಿಷಯದಲ್ಲಿ ಅಕ್ಷರಶಃ ನಿಜವಾಗಿತ್ತು. ಗೆಳೆತನಕ್ಕೆ ಮೂಲವಾದದ್ದು ಸಮಾನ ಮನೋಧರ್ಮ, ವೈಚಾರಿಕ ಸಾಮ್ಯ ಹಾಗೂ ನಿಃಸ್ವಾರ್ಥ ಸ್ನೇಹ. ಸ್ನೇಹ ಪರಿಶುದ್ಧವಾಗಿದ್ದರೆ ಚಿರಕಾಲ ಉಳಿಯುತ್ತದೆ. ಸ್ನೇಹದಲ್ಲಿ ಫಲಾಪೇಕ್ಷೆ ಇರಕೂಡದು. ಸ್ವಾರ್ಥಕ್ಕಾಗಿ

ಸ್ನೇಹವನ್ನು ಬೆಳೆಸಿಕೊಂಡರೆ ಅದು ವ್ಯಾಪಾರವಾಗುವುದು. ನನ್ನ ಹಾಗೂ ಮಂಗಳಾ ಅವರ ಮಧ್ಯೆ ಬೆಳೆದ ಸ್ನೇಹ 'ದೇವರ ಅನುಪಮ ಸೃಷ್ಟಿ'ಯಾಗಿತ್ತು; ಸ್ನೇಹ ಸಂಪತ್ತೇ ತಮ್ಮ ಬಾಳಿನ ಸಂಜೀವಿನಿ ಎಂದು ನಂಬಿದ್ದ ಮಂಗಳಾ ಸ್ನೇಹಸಂಪತ್ತನ್ನು ನಮಗಿತ್ತು ಈ ಜಗತ್ತಿನಿಂದ ಹೊರಟು ಹೋದರು.

ನರಸಿಂಹಮೂರ್ತಿಯವರು ಹಿರಿಯ ಐ.ಎ.ಎಸ್. ಅಧಿಕಾರಿಗಳು. ದಕ್ಷ ಆಡಳಿತಗಾರರು. ಅವರು ಲಂಚಕ್ಕೆ ಕೈಯೊಡ್ಡಿದವರಲ್ಲ. ವಂಚನೆಯಿಂದಂತೂ ಗಾವುದದಷ್ಟು ದೂರ. ರಾಜೇಶ್ವರಿ ಅವರ ಪತ್ನಿ. ಸುಶಿಕ್ಷಿತರು, ಸುಸಂಸ್ಕೃತರು. ಹಿಂದಿನ ತಲೆಮಾರಿನ ಲೇಖಕಿಯಾದ ಅವರು 'ಬೆಳದಿಂಗಳ ರಾತ್ರಿ', 'ಗುಲಾಬಿ ಹೂ' ಎಂಬ ಕಥಾ ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಅವರ ಮಾತೃಭಾಷೆ ತೆಲುಗು; ಆದರೆ ಕನ್ನಡ, ಇಂಗ್ಲೀಷುಗಳನ್ನು ಚೆನ್ನಾಗಿ ಬಲ್ಲವರಾಗಿದ್ದರು. ಸಾಂಪ್ರದಾಯಿಕ ಧಾರ್ಮಿಕ ದೃಷ್ಟಿಯೊಂದಿಗೆ ಆಧುನಿಕ ಜೀವನಕ್ಕೆ ಹೊಂದಿಕೊಂಡಿದ್ದರು. ಭಕ್ತಿಗೀತೆಗಳನ್ನು ರಚಿಸಿ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಕನ್ನಡದಲ್ಲಿ 'ಸ್ತೋತ್ರಾವಳಿ' ತೆಲುಗಿನಲ್ಲಿ 'ಸ್ತುತಿ ಪಾಟಲು' ಗೀತ ಸಂಗ್ರಹಗಳನ್ನು ಪ್ರಕಟಿಸಿದ್ದರು. ಬ್ಯಾಡ್ಮಿಂಟನ್ ಆಟಗಾರ್ತಿಯಾಗಿದ್ದರು, ಅನೇಕ ಸಂಘ-ಸಂಸ್ಥೆಗಳ ಸದಸ್ಯೆಯಾಗಿ ಸಾಮಾಜಿಕ ಕಾರ್ಯಗೈಯ್ಯುತ್ತಿದ್ದರು. ಅವರಿಬ್ಬರೂ ಆದರ್ಶ ದಂಪತಿಗಳೆನಿಸಿದ್ದರು. ಸದಾಶಿವ ನಗರದಲ್ಲಿ "ಮಾಹೇಶ್ವರಿ ಪ್ರಸಾದ" ಎಂಬ ಸುಂದರವಾದ ಮನೆ ಕಟ್ಟಿಸಿದರು. ಸುತ್ತಲೂ ಹೂದೋಟ ಕಂಗೊಳಿಸುತ್ತಿತ್ತು. ಅವರ ಆಶೋತ್ತರಗಳೇ ಹೆಣ್ಣು ರೂಪ ಧರಿಸಿ ೧೯೩೩ರ ಎಪ್ರಿಲ್ ಹತ್ತರಂದು ಜನಿಸಿದ ಮಂಗಳಾ, ಹುಟ್ಟಿದ ಮನೆಗೆ ಮಾತ್ರ ಮಂಗಳದಾಯಿನಿಯಾಗಿರದೆ ಕನ್ನಡ ನಾಡಿಗೆ, ಶಿಕ್ಷಣ ಕ್ಷೇತ್ರಕ್ಕೆ, ಮಹಿಳಾ ಕುಲಕ್ಕೆ ಮಂಗಳದಾಯಿನಿಯಾಗಿದ್ದರು.

ಸಾಹಿತ್ಯಪ್ರಿಯರಾದ ನರಸಿಂಹಮೂರ್ತಿಗಳು ಮಕ್ಕಳ ಹುಟ್ಟಿದಹಬ್ಬಕ್ಕೆ ಪುಸ್ತಕಗಳನ್ನೇ ಕಾಣಿಕೆಯಾಗಿ ಕೊಡುತ್ತಿದ್ದರಂತೆ. ಇಂಗ್ಲೀಷ್ ತೆಗೆದುಕೊಂಡು ಎಂ.ಎ. ಆದ ಮಂಗಳಾ ಕನ್ನಡದ ಕಟ್ಟಾಭಿಮಾನಿಯಾಗಿದ್ದರು. ಎಂ.ಎ. ಆದೊಡನೆ ಉದ್ಯೋಗಸ್ಥಳಾಗಬೇಕು ಎಂದು ಮಂಗಳಾ ಆಶಿಸಿದರು. ಅವರ ತಂದೆ, ಮಗಳನ್ನು 'ಸಂಯುಕ್ತ ಕರ್ನಾಟಕ' ಕಾರ್ಯಾಲಯಕ್ಕೆ ಕರೆದೊಯ್ದು ದಿವಾಕರ ರಂಗರಾಯರನ್ನು ಪರಿಚಯಿಸಿದರು. ಅವರು 'ನಾಳೆಯಿಂದ ಕೆಲಸಕ್ಕೆ ಬನ್ನಿರಿ' ಎಂದರಂತೆ. ಈ ಸಂತೋಷದ ಸಮಾಚಾರ ತಿಳಿಸಲು ತಮ್ಮ ಪ್ರಾಧ್ಯಾಪಕರ ಮನೆಗೆ ಮಂಗಳಾ ಹೋದಾಗ ಅವರು, "ಆಚಾರ್ಯ ಪಾಠಶಾಲೆಗೆ ಇಂಗ್ಲೀಷ್ ಅಧ್ಯಾಪಕರು ಬೇಕು; ನಾಳೆಯಿಂದ ಬಾ," ಎಂದರಂತೆ. ತಮ್ಮ ಪ್ರೀತಿಯ ಅಧ್ಯಾಪಕವೃತ್ತಿಯನ್ನೇ ಮಂಗಳಾ ಆಯ್ದುಕೊಂಡರು. ವಿದ್ಯಾರ್ಥಿ ದೆಸೆಯಿಂದಲೂ ನಾಟಕವನ್ನಾಡುವ ಹವ್ಯಾಸ ಮಂಗಳಾ ಅವರಿಗಿತ್ತಂತೆ. ಈಗ ಅವರು ವಿದ್ಯಾರ್ಥಿಗಳಿಂದ ನಾಟಕವನ್ನು ಆಡಿಸಹತ್ತಿದರು. ಆ ವೇಳೆಗೆ ಅವರ ತಂದೆ ಹೃದಯಾಘಾತದಿಂದ ಮರಣ ಹೊಂದಿದರು. ಮನೆಯ ಹಿರಿಯ ಮಗಳಾದ ಮಂಗಳಾ ಮನೆಯ ಹೊಣೆಗಾರಿಕೆ ಹೊತ್ತುಕೊಂಡರು. ನ್ಯಾಶನಲ್ ಕಾಲೇಜಿನ ಕೆಲಸ ಬಿಟ್ಟರು. ಬೇರೆ ಕೆಲಸ ಹುಡುಕುವ ವೇಳೆಗೆ ತಂದೆಯ ಹೆಸರಿನಲ್ಲಿ "ಸಾಹಿತ್ಯ ಸಂಸ್ಕೃತಿ ಕಲಾ ಕೇಂದ್ರ"ವನ್ನು ಪ್ರಾರಂಭಿಸಿದರು. ಡಾ. ಎಚ್. ನರಸಿಂಹಯ್ಯನವರು ಮಂಗಳಾ ಅವರಿಗೆ ಫೋನ್ ಮಾಡಿ, "ರಾಷ್ಟ್ರೀಯ ವಿದ್ಯಾಲ

ಯದವರು ಹೆಣ್ಣು ಮಕ್ಕಳಿಗಾಗಿ ಕಾಲೇಜು ತೆರೆಯುತ್ತಾರೆ, ಪ್ರಿನ್ಸಿಪಲ್ ಜಾಗೆಗೆ ನಿಮ್ಮ ಹೆಸರು ಸೂಚಿಸಿರುವೆ," ಎಂದು ಹೇಳಿದಾಗ, "ಆಡಳಿತದ ಅನುಭವವಿಲ್ಲದ ನನಗೆ ಆ ಕಾರ್ಯ ನಿರ್ವಹಿಸಲು ಸಾಧ್ಯವೆ? ಎಂದೆನಿಸಿತು. ವಿಚಾರ ಮಾಡಿ ಕೊನೆಗೆ ಒಪ್ಪಿಕೊಂಡೆ" ಎಂದು ಒಂದೆಡೆ ಹೇಳಿದ್ದಾರೆ.

೧೯೭೧ರಲ್ಲಿ ಎನ್.ಎಂ.ಕೆ.ಆರ್.ವಿ. ಕಾಲೇಜಿನ ಪ್ರಿನ್ಸಿಪಲ್ ಆದರು. ಅಂದಿನಿಂದ ಮಂಗಳಾ ಎಲ್ಲರಿಗೂ ಅಚ್ಚುಮೆಚ್ಚಿನ ಸಿ.ಎನ್.ಎಮ್. ಎಂದೇ ಪ್ರಸಿದ್ಧರಾದರು. ಆಡಳಿತವರ್ಗದ ಕಸ್ತೂರಿರಂಗ ಶೆಟ್ಟರು, ಕಾರ್ಯದರ್ಶಿ ಪಾಂಡು ಅವರು ಮಂಗಳಾ ಅವರಿಗೆ, "ನೀವು ಕಾಲೇಜನ್ನು ಚೆನ್ನಾಗಿ ಅಭಿವೃದ್ಧಿಪಡಿಸಿರಿ. ನಿಮಗೆ ಬೇಕಾದ ನೆರವನ್ನು ಕೊಡುತ್ತೇವೆ. ವಿದ್ಯಾರ್ಥಿನಿಯರಿಗೆ ಒಳ್ಳೆ ಶಿಕ್ಷಣ ಕೊಡಿರಿ. ನಾವು ನಿಮ್ಮ ಯಾವ ಕೆಲಸದಲ್ಲೂ ತಲೆತೂರಿಸುವುದಿಲ್ಲ. ಹೊಣೆಗಾರಿಕೆಯೇ ನಿಮ್ಮದ್ರೆ," ಎಂದು ಹೇಳಿದರು. ಆಡಳಿತ ಮಂಡಳಿಯವರು ಕೊಟ್ಟ ಮಾತಿನಂತೆ ನಡೆದರು. ಕಾಲೇಜಿನ ಅಭಿವೃದ್ಧಿಗಾಗಿ ಮಂಗಳಾ ಗಂಧದ ಕೊರಡಿನಂತೆ ತಮ್ಮ ಜೀವವನ್ನು ಸವೆಸಿದರು. ಕೆಲವೇ ಕೋಣೆಗಳಲ್ಲಿ ಬರಿ ೧೫೦ ವಿದ್ಯಾರ್ಥಿನಿಯರಿಂದ ಪ್ರಾರಂಭವಾದ ಮಹಿಳಾ ಕಾಲೇಜು ಈಗ ಜಯನಗರ ಮೂರನೇ ಬ್ಲಾಕಿನಲ್ಲಿ ವಿಶಾಲವಾದ ಸ್ವಂತ ಕಟ್ಟಡವನ್ನು ಹೊಂದಿದೆ. ಮೂರುಸಾವಿರಕ್ಕಿಂತ ಹೆಚ್ಚು ವಿದ್ಯಾರ್ಥಿನಿಯರು ಓದುತ್ತಿದ್ದಾರೆ. ಎನ್.ಎಂ.ಕೆ.ಆರ್.ವಿ. ಕಾಲೇಜು ಕರ್ನಾಟಕದ ಶ್ರೇಷ್ಠ ಕಾಲೇಜುಗಳಲ್ಲಿ ಒಂದಾಗಿದೆ. ಇದಕ್ಕೆ ಕಾರಣ ಆಡಳಿತವರ್ಗದ ಸಹಕಾರ, ಚಿ.ನ.ಮಂಗಳಾ ಅವರ ಆಡಳಿತ ಹಾಗೂ ಸೇವಾಭಾವನೆ ಮತ್ತು ಪ್ರತಿಭಾವಂತ ಪ್ರಾಧ್ಯಾಪಕ ವರ್ಗ. ಈ ತ್ರಿವೇಣಿ ಸಂಗಮದಲ್ಲಿ ಮಿಂದು ದೀಕ್ಷೆ ಪಡೆದ ವಿದ್ಯಾರ್ಥಿನಿಯರು ಆದರ್ಶ ಜೀವಿಗಳಾಗಿದ್ದಾರೆ, ಕಾಲೇಜಿನ ವಾತಾವರಣವೇ ಶಾಂತಿದಾಯಕವಾಗಿದೆ.

ಹಲವಾರು ವರ್ಷಗಳಿಂದ ಚಿ.ನ. ಮಂಗಳಾ ಅವರ ಕಾಲೇಜನ್ನೂ 'ಶಾಶ್ವತಿ' ವಸ್ತುಸಂಗ್ರಹಾಲಯವನ್ನೂ ನೋಡುವ ಆಶೆಯಿತ್ತು. ಕಸೂತಿ ಸೀರೆ, ಹಲವಾರು ಕುಶಲ ಕೈಗೆಲಸದ ವಸ್ತುಗಳನ್ನು, ಪುಸ್ತಕಗಳನ್ನು ಅಲ್ಲಿಗೆ ಕಳಿಸಿದ್ದೆ. ಆದರೆ ನನಗೆ ಅಲ್ಲಿಗೆ ಹೋಗುವುದಾಗಿರಲಿಲ್ಲ. ಆ ಸಮಯ ೧೯೯೦ರಲ್ಲಿ ಒದಗಿಬಂತು. ಆಗ ಆತ್ಮೀಯ ಸ್ನೇಹಿತೆಯರೊಂದಿಗೆ ಹೋದೆ. ಕಾಲೇಜಿನ ಆವರಣದೊಳಗೆ ಪ್ರವೇಶಿಸಿದೊಡನೆ ಕಣ್ಣಿಗೆ ತಂಪನ್ನೆರೆಯುವ ಹೂದೋಟ, ಸುತ್ತಲೂ ಭವ್ಯವಾಗಿ ಬೆಳೆದ ಗಿಡ, ಮರ, ಬಳ್ಳಿಗಳು, ಶಾಂತ ವಾತಾವರಣ, ಋಷ್ಯಾಶ್ರಮದಲ್ಲಿ ಪ್ರವೇಶಿಸಿದ ಅನುಭವ. ಪ್ರಿನ್ಸಿಪಾಲರ ಕೋಣೆಯಲ್ಲಿ ಕಾಲಿರಿಸಿದೆವು. ಚಿ.ನ. ಮಂಗಳಾ ಅವರದು ಹೆಚ್ಚು ಎತ್ತರವಲ್ಲದ ನಿಲುವು, ನಡುವೆ ಬೈತಲೆ ತೆಗೆದು ಬಾಚಿಕೊಂಡು ಹಾಕಿಕೊಂಡ ಜಡೆ, ಹೊಳೆವ ದೊಡ್ಡ ದೊಡ್ಡ ಕಣ್ಣುಗಳು, ತಿದ್ದಿ ತೀಡಿದಂತಿದ್ದ ಹುಬ್ಬು, ವಿಶಾಲವಾದ ಹಣೆಯಲ್ಲಿ ದೊಡ್ಡ ಕುಂಕುಮ, ಮಲ್ಲಿಗೆಯ ಮೈಬಣ್ಣ, ನಿರಾಭರಣ ಸುಂದರಿ. ಶ್ವೇತಾಂಬರಿಯಾದ ಅವರನ್ನು ಕಂಡೊಡನೆ ತಪಸ್ವಿನಿಯನ್ನು ಕಂಡ ಭಾವನೆಯುಂಟಾಯಿತು. ಕಾರ್ಯಮಗ್ನರಾಗಿದ್ದ ಮಂಗಳಾ ನನ್ನನ್ನು ಕಂಡೊಡನೆ ಎದ್ದುಬಂದು ನಗುಮುಖದಿಂದ ಸ್ವಾಗತಿಸಿದರು. " 'ಶಾಶ್ವತಿ'ಯನ್ನು ನೋಡಲು ಬಂದಿದ್ದೇವೆ," ಎಂದೆ. ವಸ್ತುಸಂಗ್ರಹಾಲಯವನ್ನು ತೋರಿಸಲು ಸ್ವತಃ ತಾವೇ

ನಮ್ಮೊಂದಿಗೆ ಬಂದರು.

### ಶಾಶ್ವತ 'ಶಾಶ್ವತಿ'

ಭಾರತದಲ್ಲಷ್ಟೆ ಏಕೆ, ಜಗತ್ತಿನಲ್ಲೆ ಪ್ರಥಮ ಮಹಿಳಾ ವಸ್ತುಸಂಗ್ರಹಾಲಯವನ್ನು ಸ್ಥಾಪಿಸಿದ ಶ್ರೇಯಸ್ಸು ಅವರದು. 'ಶಾಶ್ವತಿ' ಮಂಗಳಾ ಅವರ ಹೆಸರನ್ನು ಶಾಶ್ವತಗೊಳಿಸಿದೆ. ಕಟ್ಟಿಗೆಯ ಕಾಮಧೇನು 'ಶಾಶ್ವತಿ'ಯ ಲಾಂಛನ. ಕಾಮಧೇನು ಹೆಣ್ಣಿನ ಸಂಕೇತ. ಲಲಿತಾ ಸಹಸ್ರದಲ್ಲಿ ಬರುವ ದೇವಿಯ ಹೆಸರು 'ಶಾಶ್ವತಿ'.ಆಕೆ ಬ್ರಹ್ಮವಾದಿನಿ.

ಮಂಗಳಾ ಇದನ್ನೆಲ್ಲ ಕೂಲಂಕಷವಾಗಿ ವಿಚಾರಿಸಿ 'ಶಾಶ್ವತಿ'ಎಂಬ ಹೆಸರನ್ನು ವಸ್ತುಸಂಗ್ರಹಾಲಯಕ್ಕೆ ಇಡಬೇಕೆಂದು ನಿರ್ಧರಿಸಿದರು. ವಸ್ತುಗಳನ್ನು ಸಂಗ್ರಹಿಸುವ ಬಗೆಗೆ ಹಲವಾರು ತಿಂಗಳು ಯೋಚನೆ ಮಾಡಿ, ಯೋಜನೆಯನ್ನು ಸಿದ್ಧಗೊಳಿಸಿದರು. ಪಾದಯಾತ್ರೆಗೆ ಬರಲು ಆತ್ಮೀಯ ಲೇಖಕಿಯರಿಗೆ ಪತ್ರ ಬರೆದರು. ಅನುಪಮಾ, ಎಂ.ಕೆ.ಇಂದಿರಾ, ಸುನಂದಮ್ಮ, ಲೋಕಸುಂದರಿ ಪಾರ್ವತಿ, ಕುಲಶೇಖರಿ ಮೊದಲಾದ ಹಿರಿಕಿರಿಯರೊಂದಿಗೆ ಪಾದಯಾತ್ರೆಗೆ ಸಿದ್ಧರಾದರು. ಎಲ್ಲರಿಗೂ ಸಂಗ್ರಹಿಸಿದ ವಸ್ತುಗಳನ್ನು ಹಾಕಲು ಬಗಲ ಚೀಲಗಳನ್ನು ಹಿರಿಯ ಶಾಸಕಿ ನಾಗರತ್ನಮ್ಮ ಕೊಟ್ಟರು.

ಮಂಗಳಾ ಅವರ ನೇತೃತ್ವದಲ್ಲಿ ಪ್ರಾಧ್ಯಾಪಕಿಯರು-ವಿದ್ಯಾರ್ಥಿನಿಯರು, ಲೇಖಕಿಯರು ಉತ್ಸಾಹದಿಂದ ಪಾದಯಾತ್ರೆಯನ್ನು ಮಲ್ಲೇಶ್ವರಂ, ಬಸವನಗುಡಿಯಿಂದ ಪ್ರಾರಂಭಿಸಿದರು. ಅಂದು ರಾಶಿ ರಾಶಿ ವಸ್ತುಗಳ ಸಂಗ್ರಹವಾಯಿತು.

ಮೊದಲು ಕಾಲೇಜು ಅಟ್ಟದ ಮೇಲೆ ಇದ್ದ ವಸ್ತು ಸಂಗ್ರಹಾಲಯ ಈಗ ಸ್ವಂತ ಕಟ್ಟಡಕ್ಕೆ ಬಂದಿದೆ. ಆಡಳಿತ ವರ್ಗದವರು ಲಕ್ಷಗಟ್ಟಲೆ ಹಣ ಖರ್ಚುಮಾಡಿ ಸುಂದರವಾದ, ವಿಶಾಲವಾದ ಕಟ್ಟಡವನ್ನು ಕಟ್ಟಿಸಿಕೊಟ್ಟಿದ್ದಾರೆ. ನಾಲ್ಕುಸಾವಿರಕ್ಕಿಂತ ಹೆಚ್ಚು ವಸ್ತುಗಳನ್ನು ವಿಂಗಡಿಸಿ ವ್ಯವಸ್ಥಿತವಾಗಿ ಹೊಂದಿಸಿ ಇಡಲು ಪ್ರಾಧ್ಯಾಪಿಕೆಯರು, ಸಿಬ್ಬಂದಿವರ್ಗದವರು ಬಹಳ ಶ್ರಮಪಟ್ಟಿದ್ದಾರೆ. ಇಂದಿನ ಯಾಂತ್ರಿಕ ಯುಗದಲ್ಲಿ ಉಪಯೋಗವಿಲ್ಲದೆ ಮೂಲೆಗೆ ಬಿದ್ದ ಅಡಿಗೆಮನೆ ವಸ್ತುಗಳಿಗೂ ಇಲ್ಲಿ ಸರಿಯಾದ ಸ್ಥಾನವನ್ನು ಮಂಗಳಾ ಕಲ್ಪಿಸಿದ್ದಾರೆ. ವರ್ಣಚಿತ್ರಗಳು, ತಾಮ್ರ-ಹಿತ್ತಾಳೆಗಳ ವೈವಿಧ್ಯಮಯ ಪಾತ್ರೆಗಳು, ಕಲಾಪೂರ್ಣ ಅಡಕೊತ್ತುಗಳು, ದಸರಾ ಗೊಂಬೆಗಳು, ಗೊಂಬೆಗಳಿಂದ ರೂಪುಗೊಂಡ ಅನುಭವ ಮಂಟಪ, ವರ್ಣಚಿತ್ರಗಳು.... ಒಂದೇ ಎರಡೇ ಎಲ್ಲವೂ ಕಲಾಪೂರ್ಣವಾಗಿವೆ. ಇಂಥ ಒಂದು ಅಮೌಲ್ಯ ವಸ್ತು ಸಂಗ್ರಹಾಲಯವನ್ನು ಖಾಸಗಿ ಶಿಕ್ಷಣ ಸಂಸ್ಥೆ ನಡೆಸುತ್ತಿರುವುದು ಸಾಮಾನ್ಯ ಕೆಲಸವಲ್ಲ, ಮಂಗಳಾ ಈ ಕಾರ್ಯದ ಕೇಂದ್ರಬಿಂದುವಾಗಿದ್ದರು.

ಮಹಿಳಾ ಕಾಲೇಜು ಹಾಗೂ ವಸ್ತುಸಂಗ್ರಹಾಲಯವನ್ನು ಅಭಿವೃದ್ಧಿಗೊಳಿಸಿದ ಮಂಗಳಾ ಅವರು ಈ ಶತಮಾನದ ಮೊದಲ ಲೇಖಕಿ ತಿರುಮಲಾಂಬಾ ಅವರ ಹೆಸರನ್ನು ಶಾಶ್ವತಗೊಳಿಸುವ ಕಾರ್ಯಕ್ಕೆಗೊಂಡರು.

ಯಾವುದೋ ಸಂದರ್ಭದಲ್ಲಿ ಅವರು ತಿರುಮಲಾಂಬಾ ತೀರಿಕೊಂಡಿದ್ದಾರೆ ಎಂಬುದನ್ನು ಕೇಳಿದ್ದರು-ಒಂದೆಡೆ ಮರಣ ಹೊಂದಿದವರ ಸಾಲಿನಲ್ಲಿ ಅವರ ಹೆಸರು ಇತ್ತಂತೆ. ಬೆಂಗಳೂರಿನ ಸಾಹಿತಿಗಳನ್ನು ತಿರುಮಲಾಂಬಾ ಅವರ ಬಗೆಗೆ ಕೇಳಿದಾಗ ಇತ್ತೀಚೆಗೆ ಅವರ ಸಮಾಚಾರವೇ ಗೊತ್ತಿಲ್ಲ ಎಂದರಂತೆ. ಕಥೆ, ಕವನ, ಕಾದಂಬರಿಗಳನ್ನು ಬರೆದುದಲ್ಲದೆ ಪತ್ರಿಕೆಯನ್ನೂ ಹೊರಡಿಸಿದಂಥ

ಹಿರಿಯ ಲೇಖಕಿಯ ಬಗೆಗೆ ನಮಗೇನೂ ಗೊತ್ತಿಲ್ಲವಲ್ಲ ಎಂದು ಮಂಗಳಾ ಕೆಡಕೆನಿಸಿ ಕೊಂಡಾಗ, ತಿರುಮಲಾಂಬಾ ಬದುಕಿದ್ದಾರೆ; ಮದ್ರಾಸಿನಲ್ಲಿ ಬಳಗದವರ ಮನೆಯಲ್ಲಿ ಇದ್ದಾರೆ ಎಂದು ಗೊತ್ತಾಯಿತು. ತಕ್ಷಣ ಮಂಗಳಾ ಮದ್ರಾಸಿಗೆ ತೆರಳಿ ತಿರುಮಲಾಂಬಾ ಇದ್ದ ಮನೆಗೆ ಹೋದರು. ಅವರಿಗೆ ಶಾಲು ಹೊದಿಸಿ, ಹೂಮಾಲೆ ಹಾಕಿ, ಹಣ್ಣಿನ ತಟ್ಟೆ ಕೊಟ್ಟು ಸತ್ಕರಿಸಿ, ನಮಸ್ಕರಿಸಿ ಬಂದರು. ಮಂಗಳಾ ಅವರಂಥ ವಿಶಾಲ ಮನೋಭಾವದವರು ಈಗ ದೊರೆಯಬಹುದೆ ?

ಈ ಅನುಭವದಿಂದ ನಮ್ಮ ಮಹಿಳೆಯರ ಜೀವನ, ಬರಹ, ಸಾಧನೆ, ಸಂಸ್ಕೃತಿ ಹೀಗಾಗ ಬಾರದು ಎಂದು ಪಣತೊಟ್ಟು ನಾವು 'ಶಾಶ್ವತಿ'ಯನ್ನು ಆರಂಭಿಸಿದ್ದೇವೆ ಎಂದು ಮಂಗಳಾ ಬರೆದಿದ್ದಾರೆ.

ತಿರುಮಲಾಂಬಾ ಕುರಿತು ಮಂಗಳ ಗ್ರಂಥ ರಚಿಸಿದ್ದಾರೆ. ಅವರ ಶತಮಾನೋತ್ಸವವನ್ನು ಅವರ ಹುಟ್ಟಿದ ಊರಾದ ನಂಜನಗೂಡಿನಲ್ಲಿ ವೈಭವದಿಂದ ಆಚರಿಸಿದರು. ನಾಡಿನ ಹಲವಾರು ಸ್ಥಳಗಳಲ್ಲಿ ತಿರುಮಲಾಂಬಾ ಶತಮಾನೋತ್ಸವ ನಡೆದಾಗ ತುಂಬಾ ಸಂತೋಷಪಟ್ಟರು. ತಿರುಮಲಾಂಬಾ ಅವರ ಹೆಸರಿನಲ್ಲಿ ಇಪ್ಪತ್ತುಸಾವಿರ ರೂಪಾಯಿಗಳ ಪ್ರಶಸ್ತಿ ಹಾಗೂ ಕಾಮಧೇನುವಿನ ಪ್ರತಿಮೆಯನ್ನು ಒಳಗೊಂಡ ರಾಷ್ಟ್ರಮಟ್ಟದ ಪ್ರಶಸ್ತಿಯನ್ನು ಲೇಖಕಿಯರಿಗೆ ಪ್ರತಿವರ್ಷ ಕೊಡುತ್ತಿದ್ದಾರೆ. ಈಗಾಗಲೇ ಎಂಟು ಪ್ರಾಂತಗಳ ಲೇಖಕಿಯರಿಗೆ ಪ್ರಶಸ್ತಿ ದೊರೆತಿದೆ. ಕನ್ನಡದಲ್ಲಿ ಅನುಪಮಾ ನಿರಂಜನರಿಗೆ ತಿರುಮಲಾಂಬಾ ಪ್ರಶಸ್ತಿ ದೊರೆತಿದೆ.

ಇದಲ್ಲದೆ 'ಸರೋದಿತಾ', 'ಕರ್ನಾಟಕ ಕಲ್ಪವಲ್ಲಿ' ಪ್ರಶಸ್ತಿಗಳನ್ನು ಮಹಿಳೆಯರಿಗಾಗಿ ಇಟ್ಟಿದ್ದಾರೆ. ಮಹಿಳೆಯರಿಗಾಗಿ ಸಾಯಂಕಾಲ ಡಿಪ್ಲೊಮಾ ತರಗತಿಗಳನ್ನು ನಡೆಸುತ್ತಿದ್ದಾರೆ. ಬೇಕರಿ ಪದಾರ್ಥಗಳನ್ನು, ಗೃಹೋದ್ಯೋಗಕ್ಕೆ ಉಪಯೋಗವಾಗಬಲ್ಲ ಹಲವಾರು ವಿಷಯಗಳನ್ನು ಕಲಿತು ಡಿಪ್ಲೊಮಾ ಪಡೆದ ಮಹಿಳೆ ಮನೆಯಲ್ಲಿ ಬಿಡುವಿನ ವೇಳೆಯಲ್ಲಿ ಕೆಲಸ ಮಾಡಿ ಹಣ ಗಳಿಸಬಹುದಾಗಿದೆ. ಬಾಯಿಂದ ಬರಿ ಸ್ತ್ರೀ ಶೋಷಣೆಯ ಬಗೆಗೆ ಮಾತನಾಡದೆ ಆಕೆಗೆ ಅವಶ್ಯವಾದ ಆರ್ಥಿಕ ಭದ್ರತೆಯ ಮಾರ್ಗವನ್ನು ಈ ಯೋಜನೆಯ ಮೂಲಕ ಒದಗಿಸಿಕೊಟ್ಟಿದ್ದಾರೆ.

'ಸಮನ್ವಿತಾ' ಮಹಿಳಾ ಅಧ್ಯಯನದ ಮೂಲಕ ಮಂಗಳಾ ಮಾಡಿದ ಪ್ರಕಟಣೆಯ ಕಾರ್ಯ ಮಹತ್ವದ್ದಾಗಿದೆ. ಲೇಖಕಿಯರ ಕೈಪಿಡಿಯಾದ 'ಕರ್ನಾಟಕದ ಮಹಿಳೆಯರು' ೧೯೯೦ರಲ್ಲಿ ಪ್ರಕಟವಾಗಿದೆ. ಸಾಮಾಜಿಕ ಕಾರ್ಯಕರ್ತೆಯರು ಹಾಗೂ ಕಲಾವಿದೆಯರನ್ನು ಕುರಿತು ಗ್ರಂಥಗಳು ಸಿದ್ಧವಾಗುತ್ತಿವೆ. `Image of Woman in Indian Literature' ಹಾಗೂ `Beyond the threshold' ಮೌಲಿಕ ಗ್ರಂಥಗಳಲ್ಲದೆ ಪ್ರಾಧ್ಯಾಪಿಕೆಯರ ಗ್ರಂಥಗಳೂ ಪ್ರಕಟವಾಗಿವೆ. ದಶಮಾನೋತ್ಸವ ಕಾಲಕ್ಕೆ 'ಸುಶೋಭಿತಾ','ವಾರ್ತಾವಾಹಿನಿ'ಹಾಗೂ ದ್ವಿದಶಮಾನೋತ್ಸವ ಕಾಲಕ್ಕೆ ಪ್ರಕಟವಾದ ಬೃಹತ್ ಸಂಚಿಕೆ 'ಸೌಪರ್ಣಿಕಾ' ಮಂಗಳಾ ಅವರು ಮಾಡಿದ ಕೆಲಸಗಳ ಕೈಗನ್ನಡಿಯಂತಿವೆ. ಗಾತ್ರ, ಪಾತ್ರಗಳಲ್ಲಿ ಹಿರಿದಾಗಿವೆ.

ವಸ್ತುಸಂಗ್ರಹಾಲಯದ ಇನ್ನೊಂದು ಬದಿಗೆ 'ತಿರುಮಲಾಂಬಾ ಸಭಾಮಂದಿರ' ಸುಸಜ್ಜಿತವಾಗಿದೆ. ಮಹಿಳೆಯರ ಕಾರ್ಯಕ್ರಮಗಳಿಗೆ ಈ ಸಭಾಮಂದಿರವನ್ನು ಪುಕ್ಕಟೆಯಾಗಿ ಕೊಡುತ್ತಾರೆ. ಇದೇ ಕಟ್ಟಡದಲ್ಲಿ

ಸರಸ್ವತಿ ಗ್ರಂಥಾಲಯವಿದೆ. ಕರ್ನಾಟಕದ ಹಿರಿಕಿರಿಯ ಲೇಖಕಿಯರ ಗ್ರಂಥಗಳನ್ನು, ಭಾವಚಿತ್ರಗಳನ್ನು ಸಂಗ್ರಹಿಸಿ ಅಚ್ಚುಕಟ್ಟಾಗಿ ಇಟ್ಟಿದ್ದಾರೆ. ಈ ಗ್ರಂಥಗಳಿಗೆ ಮಂಗಳಾ ಹಣ ಖರ್ಚುಮಾಡಿಲ್ಲ, ದೇಹಶ್ರಮಗೈದಿದ್ದಾರೆ.

ಪ್ರಸಿದ್ಧ ವಾಗ್ಮಿಯಾದ ಮಂಗಳಾ ಅವರನ್ನು ನಾಡಿನ ಕನ್ನಡ ಸಂಘ-ಸಂಸ್ಥೆಗಳವರು, ರೋಟರಿ ಮೊದಲಾದ ಸಂಸ್ಥೆಗಳವರು ಭಾಷಣಕ್ಕೆ ಆಹ್ವಾನಿಸುತ್ತಿದ್ದರು. ವಿಶ್ವವಿದ್ಯಾಲಯಗಳ ಸಭೆ, ಸಮ್ಮೇಳನ, ವಿಚಾರ ಸಂಕಿರಣಗಳಿಗೂ ಆಮಂತ್ರಣವಿರುತ್ತಿತ್ತು. ಅಂಥ ಸಂದರ್ಭಗಳಲ್ಲಿ ನಾಡಿನ ಮೂಲೆ ಮೂಲೆಗಳಿಗೆ ಹೋಗಿ ಭಾಷಣ ಮಾಡಿದ್ದಾರೆ. ಎಲ್ಲಿಗೇ ಹೋಗಲಿ, ಯಾವ ಕೆಲಸಕ್ಕೇ ಹೋಗಲಿ, ಹೆಗಲಿಗೊಂದು ದೊಡ್ಡಚೀಲ ಇದ್ದೇ ಇರುತ್ತಿತ್ತು. ಯಾವ ಊರಿಗೆ ಹೋದರೂ ಅಲ್ಲಿರುವ ಲೇಖಕಿಯರನ್ನು ಭೇಟಿಯಾಗಿ ಅವರ ಗ್ರಂಥಗಳನ್ನು 'ಸರಸ್ವತಿ' ಗ್ರಂಥಾಲಯಕ್ಕೆ ಕಾಣಿಕೆಯಾಗಿ ಪಡೆಯುತ್ತಿದ್ದರು. ತಾವು ಡಾಕ್ಟರೇಟ್ ಪಡೆದ ಮಹಿಳೆ, ಲೇಖಕಿ, ದೊಡ್ಡ ಕಾಲೇಜಿನ ಪ್ರಿನ್ಸಿಪಾಲ್, ದೇಶ ವಿದೇಶಗಳಲ್ಲಿ ಪ್ರವಾಸ ಮಾಡಿದ ಪ್ರತಿಭಾವಂತೆ ಎಂಬ ಹಮ್ಮು ಬಿಮ್ಮು ಇಲ್ಲದೆ ಹೆಗಲಮೇಲಿನ ಚೀಲದಲ್ಲಿ ಪುಸ್ತಕಗಳನ್ನು ಹೊತ್ತು ತರುತ್ತಿದ್ದರು. ಪತ್ರ ಬರೆದು ಗ್ರಂಥಗಳನ್ನು ತರಿಸುತ್ತಿದ್ದರು. ದಣಿವು, ಬೇಸರಗಳಿಲ್ಲದೆ ಕೆಲಸ ಮಾಡುತ್ತಿದ್ದರು.

ಮಂಗಳಾ ಓರ್ವ ವ್ಯಕ್ತಿಯಾಗಿರಲಿಲ್ಲ, ಶಕ್ತಿಯಾಗಿದ್ದರು. ಮಹಿಳೆಯರಿಗೆ ಆದರ್ಶರಾಗಿದ್ದರು. ಅವರ ಸಂಘಟನಾಶಕ್ತಿ ಹಿರಿದಾಗಿತ್ತು. ವಿದ್ಯಾರ್ಥಿನಿಯರನ್ನು ಮಕ್ಕಳಂತೆ ಪ್ರೀತಿಸುತ್ತಿದ್ದರು. ಪ್ರಾಧ್ಯಾಪಿಕೆಯರನ್ನು ಸೋದರಿಯರಂತೆ ನೋಡಿಕೊಳ್ಳುತ್ತಿದ್ದರು. ಸಿಬ್ಬಂದಿಯ ಜೊತೆಗೆ ಆತ್ಮೀಯತೆಯಿಂದ ನಡೆದುಕೊಳ್ಳುತ್ತಿದ್ದರು. ಅವರು ತೊಂದರೆಯಲ್ಲಿದ್ದರೆ ಸಹಾಯ ಹಸ್ತ ನೀಡುತ್ತಿದ್ದರು. ನಾಡಿನ ಲೇಖಕಿಯರೊಂದಿಗೆ ಆತ್ಮೀಯ ಸಂಪರ್ಕ ಹೊಂದಿದ್ದರು. 'ಶಾಶ್ವತಿ'ಯ ದಶಮಾನೋತ್ಸವವನ್ನು ಅದ್ದೂರಿಯಿಂದ ಮಾಡಿದರು. ತಿರುಮಲಾಂಬಾ ಅವರ ಭಾವಚಿತ್ರವನ್ನು ಅಲಂಕರಿಸಿದ ಕೋಚ್‌ಗಾಡಿಯಲ್ಲಿ, ಚಾಮುಂಡೇಶ್ವರಿ ರಥ, ಆನೆ, ನಂದಿಕೋಲು, ಡೊಳ್ಳು ಕುಣಿತದ ಭವ್ಯ ಮೆರವಣಿಗೆಯಲ್ಲಿ ಸಾವಿರಾರು ವಿದ್ಯಾರ್ಥಿನಿಯರು ಉತ್ಸಾಹದಿಂದ, ವ್ಯವಸ್ಥಿತ ರೀತಿಯಿಂದ ಸಾಗಿದಾಗ ಬೆಂಗಳೂರಿನ ಜನರಿಗೆ ಮೈಸೂರಿನ ದಸರಾ ಮೆರವಣಿಗೆ ನೆನಪಿಗೆ ಬಂದಿರಲೂ ಸಾಕು.

ದೇವಭಾಷೆಯೆಂದು ಪ್ರಸಿದ್ಧವಾದ ಸಂಸ್ಕೃತಭಾಷೆ, ದೇಶದ ಸಂಸ್ಕೃತಿಯನ್ನು ಸಾರುತ್ತಿರುವ ಕಾವ್ಯಗಳು ಇಂದಿಗೂ ಭಾರತೀಯ ಸಂಸ್ಕೃತಿಯನ್ನು ಸಜೀವವಾಗಿಡಲು ಕಾರಣವಾಗಿವೆ. ಸಂಸ್ಕೃತ ವಿಭಾಗ ಈ ಕಾಲೇಜಿನಲ್ಲಿ ಪ್ರಮುಖವಾಗಿದೆ. ರಾಷ್ಟ್ರೀಯ ವಿದ್ಯಾಲಯ ಸಂಸ್ಕೃತ ಅಧ್ಯಯನ ಸಂಸ್ಥೆಯ ವಾಚನಾಲಯ ಸುಸಜ್ಜಿತವಾಗಿದೆ. ಕೇವಲ ಪಠ್ಯಪುಸ್ತಕಗಳ ಪಾಠಕ್ಕೆ ಸಂಸ್ಕೃತ ಅಭ್ಯಾಸ ಮೀಸಲಾಗಿರದೆ ವಿವಿಧ ಪರೀಕ್ಷೆಗಳಿಗೂ ವಿದ್ಯಾರ್ಥಿನಿಯರನ್ನು ಸಜ್ಜುಗೊಳಿಸಲಾಗುತ್ತಿದೆ. ಕನ್ನಡ, ಇಂಗ್ಲೀಷು, ಸಂಸ್ಕೃತ ಭಾಷೆಗಳೆಂದರೆ ಮಂಗಳಾ ಅವರಿಗೆ ಅಚ್ಚುಮೆಚ್ಚು. ಈ ಕಾಲೇಜಿನ ನಾಟಕೋತ್ಸವದಲ್ಲಿ ಸಂಸ್ಕೃತ ನಾಟಕಕ್ಕೂ ಸ್ಥಾನವಿದೆ.

ಇತ್ತೀಚೆಗೆ ಸ್ತ್ರೀಶೋಷಣೆಯ ಮಾತು ಎಲ್ಲೆಡೆ ಕೇಳಿಬರುತ್ತಿದೆ. ಈ ಸಮಸ್ಯೆ ಕೇವಲ ಪಟ್ಟಣದ ಸುಶಿಕ್ಷಿತ ಮಹಿಳೆಗೆ ಸೀಮಿತವಾದುದಲ್ಲ. ಹೆಚ್ಚಿನ ಸ್ತ್ರೀ ಶೋಷಣೆ ನಡೆಯುವುದು ಹಳ್ಳಿಗಳಲ್ಲಿ. ಈ ಸಮಸ್ಯೆಗೆ ಸದ್ದಿಲ್ಲದೆ ಪರಿಹಾ



ರವನ್ನು ಕಂಡವರು, ಅದನ್ನು ಕಾರ್ಯರೂಪ ದಲ್ಲಿ ತಂದವರು ಮಂಗಳಾ. "ಮಹಿಳಾ ಅಧ್ಯಯನ" ಮೂಲಕ ಸದ್ದಿಲ್ಲದೆ ಮಹಿಳೆಯರ ಉದ್ಧಾರ, ಮೂಢನಂಬಿಕೆಗಳ ವಿರುದ್ಧ ಹೋರಾಟವನ್ನೇ ಪ್ರಾರಂಭಿಸಿದರು. 'ಮಹಿಳಾ ಅಧ್ಯಯನ'ದ ವಿಷಯ ಭಾರತದಲ್ಲಿ ಮೊಟ್ಟ ಮೊದಲಿಗೆ ಪ್ರಾರಂಭವಾದದ್ದು ಮಂಗಳಾ ಅವರ ಕಾಲೇಜಿನಲ್ಲಿ. ಹೊಸ ವಿಷಯ ಪ್ರಾರಂಭಿಸಲು ವಿಶ್ವವಿದ್ಯಾಲಯದ ಅನುಮತಿಗಾಗಿ ಓಡಾಡಿದರು; ನಂತರ ಬೇಕಾಗುವ ಪಠ್ಯಪುಸ್ತಕ ರಚಿಸಿದರು. "ಪ್ರಪಂಚದಾದ್ಯಂತ ಮಹಿಳೆಯರ ಸ್ಥಿತಿಗತಿ" ವಿಶೇಷವಾದ ಅಧ್ಯಯನಕ್ಕೆ ಯೋಗ್ಯವಾಗಿದೆ. ಭಾರತದಲ್ಲಂತೂ ಮಹಿಳೆಯರ ಬಗೆಗೆ ಸದಾ ದ್ವಿಭಾಭಾವ. "ಲಕ್ಷ್ಮೀ, ಸರಸ್ವತಿ, ಪಾರ್ವತಿದೇವಿ ಎಂದು ಪೂಜಿಸಲಾಗುವ ಅವಳನ್ನು ಅಬಲೆ, ಮಾರಿ, ನರಕಕ್ಕೆ ದಾರಿ ಎಂದು ಬಣ್ಣಿಸಲಾಗುತ್ತಿದೆ. ಇದು ಹೇಗೆ ಸಾಧ್ಯ? ಅಸುರ ಸಂಹಾರಿಣಿ ಅಬಲೆಯಾದಾಳೆಯೆ? ಅವಳ ಸ್ಥಾನಮಾನ ಹೀಗೇಕಾಯಿತು? ಇವುಗಳನ್ನು ಕ್ರಮವಾಗಿ ಅಭ್ಯಾಸಮಾಡುವುದಕ್ಕಾಗಿ ಮೂರು ವರ್ಷಗಳ ಮಹಿಳಾ ಅಧ್ಯಯನ ಕೋರ್ಸ ಪ್ರಾರಂಭವಾಗಿದೆ" ಎಂದಿದ್ದಾರೆ ಮಂಗಳಾ. ಇದುವರೆಗೆ ಪತ್ರಿಕೋದ್ಯಮ, ಸಾಹಿತ್ಯ ಈ ವಿಷಯಗಳು ಬಿ.ಎ.ಗೆ ಇದ್ದವು. ಈಗ ಎಂ.ಎ.ಪದವಿಗೂ ಅನುಮತಿ ದೊರೆತಿದೆ. ಈ ಅಧ್ಯಯನ ಕೇವಲ ಪಾಠಶಾಲೆಯ ನಾಲ್ಕು ಗೋಡೆಗಳ ಮಧ್ಯೆ ನಡೆಯುವುದಿಲ್ಲ. ಹಳ್ಳಿಗಳಿಗೆ ಹೋಗಿ ಅಲ್ಲಿಯ ಮಹಿಳೆಯರ ಜೀವನವನ್ನು ಅಭ್ಯಸಿಸಬೇಕಾಗುವುದು. ಹಳ್ಳಿಗಳಲ್ಲಿ ಈ ಕಾಲೇಜಿನ ಶಿಬಿರಗಳು, ಶ್ರಮದಾನದ ಕೆಲಸಗಳು ವಿದ್ಯಾರ್ಥಿನಿಯರಿಂದ ನಡೆಯುತ್ತಿವೆ. ಮಹಿಳೆ-ಸಮಾಜ, ಮಹಿಳೆ-ಸ್ವಾಸ್ಥ ಸಮಸ್ಯೆಗಳು, ಮಹಿಳೆ-ಕ್ರೀಡೆ, ಕಾನೂನು ಇತ್ಯಾದಿ ವಿಷಯಗಳನ್ನು ವಿದ್ಯಾರ್ಥಿನಿಯರು ಅಭ್ಯಸಿಸಬೇಕಾಗುವುದು. ಮಹಿಳೆಯರನ್ನು




ಕುರಿತು ರಾಷ್ಟ್ರಮಟ್ಟದ ವಿಚಾರಗೋಷ್ಠಿಗಳು ಈ ಕಾಲೇಜಿನಲ್ಲಿ ನಡೆದಿವೆ.

ಪೂಜ್ಯ ಸತ್ಯಸಾಯಿಬಾಬಾ, ಪೇಜಾವರ ಮಠಾಧೀಶರು, ಮಲ್ಲಾಡಿಹಳ್ಳಿ ರಾಘವೇಂದ್ರ ಸ್ವಾಮೀಜಿ, ರಾಧಾಕೃಷ್ಣ ಸ್ವಾಮೀಜಿಗಳಂತಹ ಪುಣ್ಯಪುರುಷರು ಈ ಕಾಲೇಜಿಗೆ ಬಂದುಹೋಗಿದ್ದಾರೆ. ನಾಡಿನ ಹಿರಿಯ ಸಾಹಿತಿಗಳು, ಮಂತ್ರಿಮಹಾನ್ಯರು, ಶಿಕ್ಷಣತಜ್ಞರು, ಶಿಕ್ಷಣ ಕ್ಷೇತ್ರದಲ್ಲಿ ಮಂಗಳಾ ಸಾಧಿಸಿದ ಪ್ರಗತಿಯನ್ನು ಕಂಡು ಸಂತೋಷಪಟ್ಟಿದ್ದಾರೆ. ಅನುಪಮಾ ನಿರಂಜನರ ಕೊನೆಯ ಗ್ರಂಥ 'ಬರಹಗಾರ್ತಿಯ ಬದುಕು' ಗ್ರಂಥ ಬಿಡುಗಡೆ ಸಮಾರಂಭವನ್ನು ೧೯೯೧ರ ಜನವರಿ ಒಂದರಂದು ಅವರ ಕಾಲೇಜಿನಲ್ಲಿ ಏರ್ಪಡಿಸಿದ್ದರು. ಕ್ಯಾನ್ಸರಿನ ಕೊನೆಯ ಹಂತದಲ್ಲಿದ್ದ ಅನುಪಮಾ ಅವರಿಗೆ ಆ ದಿನ ೧೦೧ ಡಿಗ್ರಿ ಜ್ವರವಿತ್ತು. ಮಳೆ ಸುರಿಯುತ್ತಿತ್ತು. ಅಂಥದರಲ್ಲಿಯೂ ಅವರು ಬಂದರು. ಗ್ರಂಥ ಬಿಡುಗಡೆಗೆ ನನ್ನನ್ನೂ ಆಮಂತ್ರಿಸಿದ್ದರು. ಬೆಂಗಳೂರಿನ ಲೇಖಕಿಯರು-ಪ್ರಾಧ್ಯಾಪಿಕೆಯರು ಹಾಗೂ ವಿದ್ಯಾರ್ಥಿನಿಯರೊಂದಿಗಿನ ಆ ಕಾರ್ಯಕ್ರಮ ಆತ್ಮೀಯವಾಗಿತ್ತು. ಮುಂದೆ ಒಂದು ತಿಂಗಳಲ್ಲೆ ಅನುಪಮಾ ಇಹಲೋಕ ತ್ಯಜಿಸಿದರು. ಅನುಪಮಾ ಅವರ ಕೊನೆಯ ದಿನಗಳಲ್ಲಿ ಮಂಗಳಾ ರಾತ್ರಿವೇಳೆ ನರ್ಸಿಂಗ್ ಹೋಂನಲ್ಲಿ ಅವರ ಜೊತೆಗಿದ್ದು ಸಹಾಯ ಮಾಡಿದರು.

ಆಧ್ಯಾತ್ಮಜೀವಿಯಾದ ಮಂಗಳಾ ಒಂದೆರಡು ವರ್ಷ ಕಾಲೇಜಿನ ಕೆಲಸ ಬಿಟ್ಟು ರಾಮಕೃಷ್ಣಾಶ್ರಮದ ಸಾಮಾಜಿಕ ಕೆಲಸ ಕೈಗೊಂಡು ಹಳ್ಳಿಗಳಲ್ಲಿ ವಾಸಮಾಡಿದರು. ಆದರೆ ಅವರೇ ಕಟ್ಟಿಬೆಳೆಸಿದ ಕಾಲೇಜು ಅವರನ್ನು ಬಿಡಲಿಲ್ಲ. ಮರಳಿ ಬಂದು ಪ್ರಿನ್ಸಿಪಾಲ್ ಕಾರ್ಯವನ್ನು ಮುನ್ನಡೆಸಿದರು. ನೂರೈವತ್ತು ವಿದ್ಯಾರ್ಥಿನಿಯರಿಂದ ಪ್ರಾರಂಭವಾದ ಕಾಲೇಜು ಅವರು ನಿವೃತ್ತರಾಗುವ ವೇಳೆಗೆ ಮೂರು ಸಾವಿರವನ್ನೂ ದಾಟಿತ್ತು. ``೧೯೯೭ ಎಪ್ರಿಲ್‌ನಲ್ಲಿ ನಿವೃತ್ತಳಾಗುವೆ. ಅದಕ್ಕೂ ಮೊದಲು ನಿಮ್ಮಂಥ ಹಿರಿಯರ ಕೃಪೆ

'ಶಾಶ್ವತಿ'ಗೆ ಒದಗಿಬರಬೇಕು ೧೯೯೫ರ ಜುಲೈ ಮೂರರಂದು ನಮ್ಮ 'ಶಾಶ್ವತಿ' ಹಾಗೂ ಸಂಸ್ಕೃತ ಅಧ್ಯಯನ ಸಂಸ್ಥೆಯ ದ್ವಿದಶಮಾನೋತ್ಸವ ನಡೆಯುವುದು. ಆಗ ಶಾಶ್ವತಿಯ ಪರಿಚಯದ ಫೋಲ್ಡರನ್ನು ನೀವು ಬಿಡುಗಡೆ ಮಾಡಬೇಕು," ಎಂದು ಈಗೆರಡು ವರ್ಷಗಳ ಹಿಂದೆ ನನಗೊಂದು ಪತ್ರ ಬರೆದರು. ಆಮಂತ್ರಣ ಪತ್ರಿಕೆ ದೊಡ್ಡದಾಗಿತ್ತು. ಸರಳ ಸುಂದರವಾಗಿತ್ತು. ಸರ್ವೋಚ್ಚ ನ್ಯಾಯಾಲಯಯದ ನ್ಯಾಯಮೂರ್ತಿಗಳಾಗಿದ್ದ ಈ.ಎಸ್. ವೆಂಕಟರಾಮಯ್ಯನವರ ಅಧ್ಯಕ್ಷತೆಯಲ್ಲಿ ಸಮಾರಂಭ

ಏರ್ಪಡಿಸಿದ್ದರು. ಸಚಿವೆ ಲೀಲಾದೇವಿ ಪ್ರಸಾದ, ಮಾನ್ಯ ಬಿ.ಟಿ. ಲಲಿತಾ ನಾಯಕ ಹಾಗೂ ನಾನು ಮುಖ್ಯ ಅತಿಥಿಗಳಾಗಿದ್ದೆವು. 'ಶಾಶ್ವತಿ' ಎಂಟು ವರ್ಷದ ಬಾಲಿಕೆ ಉದ್ಘಾಟಕಳಾಗಿದ್ದಳು. ಸಂಸ್ಕೃತ ಪಂಡಿತರನ್ನೂ 'ಶಾಶ್ವತಿ'ಗೆ ಸಹಾಯಮಾಡಿದವರನ್ನೂ ಸತ್ಕರಿಸಿದರು. ಎಲ್ಲರಿಗೂ 'ಶಾಶ್ವತಿ' ಫಲಕಗಳನ್ನಿತ್ತು ಗೌರವಿಸಿದರು.

ಚಿ.ನ. ಮಂಗಳಾ, ಚಿನ್ನದಂತಹ ಮಂಗಳಾ, ಓರ್ವ ವ್ಯಕ್ತಿಯಾಗಿರಲಿಲ್ಲ, ಜಾಗೃತ ಸ್ತ್ರೀಶಕ್ತಿಯಾಗಿದ್ದರು. ಹಲವಾರು ಮೌಲಿಕ ಗ್ರಂಥಗಳನ್ನು, ಲೇಖನಗಳನ್ನೂ ಕನ್ನಡ, ಇಂಗ್ಲೀಷ್ ಭಾಷೆಗಳಲ್ಲಿ ಬರೆದು ಖ್ಯಾತರಾಗಿದ್ದರು. 'ಸ್ನೇಹ ಸಿಂಧು' ಅವರ ೩೨ ವರ್ಷದ ಶಿಕ್ಷಣಕ್ಷೇತ್ರದ ಅನುಭವಗಳ ಸಾರ ಸಂಗ್ರಹವಾಗಿದೆ. ಶಿಕ್ಷಕರಿಗೆ, ವಿದ್ಯಾರ್ಥಿನಿಯರಿಗೆ ಕೈಪಿಡಿಯಾಗಿದೆ. 'ರಾಜ್ಯೋತ್ಸವ ಪ್ರಶಸ್ತಿ' 'ಮಲ್ಲಿಕಾ ಪ್ರಶಸ್ತಿ' 'ಸಾಹಿತ್ಯಶ್ರೀ' ಬಿರುದುಗಳು ಅವರನ್ನರಸಿಕೊಂಡು ಬಂದವು. ಮಂಗಳಾ ತಮಗೆ ದೊರೆಯುತ್ತಿರುವ ಕೀರ್ತಿಯತ್ತ ಗಮನ ಕೊಡದೆ ಸದಾ ಒಂದಿಲ್ಲೊಂದು ಕಾರ್ಯದಲ್ಲಿ ಮಗ್ನರಾಗಿರುತ್ತಿದ್ದರು. ಬಹುಮುಖ ಪ್ರತಿಭೆಯ ವ್ಯಕ್ತಿ. ಸ್ಫೂರ್ತಿಯ ಸೆಲೆ, ಸಂಘಟನಾ ಚತುರೆ, ದಕ್ಷ ಆಡಳಿತಗಾರ್ತಿ, ಆಧ್ಯಾತ್ಮಶಕ್ತಿ ಸಂಪನ್ನೆ. ೧೯೯೦ರ ಎಪ್ರಿಲ್ ನಾಲ್ಕರಂದು ಕಾಲೇಜಿನಿಂದ ನಿವೃತ್ತರಾದರು. ಸಮಾಜದ ಏಳಿಗೆಯ ಬಗೆಗೆ ವಹಿಸಿದಷ್ಟು ಆಸ್ಥೆಯನ್ನು ತಮ್ಮ ಆರೋಗ್ಯದ ಬಗೆಗೆ ವಹಿಸಲಿಲ್ಲ. ೧೯೯೬ರ ಮೇ ಮೂವತ್ತರಂದು ಈ ಜಗತ್ತಿನಿಂದಲೇ ನಿವೃತ್ತರಾದರು. ದುಡಿದು, ದುಡಿದು, ದಣಿದ ದೇಹಕ್ಕೆ ವಿಶ್ರಾಂತಿ ಬೇಕು ಎಂದು ದೇವರು ಶಾಶ್ವತ ನಿವೃತ್ತಿಯನ್ನಿತ್ತನೆ ? 'ಇಲ್ಲಿ ಸಲ್ಲು'ವವರು, ಅಲ್ಲಿಯೂ ಸಲ್ಲುವರೆಂದು ಕರೆದೊಯ್ದನೆ ? ಅವರ ಭೌತಿಕ ದೇಹ ಅಳಿದರೂ ಮಂಗಳಾ ಮಾಡಿದ ಕಾರ್ಯ ಶಾಶ್ವತವಾಗಿದೆ, ಅವರ ನೆನಹು ನನ್ನ ಮನದಲ್ಲಿ ಅಚ್ಚಳಿಯದೆ ಉಳಿದಿದೆ. ●

## ಕುಂಟ, ಕುರುಡ

ಒಂದು ಬಾರಿ ಚಾರ್ಲಿ ಚಾಪ್ಲಿನ್ ನ್ಯೂಯಾರ್ಕಿನ ಬೀದಿಯಲ್ಲಿ ನಡೆದು ಹೋಗುತ್ತಿದ್ದ. ಆಗ ಒಬ್ಬ ಹೆಳವ ಭಿಕ್ಷುಕ ಆತನಿಗಿದಿರಾಗಿ ಭಿಕ್ಷೆಗಾಗಿ ಕೈ ಚಾಚಿದ. ಚಾರ್ಲಿ ಚಾಪ್ಲಿನ್ ತನ್ನ ಕಿಸೆಯಿಂದ ಕೆಲವು ನಾಣ್ಯಗಳನ್ನು ತೆಗೆದು ಆ ಭಿಕ್ಷುಕನ ಕೈಯಲ್ಲಿಡುತ್ತಾ, "ನೀನು ಕುರುಡನಾಗಿದ್ದರೆ ನಿನಗೆ ಹೆಚ್ಚು ಭಿಕ್ಷೆ ದೊರಕುತ್ತಿತ್ತು," ಎಂದು ಹೇಳಿದ.

ಆದಕ್ಕೆ ಆ ಭಿಕ್ಷುಕನೆಂದ- "ಕುರುಡನೂ ಆಗಿದ್ದೆ ಸಾರ್. ಆದರೆ ಜನರು ಭಿಕ್ಷೆಯೆಂದು ಕೊಡುತ್ತಿದ್ದ ಖೋಟಾ ನಾಣ್ಯಗಳ ದೆಸೆಯಿಂದ ಬೇಸತ್ತು ಕುಂಟನಾದೆ!"

● "ಪ್ರಿಯತಮ"

# ನೆನಪು ನೆರಳಲ್ಲಿ

ಹಿತ್ತಲಿನಲ್ಲಿ ತೆಂಗಿನ ಸಸಿ ನೆಡಲು ನಾಲ್ಕೂವರೆ ಅಡಿ ಚೌಕ ಗುಂಡಿ ಅಗೆಸಿದ್ದೆ. ಒಂದು ದಿನ ಬೆಳಿಗ್ಗೆ ಕಾಗೆಗಳ ಕಲರವ ತುಂಬಾ ಜೋರಾಗಿ ಕೇಳಿಬರಲು, ನೋಡಿದರೆ, ಒಂದು ಕಾಗೆ ಗುಂಡಿಯಲ್ಲಿ ಬಿದ್ದಿತ್ತು. ರೆಕ್ಕೆಗಳು ಬಲಿತಿದ್ದರೂ, ಇತರ ಕಾಗೆಗಳಿಗಿಂತ ಸಣ್ಣದಾಗಿದ್ದುದರಿಂದ, ಮರಿಯಾಗಿರಬೇಕೆಂದು ಊಹಿಸಿದೆ. ಆ ಮರಿಗೆ ಗುಂಡಿಯ ಬದಿಗಳು ಕಡಿದಾಗಿದ್ದುದರಿಂದ ಏರಿಬರಲು ಸಾಧ್ಯವಿರಲಿಲ್ಲ. ನಾಲ್ಕೂವರೆ ಅಡಿ ಎತ್ತರಕ್ಕೆ ಹೆಲಿಕಾಪ್ಟರಿನಂತೆ ಏರುವಷ್ಟು ಶಕ್ತಿಯೂ ಇರಲಿಲ್ಲ. ತುಂಬ ಪ್ರಯತ್ನವೇನೋ ಮಾಡಿತು. ಆದರೆ ಎರಡು ಅಡಿಯಷ್ಟು ಎತ್ತರ ಮೇಲೆ ಹಾರುವಷ್ಟರಲ್ಲಿ ತಿರುಗಿ ಕೆಳಗೆ ಬಿದ್ದುಬಿಡುತ್ತಿತ್ತು. ಇತರ ಕಾಗೆಗಳು ಗುಲ್ಲೆಬ್ಬಿಸುವುದನ್ನು ಬಿಟ್ಟು ಬೇರೆ ಏನು ಮಾಡಲೂ ಸಾಧ್ಯವಿರಲಿಲ್ಲ. ಸ್ವಲ್ಪ ಸಮಯದ ನಂತರ ಆ ಕಾಗೆಗಳು ಕಾಣದಾದವು. ಒಂದೆರಡು ಮಾತ್ರ ಹತ್ತಿರದ ಧರೆಯ ಮೇಲೆ ಕುಳಿತು ನೋಡುತ್ತಿದ್ದವು.

ಮೊದಲು ನಾನು ಗುಂಡಿಗೆ ಇಳಿದು ಕಾಗೆಮರಿಯನ್ನು ಎತ್ತಿ ಮೇಲೆ ಬಿಡಲು ಎಣಿಸಿದೆ. ಆದರೆ ಮನುಷ್ಯರು ಮುಟ್ಟಿದರೆ, ಇತರ ಕಾಗೆಗಳು ಅದನ್ನು ತಿರುಗಿ ಹತ್ತಿರ ಸೇರಿಸದೆ ಕುಕ್ಕಿ ಕೊಲ್ಲುತ್ತವೆಂದು ಕೇಳಿದ್ದು ನೆನಪಾಯಿತು. ಸ್ವಲ್ಪ ಅನ್ನದ ಅಗುಳು ಗುಂಡಿಯೊಳಗೆ ಚೆದುರಿಸಿದೆ. ಒಂದೆರಡು ಅಗುಳು ಮಾತ್ರ ಅದು ತಿಂದಂತೆ ತೋರಿತು. ಮೇಲೆ ಬರುವ ಅದರ ಯತ್ನಗಳು ಶಕ್ತಿಹೀನವಾಗುತ್ತಾ ಬಂದಿದ್ದವು. ಒಂದೆರಡು ಹೆಜ್ಜೆ ಎತ್ತರ ಮಾತ್ರ ಹೋಗುತ್ತಿತ್ತು.

ಮಧ್ಯಾಹ್ನ ಮೂರು ಕಳೆಯುವಾಗ ಕಾಗೆಮರಿಯು ಅನಾಥವಾಗಿ ಗೋಣು ಚೆಲ್ಲಿ ಬಿದ್ದಿತ್ತು. ಒಂದು ಕಾಗೆಯೂ ಹತ್ತಿರ ಇರಲಿಲ್ಲ. ಕಾಗೆಮರಿಯ ಕಣ್ಣುಗಳಲ್ಲಿ ಹತಾಶ ದೃಷ್ಟಿ. ಅದನ್ನು ನೋಡಿದಾಗ ಕರುಳು ಕಿತ್ತು ಬರುವಂತಾಗುತ್ತಿತ್ತು.

ಹೆಚ್ಚಿನ ಆಯುಷ್ಯ ನಗರಗಳಲ್ಲಿ ಕಳೆದ ನನಗೆ ಅದನ್ನು ಮುಟ್ಟದೆ ಹೇಗೆ ನಾಲ್ಕೂವರೆ ಅಡಿ ಮೇಲೆ ಎತ್ತಬೇಕು ? ಎನ್ನುವುದೇ ಒಂದು ಸವಾಲಾಯಿತು.

ಆಗ ಬಾವಿಯಲ್ಲಿ ಬಿದ್ದವನನ್ನು ಬೆತ್ತದ ಬುಟ್ಟಿ ಇಳಿಸಿ ಎತ್ತಿದ ಕಥೆಯೊಂದು ನೆನಪಿಗೆ ಬಂದಿತು. ಬೇಗನೆ ಒಂದು ಸಣ್ಣ ಬೆತ್ತದ ಬುಟ್ಟಿ ಹುಡುಕಿ, ಅದರ ಹಿಡಿಗಳಿಗೆ ಹಗ್ಗ ಕಟ್ಟಿ ಗುಂಡಿಯೊಳಗೆ ಇಳಿಸಿದೆ. ಕಾಗೆ ಮರಿಯ ಎದುರಿಗೆ, ಬುಟ್ಟಿಯ ಒಂದು ಬದಿ ನೆಲಕ್ಕೆ ತಾಗುವಂತೆ ಕವುಚಿ ಹಿಡಿದೆ. ಆದರೆ ಅದಕ್ಕೆ ಜೀವದ ಆಸೆ ಬಿಟ್ಟು ಹೋಗಿತ್ತು. ಅಲ್ಲದೆ ತಾನು ಬುಟ್ಟಿಯೊಳಗೆ ನಡೆಯಬೇಕು, ಅಂದರೆ ತನ್ನನ್ನು ಮೇಲಕ್ಕೆ ಎತ್ತುತ್ತಾರೆ ಎಂಬುದು ಅದಕ್ಕೆ ತಿಳಿದರೆ ತಾನೆ! ಎರಡು ಹೆಜ್ಜೆ ಎತ್ತಿ ಅದು ಬುಟ್ಟಿಯ ಒಳಗೆ ಬರುವುದು ಅಥವಾ ನಾವು ಅದನ್ನು ಬರುವಂತೆ ಮಾಡುವುದು ಅಸಾಧ್ಯವೆಂದು ತೋರಿತು. ಅಷ್ಟರಲ್ಲಿ ನನ್ನ ಹೆಂಡತಿ ಒಂದು ಕೋಲು ತಂದು ಕಾಗೆಮರಿಯ ಹಿಂದಿನ ನೆಲವನ್ನು ಸದ್ದು ಬರುವಂತೆ ಕುಕ್ಕಿದಳು. ಆಗ ಅದು ಹೆದರಿ ಒಂದು ಹೆಜ್ಜೆ ಕವುಚಿದ ಬುಟ್ಟಿಯ ಕಡೆಗೆ ಬಂದಿತು. ಹಾಗಾದರೆ ಕೋಲಿಗೆ ಹೆದರಿ ಅದು ಮುಂದೆ ಸರಿಯುತ್ತದೆಂದು ತಿಳಿಯಿತು. ಹಾಗೆಯೆ ಕೋಲಿನಿಂದ ಅದರ ಹಿಂದೆ ಸದ್ದುಮಾಡಿ ಕುಟ್ಟುತ್ತಾ ಬರುವಾಗ, ತುಂಬ ಕಷ್ಟಪಡುತ್ತಾ ಅದು ಕೋಲಿನ ಹೆದರಿಕೆಯಿಂದ ಜೀವದಾಸೆಗೆ ಎಂಬಂತೆ ಬುಟ್ಟಿಯ ಅಂಚನ್ನು ಸೇರಿತು. "ಇನ್ನು ಒಂದೇ ಹೆಜ್ಜೆ- ಬಾ -ಬಾ" ಎಂದುಕೊಳ್ಳುತ್ತ ಉಸಿರು ಹಿಡಿದೆ. ಬುಟ್ಟಿಯ ಅಂಚನ್ನು ನೆಲಕ್ಕೆ ಸರಿಯಾಗಿ ಹಿಡಿದಿದ್ದುದರಿಂದ, ಕಾಗೆಮರಿಗೆ ಅದನ್ನು ದಾಟಲು ಕಷ್ಟವಾಗಲಿಲ್ಲ. ಅದರ ಇಡೀ ದೇಹ ಬುಟ್ಟಿಯ ಮೇಲೆ ಬಂದೊಡನೆ ಬುಟ್ಟಿಯನ್ನು ನೇರಗೊಳಿಸಿ, ಅದು ತಿರುಗಿ ಹಿಂದೆ ಹೋಗದಂತೆ ಹಿಡಿದೆ. ಈಗ ಅದು ಬುಟ್ಟಿಯ ತೀರ ಕೆಳಗೆ ಇದ್ದುದರಿಂದ ಎತ್ತರದ

ಅಂಚುಗಳನ್ನು ಏರಲು ಸಾಧ್ಯವಿರಲಿಲ್ಲ. ಆಗ ತಪ್ಪಿಸಿಕೊಳ್ಳಲು ಯತ್ನಿಸಲು ಅದಕ್ಕೆ ಶಕ್ತಿಯೂ ಇರಲಿಲ್ಲವೆನ್ನಿ !

ಈಗ ಮೆಲ್ಲನೆ, ಎರಡೂ ಕೈಗಳಿಂದ, ಬುಟ್ಟಿಯನ್ನು ಅಲುಗಾಡಿಸದೆ ಮೇಲೆತ್ತಲಾರಂಭಿಸಿದೆ. ಈ ಕಾರ್ಯದಲ್ಲಿ ಕಾಗೆಮರಿಗೆ ಲವಲವಿಕೆಯೇ ಇರಲಿಲ್ಲ. ಸುಮ್ಮನೆ ಗೋಣು ಚೆಲ್ಲಿ ಬಿದ್ದಿತ್ತು. ನನಗಾದರೋ ಎಲ್ಲಿ ಬುಟ್ಟಿ ಕವುಚಿ, ಅದು ತಿರುಗಿ ಗುಂಡಿಗೆ ಬೀಳುವುದೋ ಎಂಬ ಹೆದರಿಕೆ! ಕೊನೆಗೊಮ್ಮೆ ಮೆಲ್ಲನೆ ಬುಟ್ಟಿ ಮೇಲೆ ಬಂತು. ಅದನ್ನು ಗುಂಡಿಯ ಮೇಲಿನ ನೆಲದಲ್ಲಿ, ಗುಂಡಿಯ ಅಂಚಿನಿಂದ ದೂರ ಇಟ್ಟು, ಅಷ್ಟು ದೂರ ಹೋಗಿ ನಿಂತೆವು.

ಆಗ ನಡೆದುದು ಚಮತ್ಕಾರವೇ ಸರಿ ! ಇದುವರೆಗೆ ಸತ್ತಂತೆ ಬಿದ್ದ ಮರಿ ಜೀವ ತಾಳಿ ರೆಕ್ಕೆ ಒಮ್ಮೆ ಬಾರಿಸಿತು. ಎರಡನೇ ಬಾರಿ ರೆಕ್ಕೆ ಬಡಿದುದೇ, ಬುಟ್ಟಿಯನ್ನು ಬಿಟ್ಟು ಮೇಲೆ ಹಾರಿತು. ಹಾರಿದ ಆ ಒಂದು ಹಾರಾಟವೇ ಅದನ್ನು ಸ್ವಲ್ಪ ದೂರದಲ್ಲಿದ್ದ ಒಂದು ಮರದ ಗೆಲ್ಲಿಗೆ ತಲುಪಿಸಿತು.

ಆಗ ನನಗೆ ಉಂಟಾದ ಆನಂದ, ಸಾರ್ಥಕಭಾವ ಆದುವರೆಗೆ ಇಡೀ ಜೀವನದಲ್ಲಿ ಅನುಭವಿಸಿರಲಿಲ್ಲ. ನೋಡಿದರೆ ಸಣ್ಣ ವಿಷಯ !

ಕಾಗೆಮರಿ ಒಂದೆರಡು ಕ್ಷಣ ಗೆಲ್ಲಿನ ಮೇಲೆ ಕುಳಿತುಕೊಂಡು ನಮ್ಮನ್ನೇ ನೋಡಿದಂತೆ ತೋರಿತು ! ನಂತರ ರೆಕ್ಕೆ ಬಡಿಯುತ್ತಾ, ಹಾರುತ್ತಾ, ಕಣ್ಮರೆಯಾಯಿತು.

• ಯು.ಎಸ್.ರಾವ್.



**ಸು**ಮಾರು ೧೯೭೫ರ ಮಾತಿದು. ಆಗತಾನೆ ನಾನು ನನ್ನೂರಾದ ದೇಗಾಂವದಿಂದ ಮುಂದಿನ ಶಿಕ್ಷಣಕ್ಕಾಗಿ ಗುಲಬರ್ಗಾಕ್ಕೆ ಬಂದು ೫ನೆಯ ತರಗತಿಗೆ ಪ್ರವೇಶ ಪಡೆದು ಕೊಂಡಿದ್ದೆ. ನಮ್ಮ ಶಾಲೆಯ ಅಕ್ಕಪಕ್ಕದಲ್ಲೆಲ್ಲ ಹಣ್ಣಿನ ಅಂಗಡಿಗಳು. ಅದರಲ್ಲೂ ಮಾವಿನ ಹಣ್ಣುಗಳ ಕಾಲವದು. ಆಂದಮೇಲೆ ಕೇಳುವುದೇ ಕಳ್ಳ ಮನಸ್ಸು ?

ನೋಡಿದಾಗಲೆಲ್ಲ ಬಾಯಲ್ಲಿ ನೀರೂರುತ್ತಿತ್ತು. ಒಂದು ದಿನ ಯಾರೂ ನನ್ನನ್ನು ನೋಡುತ್ತಿಲ್ಲ ಎಂದು ಖಾತ್ರಿ ಮಾಡಿಕೊಂಡು ಬುಟ್ಟಿಗೆ ಕೈ ಹಾಕಿ ಒಂದು ಮಾವಿನ ಹಣ್ಣನ್ನು ಎತ್ತಿಕೊಂಡೆ. ಇನ್ನೇನು ಅಲ್ಲಿಂದ ಕಾಲ್ದೆಗೆಯಬೇಕು. ಆದರೆ ನೋಡದಂತೆಯೇ ನೋಡಿದ್ದ ಆ ಮುಸಲ್ಮಾನ ವ್ಯಾಪಾರಿ ನನ್ನ ಕೈಯನ್ನು ಗಬಕ್ಕನೆ ಹಿಡಿದುಕೊಂಡ. ಆಗ ಹೆದರಿಕೆಯಿಂದ ನನ್ನ ಮೈಯೆಲ್ಲ ತಣ್ಣಗಾಗಿ ಕಂಪನ ಪ್ರಾರಂಭವಾಯಿತು. ಎಂತಹ ಶಿಕ್ಷೆ ಕಾದಿದೆಯೋ ಎಂಬ ಭಯ, ಜೊತೆಗೆ ಅವಮಾನ ಬೇರೆ.

ಅವನು ಕೆಂಗಣ್ಣಿನಿಂದ ಹತ್ತಿರ ಬಂದ. ಆದರೆ ಮೆಲ್ಲಗೆ ನನ್ನ ತಲೆ ನೇವರಿಸಿ ಮತ್ತೊಂದು ಹಣ್ಣನ್ನು ಆರಿಸಿಕೊಟ್ಟು, "ಖಾವೊ ಮುನ್ನಾ, ಖಾವೊ, ಘಬರಾನಾ ನಹಿ. ಲೇಕಿನ್ ದುಬಾರಾ ಐಸಾ ನಹಿ ಕರನಾ," ಎಂದು ನುಡಿದ. ನನಗಾಗ ಹಿಂದಿ ಭಾಷೆ ಅರ್ಥವಾಗದಿದ್ದರೂ ಆತನ ಧ್ವನಿ ಹಾವಭಾವಗಳನ್ನು, ಮನೋವೈಶಾಲ್ಯವನ್ನು ಮನದಲ್ಲಿಯೇ ಅರ್ಥೈಸಿಕೊಂಡು ಮನಸ್ಸಿನಲ್ಲಿಯೇ ಕೃತಜ್ಞತೆಯನ್ನು ಹೇಳಿದೆ.

ದೇ.ಸೈ. ಸೂರ್ಯಕಾಂತ



# ವಿದಾಯ ಪಂದ್ಯದಲ್ಲಿ ಶೂನ್ಯ ಸಂಪಾದನೆ

## ಸರ್ ಡೊನಾಲ್ಡ್ ಬ್ರಾಡ್‌ಮನ್ ಈ ಪಂದ್ಯ ಮರೆಯಲುಂಟೆ?

೧೯೪೮ರ ಆಗಸ್ಟ್ ೧೩. ಇಂಗ್ಲಂಡ್ ವಿರುದ್ಧ ಐದನೇ ಟೆಸ್ಟ್ ಆರಂಭವಾಗುವ ಒಂದು ದಿನ ಮೊದಲು ಕ್ರಿಕೆಟ್ ಜಗತ್ತಿನ 'ರನ್ ಮಾಂತ್ರಿಕ' ಎಂದೇ ಖ್ಯಾತಿ ಗಳಿಸಿದ್ದ ಸರ್‌ಡೊನಾಲ್ಡ್ ಬ್ರಾಡ್‌ಮನ್ 'ಇದು ನನ್ನ ಕೊನೆಯ ಟೆಸ್ಟ್' ಎಂದು ಪ್ರಕಟಿಸಿದ್ದ. ಈ ಸುದ್ದಿಯನ್ನು ಓದಿದ ಇಂಗ್ಲಂಡಿನ ಪ್ರತಿಯೊಬ್ಬ ಕ್ರಿಕೆಟ್ ಅಭಿಮಾನಿಯೂ ಮರುದಿನ

ಇಂಗ್ಲೆಂಡ್-ಆಸ್ಟ್ರೇಲಿಯಾ, ಐದನೇ ಟೆಸ್ಟ್,
ಸ್ಥಳ: ಓವಲ್, ದಿನಾಂಕ: ೧೯೪೮,
ಆಗಸ್ಟ್: ೧೪,೧೬,೧೭,೧೮.

ಬ್ರಾಡ್‌ಮನ್‌ಗೆ ವಿದಾಯ ಹೇಳಲು ಓವಲ್ ಮೈದಾನಕ್ಕೆ ಮುಗಿಬಿದ್ದಿದ್ದ.

ಈ ಪಂದ್ಯದ ನಂತರ ಬ್ರಾಡ್‌ಮನ್ ನಿವೃತ್ತಿಯಾಗುತ್ತಾನಲ್ಲ. ಮುಂದೆ ಇಂತಹ ಸೊಗಸಾದ ಆಟ ನೋಡಲು ಸಿಗುವುದಿಲ್ಲ ಎಂದು ಬೇಸರಗೊಂಡಿದ್ದ ಇಂಗ್ಲಂಡಿನ ಪ್ರೇಕ್ಷಕರು ತಮ್ಮ ತಂಡದವರು ಐದನೇ ಟೆಸ್ಟ್ ಪಂದ್ಯದಲ್ಲಿ ಹೀನಾಯವಾಗಿ ಸೋತಿದ್ದನ್ನೂ ಮರೆತಿದ್ದರು. ಆತಿಥೇಯ ಬ್ಯಾಟ್ಸಮನ್‌ಗಳ



● ಆದಿಕೇಶವ

## ಅಂದಿನ ಆಟ ! ಇಂದಿನ ನೋಟ !



ಡಾನ್ ಬ್ರಾಡ್‌ಮನ್

ಮೇಲೆ ಸಂಪೂರ್ಣವಾಗಿ ದರ್ಬಾರು ನಡೆಸಿದ ಆಸ್ಟ್ರೇಲಿಯನ್ನರು ಭರ್ಜರಿ ಇನಿಂಗ್ಸ್ ಜಯ ಸಾಧಿಸಿದರು.

ಇದು ತನ್ನ ಕ್ರಿಕೆಟ್ ಜೀವನದ ಕೊನೆಯ ಟೆಸ್ಟ್ ಸರಣಿ ಎಂದು ಮೊದಲೇ ನಿರ್ಧರಿಸಿದ್ದ ಆಸ್ಟ್ರೇಲಿಯದ ನಾಯಕ ಡಾನ್ ಬ್ರಾಡಮನ್ ಈ ಪ್ರವಾಸದಲ್ಲಿ ಆಸ್ಟ್ರೇಲಿಯಕ್ಕೆ ಮೊದಲ ನಾಲ್ಕು ಟೆಸ್ಟುಗಳ ಪೈಕಿ ಮೂರರಲ್ಲಿ ಜಯ ತಂದುಕೊಟ್ಟಿದ್ದ. ಮೂರನೇ ಟೆಸ್ಟ್ ಮಳೆ ಯಿಂದಾಗಿ ಡ್ರಾದಲ್ಲಿ ಸಮಾಪ್ತಿಗೊಂಡಿತ್ತು.

### ಮೈದಾನದಲ್ಲಿ

ಓವಲ್ ಮೈದಾನದಲ್ಲಿ ಆಸ್ಟ್ರೇಲಿಯನ್ನರ ಮೇಲುಗೈಗೆ ಅವಕಾಶ ಕೊಡಬಾರದು ಎಂಬ ಲೆಕ್ಕಾಚಾರದಿಂದ ಟಾಸ್‌ಗೆದ್ದು ಬ್ಯಾಟಿಂಗ್ ಆಯ್ದುಕೊಂಡ ಇಂಗ್ಲಂಡ್ ನಾಯಕ ನಾರ್ಮನ್ ಯಾರ್ಡ್ಲಿಗೆ ಆರಂಭದಲ್ಲೇ ಶನಿ ಕಾಟ ಶುರುವಾಯಿತು.

ಮೈದಾನದ ಮೂಲೆಯಲ್ಲಿ ನಿಲ್ಲಿಸಿದ್ದ ಸ್ಕೋರ್ ಬೋರ್ಡಿನಲ್ಲಿ ರನ್‌ಗಳು ಮೂಡುವ ಬದಲು ವಿಕೆಟ್‌ಗಳು ಪತನಗೊಳ್ಳುತ್ತಿರುವುದು ಕಾಣತೊಡಗಿತು.

ಲೆನ್ ಹಟನ್ (೩೦) ಜೊತೆ ಇನಿಂಗ್ಸ್ ಆರಂಭಿಸಲು ಬಂದ ಜೆ.ಜಿ. ಡೇವಿಸ್ ತನ್ನ ಪಾಲುಗಾರಿಕೆಯಲ್ಲಿ ಕನಿಷ್ಟ ಅರ್ಧ ಶತಕವನ್ನಾದರೂ ಸಂಪಾದಿಸುವ ಲೆಕ್ಕ ಹಾಕಿದ್ದ, ಆದರೆ ಕಾಂಗ್ರೂ ತಂಡದ ವೇಗದ ಅಸ್ತ್ರದ ಮುಂದೆ ಈ ಆಸೆ ಈಡೇರಲಿಲ್ಲ. ಒಂದೇ ಒಂದು ಓಟ ಗಳಿಸಿದ್ದ ಡೇವಿಸ್, ಮಿಲ್ಲರ್ ದಾಳಿಯಲ್ಲಿ ಕ್ಲೀನ್ ಬೌಲ್ಡ್ ಆಗಿ ಪೆವಿಲಿಯನ್‌ಗೆ ವಾಪಸು ಬಂದ. ಈ ವಿಕೆಟ್ ಬೀಳುತ್ತಿದ್ದಂತೆಯೇ ಇಂಗ್ಲಂಡ್ ಬ್ಯಾಟ್ಸ್‌ಮನ್‌ಗಳ ಪೆವಿಲಿಯನ್ ಪರೇಡ್ ಆರಂಭವಾಯಿತು.

ಆಗಾಗ ಬಂದ ಮಳೆಯಿಂದಾಗಿ ಪಿಚ್ ಸಂಪೂರ್ಣ ಬೌಲರ್‌ಗಳ ಪರವಾಗಿಬಿಟ್ಟಿತು. ಇಂತಹ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂಬ ಗೊಂದಲದಲ್ಲಿ ಮುಳುಗಿದ ಆತಿಥೇಯರು ೩೫ ರನ್ ಸೇರಿಸುವಷ್ಟರಲ್ಲಿ ಐದು ವಿಕೆಟ್‌ಗಳನ್ನು ಕಳೆದುಕೊಂಡಿದ್ದರು.

ಇನಿಂಗ್ಸ್ ಆರಂಭಿಸುವ ಮೊದಲು ಎರಡು ದಿನ ಪೂರ್ತಿ ಬ್ಯಾಟಿಂಗ್ ಮಾಡಿ ಆಸ್ಟ್ರೇಲಿಯ ಮೇಲೆ ಒತ್ತಡ ಹೇರಬೇಕೆಂದು ಅಂದುಕೊಂಡಿದ್ದ ಇಂಗ್ಲಂಡ್ ಅರ್ಧ ದಿನವೂ ಆಡಲಿಲ್ಲ. ಕೇವಲ ಎರಡೂವರೆ ಗಂಟೆಗಳಲ್ಲಿ ಇಂಗ್ಲಂಡಿನ ಸರದಿ ಸಮಾಪ್ತಿಗೊಂಡಿತು. ಸ್ಕೋರು ಕೇವಲ ೫೨ ರನ್! ನಾಲ್ವರು ಬ್ಯಾಟ್ಸ್‌ಮನ್‌ಗಳು ತಮ್ಮ ಖಾತೆ ತೆರೆಯುವ

ಮುನ್ನವೇ ಪೆವಿಲಿಯನ್‌ಗೆ ಬಂದಿದ್ದರು.

ಇಂಗ್ಲಂಡಿಗೆ ಕನಸಿನಲ್ಲಿಯೂ ನೆನೆಸಿಕೊಳ್ಳದಂತಹ ಆಘಾತ ನೀಡಿದ ರೇ ಲಿಂಡ್‌ವಾಲ್ ೫ ಮೇಡನ್‌ಗಳಿದ್ದ ೧೬.೫ ಓವರುಗಳಲ್ಲಿ ಕೇವಲ ೨೦ ರನ್‌ಗಳನ್ನು ನೀಡಿ ಆರು ಹುದ್ದರಿಗಳನ್ನು ಬಲಿಹಾಕಿದ್ದ. ಇಂಗ್ಲಂಡಿನ ಶೋಚನೀಯ ಆರಂಭಕ್ಕೆ ನಾಂದಿ ಹಾಡಿದ್ದ ಮಿಲ್ಲರ್ ಐದು ಓಟ ಕೊಟ್ಟು ಎರಡು ವಿಕೆಟ್ ಪಡೆದುಕೊಂಡ.

ಆಸ್ಟ್ರೇಲಿಯ ಬ್ಯಾಟಿಂಗ್‌ಗೆ ಇಳಿದಾಗ ಇಂಗ್ಲಂಡ್ ಆಟಗಾರರು ತಾವು ಇದೇ ರೀತಿ ಬೌಲಿಂಗ್ ಮಾಡುತ್ತೇವೆ ಅಂದುಕೊಂಡಿದ್ದರು. ಆಗ ಪಿಚ್ ಸಹ ಅದೇ ರೀತಿ ಇತ್ತು. ಆದರೆ ಕಾಂಗ್ರೂ ತಂಡದ ಪ್ರಾರಂಭಿಕ ಜೋಡಿ (ಬಾರ್ನೆಸ್ ಮತ್ತು ಎ.ಆರ್. ಮೊರಿಸ್) ಇಂಗ್ಲಂಡಿನ ಎಲ್ಲ ಆಸೆ, ನಿರೀಕ್ಷೆಗಳನ್ನು ಹುಸಿಮಾಡಿಬಿಟ್ಟಿತು.

ಪ್ರಥಮ ದಿನ ಮೊದಲೆರಡು ಗಂಟೆ ಬೌಲರ್‌ಗಳ ಸ್ವರ್ಗವಾಗಿದ್ದ ಪಿಚ್ ಆಸ್ಟ್ರೇಲಿಯಾ ಸರದಿ ಆರಂಭವಾಗುತ್ತಿದ್ದಂತೆ ಬ್ಯಾಟ್ಸಮನ್‌ಗಳ ಪರವಾಗಿ ಬಿಟ್ಟಿತು. ಇದರ ಲಾಭವನ್ನು ಚೆನ್ನಾಗಿಯೇ ಉಪಯೋಗಿಸಿಕೊಂಡ ಬಾರ್ನೆಸ್ (೬೧) ಮತ್ತು ಮೊರಿಸ್ (೧೯೬) ಮೊದಲ ವಿಕೆಟ್ ಪಾಲುಗಾರಿಕೆಯಲ್ಲಿಯೇ (೧೧೭ ರನ್) ಆಸ್ಟ್ರೇಲಿಯಕ್ಕೆ ೬೫ ಓಟಗಳ ಮುನ್ನಡೆ ಒದಗಿಸಿದರು.

ಬಾರ್ನೆಸ್ ಔಟಾದ ನಂತರ ನಾಯಕ ಬ್ರಾಡಮನ್ ಮೈದಾನಕ್ಕಿಳಿದಾಗ ಆಕಾಶದಲ್ಲಿ ಸೂರ್ಯ ನಿಧಾನವಾಗಿ ಮರೆಯಾಗುತ್ತಿದ್ದ. ಕ್ರಿಡಾಂಗಣದಲ್ಲಿ ತುಂಬಿದ್ದ ಪ್ರೇಕ್ಷಕರು ಭಾರೀ ಕರತಾಡನದ ಮೂಲಕ ಬ್ರಾಡಮನ್‌ಗೆ ಸ್ವಾಗತ ನೀಡಿದರು. ಇಂಗ್ಲಂಡ್ ನಾಯಕ ನಾರ್ಮನ್ ಯಾರ್ಡ್ಲಿ, ಬ್ರಾಡಮನ್‌ಗೆ ಹಸ್ತಲಾಘವ ನೀಡಿ, "ಒಳ್ಳೆಯದಾಗಲಿ," ಎಂದು ಶುಭ ಹಾರೈಸಿದ.




ಪಿಚ್ ತಲುಪಿದ ಬ್ರಾಡ್‌ಮನ್ ಅಂಪೈರ್‌ನಿಂದ 'ಗಾರ್ಡ್' ತೆಗೆದುಕೊಂಡ. ನಾಯಕ ಯಾರ್ಡ್ಲಿ ಮೂವರು ಫೀಲ್ಡರಗಳನ್ನು ಪಿಚ್ ಸಮೀಪ ನಿಲ್ಲಿಸಿದ್ದ. ಈ ಕಡೆ ಪ್ರೇಕ್ಷಕರ ಕರತಾಡನ ಇನ್ನೂ ಮೊಳಗುತ್ತಲೇ ಇತ್ತು. ಹೊಲಿಸ್ ಓಡಿ ಬಂದು ತನ್ನ ಎರಡನೇ ಬಾಲ್ ಎಸೆದ. ಅರೆ!... ಇದೇನಾಯಿತು. ಬ್ರಾಡ್‌ಮನ್ ಕ್ಲೀನ್ ಬೌಲ್ಡ್!!

ಆಕರ್ಷಕ ಬ್ಯಾಟಿಂಗ್ ಪ್ರದರ್ಶಿಸಿ ಟೆಸ್ಟಿಗೆ ವಿದಾಯ ಹೇಳುವ ಕನಸು ಕಂಡಿದ್ದ ಅಪ್ರತಿಮ ಬ್ಯಾಟ್ಸ್‌ಮನ್ ಬ್ರಾಡ್‌ಮನ್ ಖಾತೆ ತೆರೆಯುವ ಮೊದಲೇ ಸಪ್ಪೆ ಮೋರೆ ಹಾಕಿಕೊಂಡು ಪೆವಿಲಿಯನ್‌ಗೆ ವಾಪಸಾಗುತ್ತಿದ್ದ. ಇಂಗ್ಲಂಡ್ ಕ್ಷೇತ್ರರಕ್ಷಕರು ಸಂತಸದಿಂದ ಕುಣಿದಾಡುತ್ತಿದ್ದರೆ ಪ್ರೇಕ್ಷಕರು ಸ್ತಬ್ಧರಾಗಿಬಿಟ್ಟಿದ್ದರು.

ಈ ಹಿಂದೆ ಪ್ರತಿ ಟೆಸ್ಟ್ ಪಂದ್ಯದಲ್ಲಿ ಅರ್ಧಶತಕ ಇಲ್ಲವೆ ಶತಕ ಸಂಪಾದಿಸಿ ಬ್ಯಾಟ್

ಮೇಲೆತ್ತಿ ಸಂತಸದಿಂದ ನಗುತ್ತ ಪೆವಿಲಿಯನ್‌ಗೆ ಬರುತ್ತಿದ್ದ ಬ್ರಾಡ್‌ಮನ್ ಈಗ ಒಂದು ರನ್ ಕೂಡಾಮಾಡದೆ ಪೆವಿಲಿಯನ್‌ಗೆ ಮರಳಬೇಕಾಯಿತು.

ಬ್ರಾಡ್‌ಮನ್ ನಿರ್ಗಮಿಸಿದ ನಂತರ ಇಂಗ್ಲಂಡಿನ ಆನಂದಕ್ಕೆ ಕಡಿವಾಣ ಹಾಕಿದ ಮೊರಿಸ್ ಮೂರನೇ ವಿಕೆಟ್ ಜೊತೆಯಾಟದಲ್ಲಿ ಲಿಂಡ್ಸೆಹ್ಯಾಸೆಟ್ (೩೭) ಯೊಂದಿಗೆ ೧೧೭ ರನ್ ಸೇರಿಸಿ ಆಸ್ಟ್ರೇಲಿಯವನ್ನು ಸುಭದ್ರ ಸ್ಥಿತಿಯಲ್ಲಿರಿಸಿದ. ಪಂದ್ಯದ ಎರಡನೇ ದಿನ ಆಸ್ಟ್ರೇಲಿಯ ೩೮೯ ಓಟಗಳಿಗೆ ತನ್ನೆಲ್ಲ ವಿಕೆಟ್ ಕಳೆದುಕೊಂಡಿತು. ಮೊರಿಸ್ ತನ್ನ ದ್ವಿಶತಕ ಸಂಪಾದಿಸಲು ಇನ್ನು ಕೇವಲ ನಾಲ್ಕು ರನ್‌ಗಳು ಬೇಕಿದ್ದಾಗ ರನೌಟ್ ಆದ.

ಆಸ್ಟ್ರೇಲಿಯಾ ಮತ್ತೆ ಎರಡನೇ ಇನಿಂಗ್ಸ್ ಆಡಬೇಕಾದರೆ ಇಂಗ್ಲಂಡ್ ತನ್ನ ದ್ವಿತೀಯ ಸರದಿಯಲ್ಲಿ ೩೩೭ ರನ್ ಮಾಡಬೇಕಿತ್ತು. ಆಗಿದ್ದಾಗಲಿ ಎಂದು ಮೈದಾನಕ್ಕಿಳಿದ ಇಂಗ್ಲಂಡಿಗೆ ಲಿಂಡ್‌ವಾಲ್ ಬಹಳ ಬೇಗನೇ ಆಘಾತ ನೀಡಿದ. ಪ್ರಥಮ ಇನಿಂಗ್ಸದಲ್ಲಿ ಬರೀ ಒಂದು ರನ್ ಮಾಡಿದ್ದ ಡೇವಿಸ್ ಈ ಬಾರಿ ೧೦ ರನ್ ಮಾತ್ರ ಗಳಿಸಿದ. ಇಂಗ್ಲಂಡಿನ ಎರಡನೇ ವಿಕೆಟ್ ಬಿದ್ದಾಗ ಸ್ಕೋರು ೬೪.

ಎರಡನೇ ದಿನ ಚಹಾವಿರಾಮದ ಸಮಯದಲ್ಲಿ ಆಗಾಗ ಬಿದ್ದ ಮಳೆ, ಬೆಳಕಿನ ಅಭಾವ ಆಟಕ್ಕೆ ಸಾಕಷ್ಟು ವ್ಯತ್ಯಯ ಉಂಟು ಮಾಡಿತು.

ಪಂದ್ಯದ ಮೂರನೇ ದಿನ. ಬೆಳಿಗ್ಗೆ ಬರುತ್ತಿದ್ದಂತೆಯೇ ಲಿಂಡ್‌ವಾಲ್ ೨೮ ರನ್ ಮಾಡಿ ಆಡುತ್ತಿದ್ದ ಎಡ್ರಿಚ್‌ನನ್ನು ಕಬಳಿಸಿದ. ಈ ಹಂತದಲ್ಲಿ ಲೆನ್ ಹಟನ್ (೬೪) ಮತ್ತು ಡೆನಿಸ್ ಕಾಂಪ್ಟನ್ (೩೯) ಮೂರನೇ ವಿಕೆಟ್ ಪಾಲುಗಾರಿಕೆಯಲ್ಲಿ ೬೧ ರನ್ ಸೇರಿಸಿದಾಗ

## ಮೌಲ್ಯ

ಆನೆ
ಇದ್ದರೂ ಸಾವಿರ
ಸತ್ತರೂ ಸಾವಿರ
ಮುನಿಸಿಪಲ್
ಗುಮಾಸ್ತಗೂ
ಅಷ್ಟೆ
ಜನಹುಟ್ಟಿದರೂ
ಸಾವಿರ
ಸತ್ತರೂ ಸಾವಿರ!

• ರಮೇಶಚಂದ್ರ

ಇಂಗ್ಲಂಡ್ ಆಟಗಾರರು ಸ್ವಲ್ಪ ಸಮಾಧಾನದ ಉಸಿರು ಬಿಟ್ಟಿದ್ದರು. ಆದರೆ ಇದು ಬಹಳ ಹೊತ್ತು ಉಳಿಯಲಿಲ್ಲ.

ಜಾನ್ಸನ್ ಬೌಲಿಂಗ್‌ನಲ್ಲಿ ಕಾಂಪ್ಟನ್ ಹೊಡೆದ ಚೆಂಡನ್ನು ಸೊಗಸಾಗಿ ಕ್ಯಾಚ್ ತೆಗೆದುಕೊಂಡ ಲಿಂಡ್‌ವಾಲ್ ಪಂದ್ಯಕ್ಕೆ ಅನಿರೀಕ್ಷಿತ ತಿರುವು ನೀಡಿದ. ಆಸ್ಟ್ರೇಲಿಯಕ್ಕೆ ಇದೊಂದೇ ಜೋಡಿ ಮುರಿಯುವುದು ಸಾಕಾಗಿತ್ತು. ಉಳಿದ ಬ್ಯಾಟ್ಸ್‌ಮನ್‌ಗಳು ಎದುರಾಳಿ ಬೌಲರ್‌ಗಳಿಗೆ ಹೆಚ್ಚಿನ ಶ್ರಮ ನೀಡದೆ ಮತ್ತೆ ಪೆವಿಲಿಯನ್‌ಗೆ ಸಾಲಾಗಿ ತೆರಳಿದರು. ಮೊದಲ ಸರದಿಯಲ್ಲಿ ಏಳು ರನ್‌ಗಳಿಸಿದ್ದ ನಾಯಕ ಯಾರ್ಡ್ಲಿ ಈ ಸಲ ಎರಡು ರನ್ ಹೆಚ್ಚಿಗೆ ಮಾಡಿದ.

ಇಂಗ್ಲಂಡ್ ೧೮೮ ರನ್‌ಗಳಿಗೆ ಆಲೌಟಾಯಿತು. ಆಸ್ಟ್ರೇಲಿಯಕ್ಕೆ ಇನಿಂಗ್ಸ್ ಹಾಗೂ ೧೪೯ ರನ್‌ಗಳ ಅಮೋಘ ಜಯ ದೊರೆಯಿತು.

ಬ್ರಾಡ್‌ಮನ್ ತನ್ನ ಕೊನೆಯ ಟೆಸ್ಟ್ ಪಂದ್ಯದಲ್ಲಿ 'ಶೂನ್ಯ ಸಂಪಾದನೆ' ಮಾಡಿ

ದರೂ ಲಿಂಡ್‌ವಾಲ್ ತನ್ನ ಅದ್ಭುತ ಬೌಲಿಂಗ್‌ನಿಂದ ಆಸ್ಟ್ರೇಲಿಯಕ್ಕೆ ಜಯ ತಂದು ಕೊಟ್ಟು ಈ ನಿರಾಶೆಯನ್ನೂ ಮರೆಮಾಡಿ ಬಿಟ್ಟ.

**ಡಾನ್ ಬ್ರಾಡ್‌ಮನ್**

"ಎರಿಕ್ ಹೊಲಿಸ್‌ನನ್ನು ಎದುರಿಸುವಾಗ ಸಾಕಷ್ಟು ಉದ್ವೇಗಕ್ಕೆ ಒಳಗಾಗಿದ್ದೆ. ನನ್ನ ಟೆಸ್ಟ್ ಜೀವನ ಈ ರೀತಿ ಕೊನೆಗೊಳ್ಳುತ್ತದೆಂದು ನಾನು ನಿರೀಕ್ಷಿಸಿದ್ದಿಲ್ಲ. ಮೈದಾನಕ್ಕೆ ಇಳಿಯುವ ಮುನ್ನ ಮತ್ತು ಪೆವಿಲಿಯನ್‌ಗೆ ವಾಪಸಾಗುವಾಗ ಇಂಗ್ಲೆಂಡ್ ಆಟಗಾರರು ಹಾಗೂ ಪ್ರೇಕ್ಷಕರು ನೀಡಿದ ಸ್ವಾಗತ, ತೋರಿದ ಗೌರವವನ್ನು ಎಂದಿಗೂ ಮರೆಯುವಂತಿಲ್ಲ."

**ಡೆನಿಸ್ ಕಾಂಪ್ಟನ್**

"ಬ್ರಾಡ್‌ಮನ್ 'ಶೂನ್ಯ'ದೊಂದಿಗೆ ತನ್ನ ಟೆಸ್ಟ್ ಜೀವನಕ್ಕೆ ಕೊನೆಹಾಡಿದ್ದು ತೀರ ವಿಷಾದಕರ. ಬ್ರಾಡ್‌ಮನ್ ಪೆವಿಲಿಯನ್‌ಗೆ ಹೋಗುವಾಗ ಮೈದಾನ ಪೂರ್ತಿ ನಿಶ್ಶಬ್ದವಾಗಿಬಿಟ್ಟಿತ್ತು. ಆಗ ಬ್ರಾಡ್‌ಮನ್ ಅವರ ಬೂಟಿನ ಸಪ್ಪಳ ಮಾತ್ರ ಕೇಳಿಸುತ್ತಿತ್ತು.

"ಆದರೂ ಒಂದು ರೀತಿಯಲ್ಲಿ ಇದು ಬಹಳ ಕಾಲ ನೆನಪಿನಲ್ಲಿ ಉಳಿಯುವಂತಹದು. ಇದುವರೆಗೆ ಬರೀ ಶತಕಗಳಿಂದಲೇ ಸುದ್ದಿಯಾಗುತ್ತಿದ್ದ ಬ್ರಾಡ್‌ಮನ್ ಈಗ ಶೂನ್ಯದೊಂದಿಗೆ ಎಂದಿಗೂ ಮರೆಯಲಾಗದಂತಹ ಸುದ್ದಿ ಮಾಡಿದರು."

**ಬ್ರಾಡ್‌ಮನ್‌ರ ದಾಖಲೆ**

ಬ್ರಾಡ್‌ಮನ್ ತಮ್ಮ ಒಟ್ಟಾರೆ ಕ್ರಿಕೆಟ್ ಜೀವನದಲ್ಲಿ ಸರಾಸರಿ ೯೫.೧೪ರಂತೆ ೩೩೮ ಇನಿಂಗ್ಸ್‌ಗಳಲ್ಲಿ ೨೮೦೬೭ ರನ್‌ಗಳನ್ನು ಮಾಡಿದರು. ಇದರಲ್ಲಿ ೧೧೭ ಶತಕಗಳಿವೆ. ೩೭ಸಲ ದ್ವಿಶತಕಗಳನ್ನು ಬಾರಿಸಿದ ಬ್ರಾಡ್‌ಮನ್ ಆರು ಬಾರಿ ತ್ರಿಶತಕ ಹೊಡೆದ ಸಾಧನೆ ಮಾಡಿದ್ದಾರೆ. ೧೯೨೯-೩೦ ರಲ್ಲಿ ಕ್ವೀನ್ಸ್‌ಲ್ಯಾಂಡ್ ವಿರುದ್ಧ ಅಜೇಯ ೪೫೨ ರನ್ ಮಾಡಿದ್ದು ಅವರ ಅತ್ಯುತ್ತಮ ಬ್ಯಾಟಿಂಗ್‌ನಲ್ಲಿ ಒಂದು.








ಈ ಶಬ್ದ ಅನ್ನುವುದು
ಹೇಗೆ ಹುಟ್ಟುವುದು?
ಆವಾಗ
ಗುಡುಗು ಮೊಳಗುವುದು ಹೇಗೆಂದು
ಹೂವು ಬಿರಿಯುವುದು ಹೇಗೆಂದು
ಹೇಳಬೇಕಾಗಬಹುದು
ಅಥವಾ
ಕಲ್ಲು ಹುಟ್ಟುವುದು ಹೇಗೆಂದು
ಕಣ್ಣೀರು ಹುಟ್ಟುವುದು ಹೇಗೆಂದು
ಹೇಳಬೇಕಾಗಬಹುದು.
ಮಹಾಸಾಗರಗಳ
ಘೋರ ಹಸಿವು ಕರಗಿ
ಮಳೆಯಾಗುವ ಹಾಗೆ
ಗುಡುಗು ಮೊಳಗುವ ಹಾಗೆ,
ನಿಲ್ಲದ
ವಿದ್ಯುತ್ತು ಪ್ರಸರದಲ್ಲಿ
ನಿಲ್ಲದ
ಬಿರು ಪ್ರವಾಹದಲ್ಲಿ
ಹುಟ್ಟು ಕಂಪುಗಳಲ್ಲಿ
ಹೂವು ಬಿರಿಯುವ ಹಾಗೆ,
ನೋವಿನ
ಲೋಲ ತಂತುಗಳಿಂದ
ಕಣ್ಣೀರು ತುಂತುರಾಗುವ ಹಾಗೆ-
ನೋವು ಹುಟ್ಟುವುದು ಹೇಗೆಂದು
ಹೇಳಬೇಕಾಗಬಹುದು
ಅಥವಾ
ವಿಧಿಯ ಹೊಕ್ಕುಳಲ್ಲಿ ಹೂವು
ಬಿರಿಯುವುದು ಎಂದು
ಬಿರಿದ ಹೂವಿನಲ್ಲಿ ಬ್ರಹ್ಮ
ನಗುವನು ಎಂದು
ಆವಾಗ ಶಬ್ದಗಳು
ಬೆಳಗುವವು ಎಂದು
ಹೇಳಬೇಕಾಗಬಹುದು
ಅಥವಾ
ಎರಡು ಶಬ್ದಗಳ ಘರ್ಷಣೆಯಲ್ಲಿ
ಇನ್ನೊಂದು ಹೊಸ ಶಬ್ದ ಹುಟ್ಟುವುದೆಂದೋ
ಎರಡು ಕಲ್ಲುಗಳ ಡಿಕ್ಕಿಯಲ್ಲಿ
ಇನ್ನೊಂದು ಹೊಸಕಲ್ಲು ಹುಟ್ಟುವುದೆಂದೋ
ಎರಡು ಬದುಕುಗಳ ಸಂಘರ್ಷದಲ್ಲಿ
ಕಣ್ಣೀರ ಸೆಲೆ ಹುಟ್ಟುವುದೆಂದೋ.....
ಹೀಗೆ ಬಿಡಿಬಿಡಿಸಿ
ಹೇಳಬೇಕಾಗಬಹುದು
ಅಥವಾ
ಗುಡುಗು ಮೊಳಗದಿದ್ದರೆ
ಕಲ್ಲು ಕಣ್ಣೀರು ಇಲ್ಲದಿದ್ದರೆ
ಮಳೆ ಬೆಳ್ದಿಂಗಳು ಇಲ್ಲದಿದ್ದರೆ
ಸಾಗರ ಹಸಿವು ಇಲ್ಲದಿದ್ದರೆ
ಈ ಶಬ್ದ ಅನ್ನುವುದು
ಹೇಗೆ ಹುಟ್ಟುವುದು?

- ಮಲಯಾಳಂ ಮೂಲ: ಕೆ.ಜಿ. ಶಂಕರ ಪಿಳ್ಳೆ
- ಅನುವಾದ: ತೇರ್ಳಿ ಎನ್. ಶೇಖರ




# ನಾವೆಷ್ಟು ತೂಗುತ್ತೇವೆ?

ನಿಮ್ಮ ತೂಕವೆಷ್ಟು ನಿಮಗೆ ಗೊತ್ತಿದೆಯೇ? ನೀವು ನಿಮ್ಮ ತೂಕವನ್ನು ಇತ್ತೀಚೆಗೆ ನೋಡಿಕೊಂಡಿದ್ದರೂ ಈ ಪ್ರಶ್ನೆ ತುಂಬ ಸರಳವೆಂದು ತಿಳಿದಿದ್ದೀರಾ? ದಿನದಲ್ಲಿ ಸಂಜೆಯ ಹೊತ್ತಿಗೆ ಇಲ್ಲವೆ ಹತ್ತು ನಿಮಿಷಗಳ ಅಂತರದಲ್ಲಿ ನಿಮ್ಮ ತೂಕದಲ್ಲಾಗುವ ಬದಲಾವಣೆ ಎಷ್ಟು ಎಂಬುದರ ಕಲ್ಪನೆ ನಿಮಗಿದೆಯೇ?

ಮನುಷ್ಯನ ತೂಕ ಸದಾ ಬದಲುಗೊಳ್ಳುತ್ತಿರುತ್ತದೆ. ತಾತ್ಕಾಲಿಕವಾಗಿ ತೂಕವನ್ನು ಹೆಚ್ಚಿಸುವ ಊಟದಂತಹ ಎದ್ದು ಕಾಣುವ ಕಾರಣಗಳನ್ನು ಬಿಟ್ಟರೆ, ಇತರ ಕಾರಣಗಳು ಅಗೋಚರವಾಗಿ ನಿಧಾನವಾದರೂ ಖಚಿತವಾಗಿ ತೂಕದ ಬದಲಾವಣೆಯನ್ನುಂಟು ಮಾಡುತ್ತವೆ. ಅವುಗಳನ್ನು ೩೦೦ ವರ್ಷಗಳ ಹಿಂದೆ ಸಾಂಕ್ಟೋರಿಯಸ್ ಮೊದಲು ಗುರುತಿಸಿದ. ಆತ ದೊಡ್ಡ ತೂಕಮಾಪಕವನ್ನು ರಚಿಸಿದುದಲ್ಲದೆ, ತನ್ನ ತೂಕದ ಬದಲಾವಣೆಯಾಗುವ ರೀತಿಯನ್ನು ಅರಿಯಲು ಬಹು ಕಾಲವನ್ನು ವ್ಯಯಿಸಿದ. ಈ ಪ್ರಯೋಗದ ಪರಿಣಾಮಗಳು ಆಶ್ಚರ್ಯಕರವಾಗಿದ್ದುದರಿಂದ, ತಮ್ಮೆದುರು ಖ್ಯಾತ ವಿಜ್ಞಾನಿಯು ತೂಕ ಕಳೆದುಕೊಳ್ಳುವುದನ್ನು ಕಾಣಲು ವಿಪುಲ ಸಂಖ್ಯೆಯಲ್ಲಿ ಸಂದರ್ಶಕರು ಆತನ ಪ್ರಯೋಗಶಾಲೆಯಲ್ಲಿ ನೆರೆಯುತ್ತಿದ್ದರು. ಬದಲಾವಣೆಗಳು ಗಮನಾರ್ಹವಾಗಿದ್ದವು. ರಾತ್ರಿಯೊಂದರಲ್ಲಿ ಒಂದು ಕಿಲೋಗ್ರಾಂನಷ್ಟು ತೂಕವನ್ನು ಸಾಂಕ್ಟೋರಿಯಸ್ ಕಳೆದುಕೊಳ್ಳಬಲ್ಲನಾಗಿದ್ದ.

ಬೇರೆ ಬೇರೆ ಕಾರಣಗಳಿಂದ ತೂಕವನ್ನು ಕಳೆದುಕೊಳ್ಳಬಹುದು. ಇಪ್ಪತ್ನಾಲ್ಕು ಗಂಟೆಗಳಲ್ಲಿ ಹೊರ ಹೋಗುವ ಇಂಗಾಲದ ಡೈಆಕ್ಸೈಡ್ ೨೫ ರಿಂದ ೮೫ ಗ್ರಾಮ್ ತೂಕದ ಇಳಿವರಿಗೆ ಕಾರಣವಾಗುತ್ತದೆ. ಶ್ವಾಸಕೋಶದ ಮೂಲಕ ನಷ್ಟವಾಗುವ ನೀರಿನ ಪ್ರಮಾಣದ ಮುಂದೆ ಇದು ತೀರ ಅಲ್ಪ. ಅಲ್ಲಿ ೧೫೦ ರಿಂದ ೫೦೦ ಗ್ರಾಮ್ ನೀರು ಇಪ್ಪತ್ನಾಲ್ಕು ಗಂಟೆಗಳ ಅವಧಿಯಲ್ಲಿ ನಷ್ಟವಾಗುತ್ತದೆ. ಬೆವರಿನ ಮೂಲಕ ಕಳೆದುಹೋಗುವ ಪ್ರಮಾಣ ಇನ್ನೂ ಹೆಚ್ಚು. ಬೆವರು ದೇಹದಿಂದ ದೊಡ್ಡ ದೊಡ್ಡ ಹನಿಗಳಾಗಿ ಇಳಿದು ಬರದಿದ್ದರೂ ಮನುಷ್ಯ ಸದಾ ಬೆವರುತ್ತಿರುತ್ತಾನೆ.

ದೇಹಾದ್ಯಂತ ವಿಪುಲ ಸಂಖ್ಯೆಯಲ್ಲಿ ಬೆವರು ಗ್ರಂಥಿಗಳು ಹಾಸುಹೊದ್ದಿರುತ್ತವೆ. ಅವುಗಳ ಮೂಲಕ ಹೊರಬರುವ ಬೆವರಿನ ತುಂತುರನ್ನು ಸೂಕ್ಷ್ಮದರ್ಶಕದ ಮೂಲಕ ಮಾತ್ರವೇ ಕಾಣಬಹುದು. ಹವಾಗುಣ ಶುಷ್ಕವಾಗಿದ್ದರೆ, ಹೊಸ ಹನಿಗಳು ಈ ಗ್ರಂಥಿಗಳಿಂದ ಹೊರಬರುವ ಮುನ್ನವೇ ಅವು ಆವಿಯಾಗಿ ಚರ್ಮ ಒಣಗಿರುತ್ತದೆ. ತಂಪು ಹವಾಮಾನದಲ್ಲಿ ೭೫೦ ರಿಂದ ೧೭೦೦ ಗ್ರಾಮ್‌ನಷ್ಟು ನೀರು ಚರ್ಮದಿಂದ ಆವಿಯಾಗುತ್ತದೆ. ಸುಡು ಬಿಸಿಲಿನಲ್ಲಿ ಹೆಚ್ಚು ಶ್ರಮದಾಯಕ ಕಾರ್ಯದಲ್ಲಿ ನಿರತನಾದ ವ್ಯಕ್ತಿಯು ೧೦-೧೫ ಲೀಟರ್ ಬೆವರನ್ನು ೨೪ ಗಂಟೆಗಳಲ್ಲಿ ಸುರಿಸಬಲ್ಲ. ಕೆಲವು ಬಾರಿ ಗಂಟೆಗೆ ನಾಲ್ಕು ಲೀಟರ್ ನಷ್ಟವಾಗಬಲ್ಲದು. ಇಂತಹ ಸನ್ನಿವೇಶದಲ್ಲೂ ಚರ್ಮವು ಒಣಗಿರಬಹುದು. ದಕ್ಷಿಣ ಪ್ರದೇಶಗಳಲ್ಲಿ ವಾಸಿಸುವ ಜನರು

ಕೃಪೆ: ನವಕರ್ನಾಟಕ ಪಬ್ಲಿಕೇಶನ್ ಪ್ರಕಟಣೆಯಾದ
'ಜನಪ್ರಿಯ ಜೀವವಿಜ್ಞಾನ' ಪುಸ್ತಕದಿಂದ

೭೦ ರಿಂದ ೧೫೦ ಟನ್ ಬೆವರನ್ನು ಎಪ್ಪತ್ತು ವರುಷದ ಜೀವಾವಧಿಯಲ್ಲಿ ಸುರಿಸುತ್ತಾರೆಂಬುದು ಸಾಧಾರಣ ಅಂದಾಜು. ಈ ಪ್ರಮಾಣವು ಮೂರು ದೊಡ್ಡ ರೇಲ್ವೇ ಟ್ಯಾಂಕು ವಾಗೀನುಗಳನ್ನು ತುಂಬಲು ಸಾಕಾಗುತ್ತದೆ.

ಬೆವರು ಮಾಡುವ ಕಾರ್ಯವೇನು? ದೇಹವು ಅಷ್ಟೊಂದು ಪ್ರಮಾಣದಲ್ಲಿ ಅದನ್ನು ಹೊರ ಹಾಕುವುದೇಕೆ? ಆ ಕಾರ್ಯ ದೇಹವು ತೀವ್ರತರ ಶಾಖದಿಂದ ರಕ್ಷಣೆಯನ್ನು ಪಡೆಯಲು ಅನುಸರಿಸುವ ವಿಧಾನ. ಆವಿಯಾಗಲು ವಿಪುಲ ಪ್ರಮಾಣದಲ್ಲಿ ಶಾಖ ಬೇಕು. ಒಂದು ಲೀಟರ್ ಬೆವರಿಗೆ ಅದರ ಪ್ರಮಾಣ ೬೦೦ ಕೆಲೋರಿಗಳು. ಈ ಎಲ್ಲ ಶಾಖವೂ ಮನುಷ್ಯನ ದೇಹದಿಂದ ಹೊರಹಾಕಲ್ಪಟ್ಟರೆ ದೈಹಿಕ ಉಷ್ಣತೆ ಹತ್ತು ಡಿಗ್ರಿ ಕೆಳಕ್ಕಿಳಿಯುವುದು. ದುರದೃಷ್ಟವಶಾತ್ ನಮ್ಮ ದೇಹವು ಸ್ವಲ್ಪ ಪ್ರಮಾಣದಲ್ಲಿಯಷ್ಟೆ ತನ್ನ ಶಾಖವನ್ನು ಆವಿಯಾಗಲು ಬಳಸುವುದು. ಆದುದರಿಂದ ಬೆವರುವಿಕೆ ತಂಪುಗೊಳಿಸುವುದಿಲ್ಲ. ಅದು ತುಂಬ ಹೆಚ್ಚಿನ ಶಾಖದ ವಿರುದ್ಧ ಮಾತ್ರ ರಕ್ಷಣೆ ಕೊಡುವುದು. ಪರಿಸರದ ಉಷ್ಣತೆ ೪೦ ಅಥವಾ ೫೦ ಸೆಂ. ನಷ್ಟು ಹೆಚ್ಚು ಉಷ್ಣತೆಯನ್ನು ತೋರಿಸುತ್ತಿದ್ದರೂ ದೇಹದ ಸಹಜ ಉಷ್ಣತೆ ಸುಮಾರು ೩೭ ಸೆಂ. (ಕಂಕುಳಲ್ಲಿ). ಆ ಉಷ್ಣತೆಯು, ಶ್ವಾಸಕೋಶ ಮತ್ತು ಚರ್ಮದ ಮೂಲಕ ನೀರು ಆವಿಯಾಗುವುದರಿಂದ ಸ್ಥಿರವಾಗಿಸಲ್ಪಡುವುದು.

ಬೆವರುವಿಕೆ ಸದಾ ಉಪಯುಕ್ತವಲ್ಲ. ಆರ್ದ್ರತೆಯು ಹೆಚ್ಚಿದಾಗ ಬೆವರು ನಿಧಾನವಾಗಿ ಆವಿಯಾಗುವುದು. ಅದು ದೇಹದ ಮೇಲ್ಭಾಗದಲ್ಲಿ ದೊಡ್ಡ ಹನಿಗಳಂತೆ ಸಂಗ್ರಹಗೊಂಡು ಹರಿದರೂ ಯಾವ ಪರಿಹಾರವನ್ನೂ ಕೊಡುವುದಿಲ್ಲ. ಏಕೆಂದರೆ ಅದು ಆವಿಯಾಗದೆ ತಂಪಾಗಿಸುವುದಿಲ್ಲ. ಇದರಿಂದಾಗಿ ಒಣ ಮರಳುಗಾಡಿನಲ್ಲಿ ಉಷ್ಣತೆಯನ್ನು ತಾಳುವುದು ತೇವದ ಉಷ್ಣವಲಯದ ಅರಣ್ಯಕ್ಕಿಂತ ಸುಲಭ.

ತುಂಬ ಹೆಚ್ಚು ಬೆವರುವುದು ಅಪಾಯಕಾರಿಯೇ? ಕಾರಣವೇನೇ ಇದ್ದರೂ, ಮೂರರಿಂದ ಐದು ಲೀಟರ್ ನೀರು ನಷ್ಟವಾಗುವುದರಿಂದ ತಡೆಯಲಾರದ ಬಾಯಾರಿಕೆ ಉಂಟಾಗುತ್ತದೆ. ಅದನ್ನು ಆದಷ್ಟು ಶೀಘ್ರವಾಗಿ ಸರಿಪಡಿಸಿದರೆ ಮಾರಕವೇನಲ್ಲ. ಫ್ರಾನ್ಸ್‌ನಲ್ಲಿ ೧೮೨೧ರಲ್ಲಿ, ವ್ಯಕ್ತಿಯೊಬ್ಬ ಖಡಾಖಂಡಿತವಾಗಿ ಏನನ್ನೂ ಕುಡಿಯದೆ ತಂತಾನೆ ತನ್ನ ಅಂತ್ಯವನ್ನು ಕಂಡ ಪ್ರಸಿದ್ಧ ನಿದರ್ಶನವಿದೆ. ಸಾವು ಬದುಕಿನ ಮಧ್ಯದ ಹೋರಾಟ ಹದಿನೇಳು ದಿನಗಳ ಕಾಲ ಮುಂದುವರಿಯಿತು. ಈ ವಿಸ್ಮಯಕಾರಕ ಉಪವಾಸ ಪ್ರಾರಂಭವಾದ ಹದಿನೈದು ದಿನಗಳ ನಂತರವೂ ಆತನಿಗೆ ಸಾಕಷ್ಟು ಕುಡಿಯಲು ಕೊಟ್ಟಿದ್ದರೆ ಆತನನ್ನು ಉಳಿಸಬಹುದಾಗಿದ್ದಿತು.

ಬೆವರಿನಲ್ಲಿರುವ ನೀರು ಎಲ್ಲಿಂದ ಬರುತ್ತದೆ? ಮನುಷ್ಯ ಕುಡಿದ ನೀರನ್ನು ಸಂಗ್ರಹಿಸುವುದೆಲ್ಲಿ?

## ಹೆಣ್ಣಿನ ಮಮತೆಯನ್ನೇ ಕಾಣದ ಸಂನ್ಯಾಸಿ

ಮಿಹ ಮಿಲೋ ಟೋಲೋ ಟೋಜ ಎಂಬುವನು ೧೯೩೮ನೇ ಇಸವಿಯಲ್ಲಿ ತನ್ನ ೮೨ನೇ ವಯಸ್ಸಿನಲ್ಲಿ ಮರಣಹೊಂದಿದ. ಆತ ಹೆಂಗಸರನ್ನೇ ನೋಡಲಿಲ್ಲ. ಇವನು ಹುಟ್ಟುವಾಗಲೇ ತಾಯಿ ತೀರಿಕೊಂಡಳು. ಹುಟ್ಟಿದ ಮರುದಿನವೇ ಮಗುವಾಗಿದ್ದ ಇವನನ್ನು ಮೌಂಟ್ ಎಥೋಸ್ ಎಂಬ ಸಂನ್ಯಾಸಿಗಳ ಆಶ್ರಮಕ್ಕೆ ಸೇರಿಸಲಾಯಿತು. ಅಲ್ಲಿ ಅವನು ತನ್ನ ಇಡೀ ಜೀವನ ಸಂನ್ಯಾಸಿಗಳ ಗುಂಪಿನಲ್ಲಿಯೇ ಕಳೆದನು ಹೆಂಗಸರಾಗಲಿ ಅಥವಾ ಹೆಣ್ಣು ಪ್ರಾಣಿಗಳಾಗಲಿ ಈ ಸಂನ್ಯಾಸಿ ಮಠದೊಳಗೆ ಪ್ರವೇಶ ಮಾಡುವಂತೆಯೇ ಇಲ್ಲ.

✷ ಈ.ಕೆ. ಸೊಂಪುರ

ಬೆವರು ಗ್ರಂಥಿಗಳು ರಕ್ತದಿಂದ ನೀರನ್ನು ಪಡೆಯುತ್ತವೆ.ಬೆವರುವುದು ವಿಪರೀತವಾಗದೇ ರಕ್ತವು ಸಾಂದ್ರವಾಗುವುದಿಲ್ಲ ಮತ್ತು ಅದರ ಪ್ರಮಾಣ ಕಡಿಮೆಯಾಗುವುದಿಲ್ಲ. ರಕ್ತದಲ್ಲಿ ನೀರಿನ ಅಂಶ ಕಡಿಮೆಯಾಗತೊಡಗಿದಂತೆ ಅದೇ ಪ್ರಮಾಣದಲ್ಲಿ ನೀರು ಸಂಗ್ರಹ ಕೋಶಗಳಿಂದ ರಕ್ತನಾಳದೊಳಕ್ಕೆ ಹರಿದುಹೋಗುವುದು (ಚರ್ಮದಡಿಯ ಪ್ರದೇಶ, ಸ್ನಾಯುಗಳು, ಮತ್ತಿತರ ಅಂಗಭಾಗಗಳು ನೀರಿನ ಮುಖ್ಯ ಸಂಗ್ರಹಗಳು). ತದ್ವಿರುದ್ಧವಾಗಿ ಮನುಷ್ಯ ಕುಡಿದ ನೀರನ್ನು ಕರುಳಿನಿಂದ ರಕ್ತ ಹೀರಿದರೆ, ಅದೇ ಪ್ರಮಾಣದ ನೀರು ಕೂಡಲೇ ಸಂಗ್ರಹ ಕೋಶಗಳಿಗೆ ಕೊಂಡೊಯ್ಯಲ್ಪಡುತ್ತದೆ.

ದೇಹದಲ್ಲಿ ಸಂಗ್ರಹಿಸಬಹುದಾದ ನೀರಿನ ಪ್ರಮಾಣಕ್ಕೆ ಮಿತಿಯಿದೆ. ಅದರಲ್ಲೂ ಹಕ್ಕಿಗಳು ಮತ್ತು ಹಾರುವ ಕೀಟಗಳಲ್ಲಿ ಅದು ನಿಜ. ತಂಪಾದ ಹವಾಮಾನದಲ್ಲೂ ಪ್ರಾಣಿಯ ಜೀವಾಳ ಕಾರ್ಯಗಳನ್ನು ಒಂದೆರಡು ದಿನ ಕಾಯ್ದಿರಿಸಲು ಅದು ಸಾಕಾಗುತ್ತದೆ. ಆದರೆ ಪ್ರಾಣಿಯ ದೇಹದಲ್ಲಿ ನೀರಿನ ಸಂಗ್ರಹ ಸದಾ ಇರಬೇಕು.

ನೀರನ್ನು ಸಂಗ್ರಹಿಸುವ ಅತ್ಯಂತ ಮೂಲಭೂತ ವಿಧಾನವನ್ನು ಜೇನು ನಿರ್ಮಿಸಿದೆ. ಒಂದು ಸಹಸ್ರ ದೊಡ್ಡ ಕೀಟಗಳು ಮತ್ತು ಅಸಂಖ್ಯಾತ ಮರಿಗಳನ್ನು ಹೊಂದಿದ ಜೇನು ಕುಟುಂಬ ನೀರಿಲ್ಲದೆ ಜೀವಿಸಲಾರದು. ಹಾರಾಟಕ್ಕೆ ಪ್ರತಿಕೂಲವಾದ ಹವಾಗುಣವಿದ್ದಲ್ಲಿ ಮರಿಗಳಿಗೆ ಏನಾಗುತ್ತದೆ? ಅದಕ್ಕೆ ಜೇನುಹುಳು ದಾರಿಯನ್ನು ಕಂಡು ಹಿಡಿದಿದೆ. ನೀವು ಒಂದು ಗೂಡನ್ನು ಬಿಚ್ಚಿದರೆ ಅಲ್ಲಿ ದೊಡ್ಡ ಕೆಲಸಗಾರ ಜೇನುಗಳು ಚಲನೆಯಿಲ್ಲದೆ ಜೋತಾಡುತ್ತಿರುವುದನ್ನು ಕಾಣುತ್ತೀರಿ. ಅವು ನೀರಿನ ಜೀವಂತ ಸಂಗ್ರಹಗಳು. ನೀರನ್ನು ಹೊರುವ ಜೇನು ತನ್ನಲ್ಲಿನ ಹೆಚ್ಚಿನ ನೀರನ್ನು ಕೆಲಸಗಾರ ಜೇನುಗಳ ಎರೆ ಚೀಲಕ್ಕೆ ಸುರಿದು ಅವುಗಳನ್ನು ಭಾರವಾಗಿಸಿ ಹಾರದಂತೆ ಹಾಗೂ ತೆವಳದಂತೆ ಮಾಡುತ್ತದೆ. ಹಾರುವುದಕ್ಕೆ ಪ್ರತಿಕೂಲವಾಗಿರುವ ಹವಾಮಾನದ ಒಂದೆರಡು ದಿನಗಳಲ್ಲಿ ಅವುಗಳ ಉದರ ಮುನ್ನಾಸ್ಥಿತಿಗೆ ಬಂದು ಸಂಗ್ರಹ ಖಾಲಿಯಾಗುತ್ತದೆ. ●

## ಪರಿಣಾಮ

ದಿನಕ್ಕೊಂದು
ಪ್ರೇಮಪತ್ರ ತಪ್ಪದೆ
ಗುಂಡಮ್ಮನಿಗೆ
ರವಾನಿಸಿದ ಗುಂಡ!
ಒಂದು ಕರೆಯೋಲೆ ತಪ್ಪದೆನೆ
ಬಂತು
ಗುಂಡಮ್ಮ ಮತ್ತು
ಅಂಚೆ ಪೇದೆಯ
ಪರಿಣಯದ ಸುದ್ದಿ
ತಂದು!

✸ -ರಮೇಶಚಂದ್ರ






# ವಿದ್ಯಾರ್ಥಿ ಅಂಕಣ



## ಸೀಸೆಯೊಳಗೆ ಮಂಚ

ಪಂಜಾಬಿನ ಸಂಗ್ರೂರ್ ಜಿಲ್ಲೆಯ ಕೂಪ್ ಖುರ್ದಾಗ್ರಾಮದ ಚರಣ್‌ಜಿತ್ ಸಿಂಗ್ ಎಂಟನೆಯ ತರಗತಿವರೆಗೆ ಮಾತ್ರ ಓದಿದ್ದಾನೆ. ಆದರೆ ವ್ಯವಸಾಯಕ್ಕೆ ಉಪಯೋಗ ಬರುವ ಯಂತ್ರಸಾಮಗ್ರಿಗಳನ್ನು ತಯಾರಿಸುವದರಲ್ಲಿ ಆತ ನಿಪುಣ! ಸದಾ ತನ್ನ ಕೆಲಸದಲ್ಲೇ ಮಗ್ನನಾಗಿರುವ ಚರಣ್‌ಸಿಂಗನ ಬಳಿಗೆ ಸದ್ಯಕ್ಕೆ ಕೆನಡಾದಲ್ಲಿ ವಾಸಿಸುತ್ತಿರುವ ಅದೇ ಗ್ರಾಮದ ಯುವಕನೊಬ್ಬ ಬಂದು, ಯಾವುದೋ ವಿಷಯ ಮಾತನಾಡುತ್ತಾ, "ನಿನ್ನನ್ನು ಜನ ಬಹಳವಾಗಿ ಹೊಗಳ್ತಾರಲ್ಲ! ಇದುವರೆಗೂ ಯಾರೂ ಮಾಡದ ಕೆಲಸ ಮಾಡಿತೋರಿಸು ನೋಡೋಣ," ಎಂದ.

"ನೀನೇ ಹೇಳು ಏನು ಮಾಡಿ ತೋರಿಸಬೇಕೆಂದು?" ಎಂದ ಚರಣ್‌ಜಿತ್‌ಸಿಂಗ್. ಆ ಯುವಕ ಸ್ವಲ್ಪ ಹೊತ್ತು ಯೋಚಿಸಿ "ನಾವು ಕುಳಿತಿರುವ ಈ ಹಗ್ಗದ ಮಂಚವನ್ನು ಸೀಸೆಯೊಳಗೆ ಬಂಧಿಸಬಲ್ಲೆಯಾ?" ಎಂದ ತಮಾಷೆಯಾಗಿ.

ಚರಣ್‌ಜಿತ್‌ಸಿಂಗ್ ಕೆಲಕಾಲ ಮಂಚವನ್ನೂ, ಆ ಯುವಕನನ್ನೂ ನೋಡುತ್ತಾ ಕುಳಿತುಬಿಟ್ಟ.

"ನಾನು ಕೈಕೆಲಸ ಮಾಡುವವನು, ಕೈಚಳಕ ಮಾಡುವವನಲ್ಲ. ಆದರೂ ಸೀಸೆಯೊಳಗೆ ಮಂಚವನ್ನು ಹಾಕುವುದಲ್ಲದೆ ಅದಕ್ಕೆ ಹಗ್ಗವನ್ನು ಕೂಡ ನೇಯುತ್ತೇನೆ,"

# ಜ್ಞಾನನಿಧಿ



ಎಂದ ಚರಣ್‌ಜಿತ್‌ಸಿಂಗ್.

"ಆ ಕೆಲಸ ನಿನ್ನ ಕೈಲಾಗೊಲ್ಲ," ಎಂದ ಆ ಯುವಕ.

ಆದರೆ ಚರಣ್‌ಜಿತ್‌ಸಿಂಗ್ ಮೂರು ವಾರದಲ್ಲೇ ಅಸಂಭವವನ್ನು ಸಂಭವ ಮಾಡಿ ತೋರಿಸಿಬಿಟ್ಟ.

ಕೈಕೆಲಸದಲ್ಲಿ ನಿಪುಣನಾದ ಆತ ಕೆಲವು ಸಾಮಗ್ರಿಗಳನ್ನು ತಯಾರಿಸಿಕೊಂಡಿದ್ದಾನೆ. ಸಣ್ಣ ಸಣ್ಣ ಮಂಚದ ಪಟ್ಟಿಗಳು, ಕೋಡುಗಳನ್ನು ತಯಾರಿಸಿ ಸೀಸೆಯೊಳಗೆ ಹಾಕಿ ತನ್ನ ಸಾಮಗ್ರಿಯಿಂದ ಅವುಗಳನ್ನು ಒಳಗೆ ಬಂಧಿಸಿಬಿಡುತ್ತಾನೆ. ನಂತರ ದೊಡ್ಡ ಸೂಜಿಯಿಂದ ದಪ್ಪದಾರ ಪೋಣಿಸಿ ನುಲಿಕೆಯನ್ನು ಹೆಣೆಯುತ್ತಾನೆ.

ಈ ಕಲೆಯನ್ನು ಕೆನಡಾದಿಂದ ಬಂದ ಯುವಕ ನೋಡಿ ಆಶ್ಚರ್ಯದಿಂದ ಬಾಯಿ ಮುಚ್ಚಿಕೊಂಡ. ಊರಜನರೆಲ್ಲರೂ ಚರಣ್‌ಜಿತ್‌ಸಿಂಗ್‌ನನ್ನು ಪ್ರಶಂಸಿಸಿದರು.

ಯಾವಾಗಲೂ ಕೆಲಸದಲ್ಲಿ ಮಗ್ನನಾಗಿರುವ ಚರಣ್‌ಜಿತ್‌ಸಿಂಗ್ ಬಿಡುವು ಮಾಡಿಕೊಂಡು ಸಿಕ್ಕ ಸಮಯವನ್ನು ಸದ್ವಿನಿಯೋಗ ಮಾಡಿಕೊಳ್ಳುತ್ತಾ ಹೊಸ ಕಲೆಗೆ ಹೊಸ ಮೆರಗುಕೊಡುತ್ತಲೇ ಇದ್ದಾನೆ.

ಸೀಸೆಯೊಳಗೆ ಮಂಚ ಹಾಕಿದನಂತರ, ಆತನು ಒಂದು ಕುರ್ಚಿಯನ್ನೂ, ರಾಟಿಯನ್ನೂ ಹಾಕಿ ಅವುಗಳನ್ನು ಪ್ರದರ್ಶಿಸಿದ.

ಕೇವಲ ಒಂದೇ ವಸ್ತುವನ್ನು ಸೀಸೆಯೊಳಗೆ ತೂರಿಸಬೇಕೆಂದುಕೊಂಡ ಚರಣ್ ಈಗ ಭಾಂಗ್ರಾ ನರ್ತಕರ ವೃಂದವನ್ನೇ ಸೀಸೆಯೊಳಗೆ ತೂರಿಸಲು ಪ್ರಯತ್ನಿಸುತ್ತಿದ್ದಾನೆ. ಈತನ ಪ್ರತಿಭೆಯನ್ನು ಗುರುತಿಸಿದ ಸಂಗ್ರೂರ್ ಜಿಲ್ಲೆಯ ಜನರು ಆತನ ಬಗೆಗೆ ಅಭಿಮಾನಪಡುತ್ತಾರೆ. ಆದರೆ ಈತನ ಪ್ರತಿಭೆ ಸರಕಾರದ ಕಣ್ಣಿಗೆ ಇನ್ನೂ ಬಿದ್ದಿಲ್ಲ!

*ಕಂಬಳಿ ಆದಮಾನಿ*



## ಜ್ಞಾನನಿಧಿ

# ಕಣ್ಣುಗಳ ಬಗ್ಗೆ ನಿಮಗೆಷ್ಟು ಗೊತ್ತು?

ಇತರೆಲ್ಲ ಪ್ರಾಣಿಗಳಿಗಿಂತ ಪೆರೆಗ್ರಿನ್ ಗಿಡುಗದ ಕಣ್ಣು ಹೆಚ್ಚು ತೀಕ್ಷ್ಣ. ಅದು ಒಂದು ಪಾರಿವಾಳವನ್ನು ಎಂಟು ಕಿಲೋಮೀಟರ್ ಎತ್ತರದಿಂದ ನೋಡಬಲ್ಲದು.

ಸುವರ್ಣ ಗರುಡಪಕ್ಷಿಯು ಉತ್ತಮ ಬೆಳಕಿನಲ್ಲಿ ಭೂಮಿಯ ಮೇಲೆ ಓಡಾಡುವ ಮೊಲವನ್ನು ೩.೨ ಕಿಲೋ ಮೀಟರು ಎತ್ತರದಿಂದ ನೋಡಬಲ್ಲದು.

ಅಟ್ಲಾಂಟಿಕ್ ಮಹಾಸಾಗರದ ಬೃಹದಾಕಾರದ ಸ್ಕ್ವಿಡ್ ಪ್ರಾಣಿಯ ಕಣ್ಣುಗಳು ಪ್ರಪಂಚದ ಉಳಿದೆಲ್ಲ ಪ್ರಾಣಿಗಳ ಕಣ್ಣುಗಳಿಗಿಂತ ದೊಡ್ಡವಾಗಿರುತ್ತವೆ. 'ಥಿಬಲ್ ಟವಲ್' ಕೊಲ್ಲಿಯಲ್ಲಿರುವ ಈ ಪ್ರಾಣಿಯ ಕಣ್ಣಿನ ವ್ಯಾಸ ೪೦೦ ಮಿಲಿ ಮೀಟರ್ ಅಂದರೆ ೧೫.೭೫ ಅಂಗುಲದಷ್ಟು ವಿಶಾಲವಾಗಿರುತ್ತದೆ.

ಗೂಗೆ ಮನುಷ್ಯನಂತೆಯೇ ಕಣ್ಣು ರೆಪ್ಪೆಗಳನ್ನು ತೆರೆಯಲು ಮತ್ತು ಮುಚ್ಚಲು ಬರುತ್ತದೆ.

ಇರುವೆಗಳಿಗೆ ಕಣ್ಣುಗಳು ಇರುವುದೇ ಇಲ್ಲ.

'ಟುಯುಟಾರಾ' ಎಂಬ ಹೆಸರಿನ ಸರೀಸೃಪಕ್ಕೆ ಮೂರು ಕಣ್ಣುಗಳಿರುತ್ತವೆ. ಈ ಕಣ್ಣುಗಳು ಅದರ ತಲೆಯ ಮೇಲೆ ಇರುತ್ತವೆ. ಇದು ನ್ಯೂಜಿಲೆಂಡಿನಲ್ಲಿ ಮಾತ್ರ ಕಾಣಸಿಗುವುದು.

ನೊಣದ ಕಣ್ಣುಗಳಲ್ಲಿ ನಾಲ್ಕು ಸಾವಿರಕ್ಕಿಂತಲೂ ಹೆಚ್ಚು ಮಸೂರಗಳಿವೆ.

ಮೊಸಳೆಯು ಕತ್ತಲೆಯಲ್ಲಿಯೂ ನೋಡುವ ಸಾಮರ್ಥ್ಯವನ್ನು ಪಡೆದಿದೆ.

ಒತಿಕ್ಯಾತದ ಕಣ್ಣುಗಳು ತಲೆಯ ಮೇಲ್ಭಾಗದ ತುದಿಯಲ್ಲಿರುತ್ತವೆ. ನಾಯಿ ಮತ್ತು ಬೆಕ್ಕಿನ ಕಣ್ಣುಗಳಿಗೆ ಬಣ್ಣದ ವ್ಯತ್ಯಾಸವನ್ನು ತಿಳಿಯುವ ಸಾಮರ್ಥ್ಯ ಇಲ್ಲ. ಆದರೆ ಕೋತಿ ಮತ್ತು ಗುಬ್ಬಿಗಳಿಗೆ ಬಣ್ಣವನ್ನು ಗುರುತಿಸುವ ಸಾಮರ್ಥ್ಯ ಏದೆ.

'ಸ್ಕಂಕ್' ಎಂಬ ಹೆಸರಿನ ಪ್ರಾಣಿ ಕಣ್ಣು ಮುಚ್ಚಿದರೂ ನೋಡಬಲ್ಲದು. ಇದು ಹಲ್ಲಿಯಂತೆಯೇ ಕಾಣುತ್ತದೆ. ಇದರ ಕಣ್ಣಿನಲ್ಲಿ ಒಂದು ಸ್ಥಾಯಿ ಪಾರದರ್ಶಿಯಾದ ಪೊರೆ ಇರುತ್ತದೆ. ಕಣ್ಣು ಮುಚ್ಚಿದರೂ ಈ ಪೊರೆಯ ಮೂಲಕ ನೋಡಬಲ್ಲದು.

ಕ್ಯಾಲಿಫೋರ್ನಿಯಾ ಮತ್ತು ಮೆಕ್ಸಿಕೋದಲ್ಲಿರುವ 'ಹೊಂಡಾ ಟೋಡ್' ಎಂಬ ಕಪ್ಪೆ ತನ್ನ ಕಣ್ಣುಗಳಿಂದ ರಕ್ತದ ಪಿಚಕಾರಿಯನ್ನು ಬಿಡುತ್ತದೆ. ಇದು ಈ ಪಿಚಕಾರಿಯನ್ನು ಸಂಕಟದ ಸಮಯದಲ್ಲಿ ಮಾತ್ರ ತನ್ನ ಆತ್ಮರಕ್ಷಣೆಗಾಗಿ ಬಿಡುತ್ತದೆ.

ಗೂಗೆ ಮನುಷ್ಯನಿಗಿಂತಲೂ ಐದುಪಟ್ಟು ಹೆಚ್ಚು ನೋಡುವ ಸಾಮರ್ಥ್ಯ ಪಡೆದಿದೆ.

ಆನೆಯ ಕಣ್ಣಿಗೆ ಪ್ರತಿಯೊಂದು ವಸ್ತುವೂ ಅದರ ವಾಸ್ತವಿಕ ಆಕಾರಕ್ಕಿಂತ ಎರಡುಪಟ್ಟು ದೊಡ್ಡದಾಗಿ ಕಾಣಿಸುತ್ತದೆ.

ಯಾವ ಪ್ರಾಣಿಗಳ ಕಣ್ಣುಗಳು ಮಿಂಚುವವೋ ಆ ಪ್ರಾಣಿಗಳು ಕತ್ತಲಲ್ಲಿಯೂ ನೋಡಬಲ್ಲವು.

ಬೆಕ್ಕು, ಹುಲಿ, ಚಿರತೆ ಮುಂತಾದ ಪ್ರಾಣಿಗಳ ಕಣ್ಣುಗಳು ರಾತ್ರಿ ಹೊತ್ತಿನಲ್ಲಿ ಹೊಳೆಯುತ್ತವೆ.

ಹಾವುಗಳ ಕಣ್ಣುಗಳು ಸದಾ ತೆರೆದಿರುತ್ತವೆ. ಪ್ರಕೃತಿಯು ಇದರ ಕಣ್ಣುಗಳ ರಕ್ಷಣೆಗಾಗಿ ಒಂದು ಪಾರದರ್ಶಿ ಪೊರೆಯನ್ನಿತ್ತಿದೆ.

ಕ್ರಿಮಿಕೀಟಗಳು ಎಂದೂ ತಮ್ಮ ಕಣ್ಣನ್ನು ಮುಚ್ಚುವುದೇ ಇಲ್ಲ. ಮಲಗಿದಾಗ ಕೂಡ ಅವುಗಳ ಕಣ್ಣುಗಳು ತೆರೆದೇ ಇರುತ್ತವೆ.

• *ವೆಂಕಟೇಶ ಗಂಗಾವತಿ*

# ಚಿರತೆಯ ಚರಿತೆ

ಕಾಡು ಪ್ರಾಣಿಗಳಲ್ಲಿ ಚಿರತೆ ಭಯಾನಕ ಎನಿಸಿದೆ. ಇದು ಬೆಕ್ಕಿನ ಜಾತಿಗೆ ಸೇರಿದ ಪ್ರಾಣಿ. ಇದರಲ್ಲೂ ಅನೇಕ ಪಂಗಡಗಳಿವೆ. ಆಫ್ರಿಕದ ಹುಲ್ಲುಗಾವಲಿನ ಅರಣ್ಯ ಪ್ರದೇಶಗಳಲ್ಲೂ ಭಾರತ ಹಾಗೂ ನೆರೆಹೊರೆಯ ರಾಷ್ಟ್ರಗಳಲ್ಲೂ ಕಂಡುಬರುವ ಚಿರತೆಗಳು ಸರ್ವೆ ಸಾಮಾನ್ಯವಾದವುಗಳು. ಆದರೆ ರಾಜ ಚಿರತೆ ಎಂಬ ವಿಶೇಷ ತಳಿ ಇದ್ದರೂ ಕಣ್ಣಿಗೆ ಕಾಣಿಸುವುದು ವಿರಳ. ಆಫ್ರಿಕದಂತಹ ಕಗ್ಗತ್ತಲ ಪ್ರದೇಶದಲ್ಲೂ ಮೊದಲಿನಷ್ಟು ಸಂಖ್ಯೆಯಲ್ಲಿ ಈ ಪ್ರಾಣಿ ಕಂಡುಬರುತ್ತಿಲ್ಲ.

ಚಿರತೆ ಸುಮಾರು ನಾಲ್ಕೂವರೆ ಅಡಿಯಷ್ಟು ಉದ್ದ ಇರುತ್ತದೆ. ತುಂಬಾ ಮೃದು ಮೈಕಟ್ಟು, ಅಷ್ಟೇ ಆಕರ್ಷಕ



# ಜ್ಞಾನನಿಧಿ

ಎತ್ತರ. ಎರಡೂ ಎರಡೂವರೆ ಅಡಿಯಷ್ಟು ಎತ್ತರ ಇರುತ್ತದೆ. ಒಮ್ಮೊಮ್ಮೆ ಮೂರು ಅಡಿಗಳಷ್ಟು ಕಂಡುಬರುವುದು. ಚಿರತೆಯ ಬಾಲ ತುಂಬಾ ಉದ್ದ, ಬಲು ದಪ್ಪ. ಅದು ಸುಮಾರು ಎರಡೂವರೆ ಅಡಿಯಷ್ಟು ಉದ್ದವಿರುತ್ತದೆ. ಇದರ ಮೈಮೇಲೆ ಎಲ್ಲೆಡೆಗೂ ಕಪ್ಪು ಚುಕ್ಕೆಗಳು ಗುಂಡ ಗುಂಡಗೆ ಕಂಡುಬರುತ್ತವೆ. ಕಣ್ಣಿನ ಅಂಚಿನಿಂದ ಮೂತಿಯವರೆಗೆ ದಪ್ಪನೆಯ ಗೆರೆ ಇರುತ್ತದೆ. ಮಾಂಸಾಹಾರಿ ಪ್ರಾಣಿಯಾದ ಚಿರತೆ ಕಾಡು ಪ್ರಾಣಿಗಳಲ್ಲೆಲ್ಲ ಅತಿ ವೇಗದ, ಚುರುಕಿನ ಓಟದ ಚೂಟಿಯ ಪ್ರಾಣಿ. ಕಣ್ಣು ಮಿಟುಕಿಸುವಷ್ಟರಲ್ಲೇ ಅದು ಮಿಂಚಿನ ಓಟದಲ್ಲಿ ಓಡಿರುತ್ತದೆ. ಪ್ರತಿ ಗಂಟೆಗೆ ೭೦ ರಿಂದ ೧೨೦ ಕಿಲೋ ಮೀಟರ್ ವೇಗದಿಂದ ಓಡುವ ಸಾಮರ್ಥ್ಯ ಚಿರತೆಗೆ ಇದೆ. ಆದರೆ ಇದು ಇಷ್ಟೊಂದು ವೇಗದಲ್ಲಿ ಒಂದೇ ಸವನೆ ತುಂಬಾ ಸಮಯದ ವರೆಗೆ ಓಡಲಾರದು. ಓಡುವಾಗ ಇದಕ್ಕೆ ದಣಿವು ವಿಪರೀತ.

ದೇಶವಿದೇಶಗಳಲ್ಲಿ ಸಮ್ರಾಟರು, ಮಹಾರಾಜರು, ಶ್ರೀಮಂತರಿಗೆ ಚಿರತೆಗಳ ಬೇಟೆ ಎಂದರೆ ತುಂಬಾ ಇಷ್ಟ ಎನಿಸಿದ್ದ ಕಾಲವೂ ಒಂದಿತ್ತು. ಚಿರತೆಗಳನ್ನು ಹಿಡಿದು ಪಳಗಿಸಿ, ಮನೆಯಲ್ಲಿ ಮುದ್ದಾಗಿ ಸಾಕಿಕೊಳ್ಳುವ ಹವ್ಯಾಸವೂ ಅವರಲ್ಲಿತ್ತು. ಬೇಟೆ ಆಡುವಾಗ ಚಿರತೆಗಳನ್ನು ತಮ್ಮೊಂದಿಗೆ ಬೇಟೆ ಆಡಲು ಕರೆದುಕೊಂಡು ಹೋಗುತ್ತಿದ್ದರು.

ಸಾಮಾನ್ಯವಾಗಿ ಚಿರತೆ ಒಂಟಿ ಜೀವನದ ಪ್ರಾಣಿ. ಎಲ್ಲೋ ಅಪರೂಪಕ್ಕೆ ಎರಡು ಮೂರು ಚಿರತೆಗಳು ಒಟ್ಟಿಗೆ ಇರುವುದು ಕಂಡುಬರುವುದುಂಟು. ಇದಕ್ಕೆ ನಿಗದಿಯಾದ ಮರಿಹಾಕುವ ಕಾಲವೂ ಇಲ್ಲ. ಒಂದೊಂದು ಬಾರಿಗೆ ಎರಡು ಹಾಗೂ ಒಮ್ಮೊಮ್ಮೆ ಮೂರು ಮರಿ ಹಾಕುವುದೂ ಉಂಟು. ಮರಿ ಚಿರತೆಯು ಹುಟ್ಟಿದಾಗ ಅದರ ಮೈಮೇಲಿನ ಕೂದಲುಗಳು ತುಂಬಾ ಉದ್ದವಾಗಿರುತ್ತವೆ. ಕಪ್ಪು ಚುಕ್ಕೆಗಳು ಮೊದಮೊದಲು ಅಷ್ಟಾಗಿ ಕಂಡುಬರುವುದಿಲ್ಲ. ಮರಿ ದೊಡ್ಡದಾಗುತ್ತಿದ್ದಂತೆ ಕರಿಯ ಚುಕ್ಕೆಗಳು ಚೆನ್ನಾಗಿ ಕಾಣತೊಡಗುವವು. ಚಿರತೆ ಸುಮಾರು ಹದಿನೈದು ಇಪ್ಪತ್ತು ವರ್ಷಗಳ ಕಾಲ ಬದುಕಿರಬಲ್ಲವು.

★ *(ಸಂ.)*

**★ ಎಮ್. ಶಾರದಾ ನಾಗಭೂಷಣ**

## ನಾಯಿಗಿಂತಲೂ ಮಿಗಿಲು

*ಅಪರಾಧಿಗಳನ್ನು ಹಿಡಿದುಕೊಡುವಲ್ಲಿ ನಾಯಿಗಳು ಪೊಲೀಸರಿಗೆ ಸಹಾಯ ಮಾಡುತ್ತಿರುವ ವಿಷಯ ಯಾರಿಗೆತಾನೆ ಗೊತ್ತಿಲ್ಲ? ಅವುಗಳಿಗೆ ವಿಶೇಷವಾಗಿ ಇರುವ ಸೂಕ್ಷ್ಮ ಗ್ರಹಣಶಕ್ತಿಯೇ ಇದಕ್ಕೆ ಕಾರಣ. ಆದರೆ ನಾಯಿಗಳಿಗಿಂತಲೂ ಹೆಚ್ಚಿನ ಗ್ರಹಣಶಕ್ತಿಯು ಮುಂಗಸಿಗಳಿಗಿರುವುದಾಗಿ ಸಂಶೋಧನೆಗಳಿಂದ ತಿಳಿದುಬಂದಿದೆಯಂತೆ. ಅದಕ್ಕಾಗಿ ಶ್ರೀಲಂಕಾದಲ್ಲಿನ ಕೊಲಂಬೋ ವಿಮಾನ*

# ಜ್ಞಾನನಿಧಿ

ನಿಲ್ದಾಣದಲ್ಲಿ ಮುಂಗಸಿಗಳನ್ನು ಅಪರಾಧಿಗಳ ಪತ್ತೆಗಾಗಿ ಅಧಿಕಾರಿಗಳು ಉಪಯೋಗಿಸುತ್ತಿದ್ದಾರೆ. ಅಂತಾರಾಷ್ಟ್ರೀಯ ವಿಮಾನ ನಿಲ್ದಾಣಗಳಲ್ಲಿ ಅಕ್ರಮವಾಗಿ ರವಾನಿಸಲ್ಪಡುತ್ತಿರುವ ಮಾದಕ ವಸ್ತುಗಳನ್ನು ಕ್ಷಣ ಮಾತ್ರದಲ್ಲಿ ಪತ್ತೆಹಚ್ಚಿ ಕೊಡಬಲ್ಲವಂತೆ ಈ ಮುಂಗಸಿಗಳು. ಮೊದಲು ಇವುಗಳನ್ನು ಹಿಡಿದು ಸಲಿಗೆಯೇರ್ಪಡಿಸಿಕೊಂಡು ತಕ್ಕ ಶಿಕ್ಷಣ ನೀಡುತ್ತಾರಂತೆ. ಇದಕ್ಕಾಗಿ ತಗಲುವ ವೆಚ್ಚವನ್ನು ಅಮೇರಿಕನ್ ಸರಕಾರದ ಸ್ಟೇಟ್ ಡಿಪಾರ್ಟ್‌ಮೆಂಟ್ ನೀಡುತ್ತಿದೆ. ಕೊಲಂಬೋದಲ್ಲಿ ಈ ಮುಂಗಸಿಗಳಿಂದ ಒಳ್ಳೆಯ ಪ್ರಯೋಜನಗಳುಂಟಾದರೆ ಪ್ರಪಂಚದ ಎಲ್ಲ ಅಂತಾರಾಷ್ಟ್ರೀಯ ವಿಮಾನ ನಿಲ್ದಾಣಗಳಲ್ಲೂ ಇವುಗಳನ್ನು ಉಪಯೋಗಿಸಿಕೊಳ್ಳುವ ಕಾಲಬರಬಹುದು.

ಇದುವರೆಗೂ ಹಾವು-ಮುಂಗಸಿಗಳ ಹೋರಾಟ ಕಂಡ ನಾವು ಇನ್ನು ಮುಂದೆ ಮುಂಗಸಿ ಮತ್ತು ಭೂಗತದೊರೆಗಳ ಹೊಸ ಆಟವನ್ನು ನೋಡಬಹುದು. ಅಪರಾಧಿಗಳಿಗೆ ಇನ್ನು ಮುಂದೆ ಮುಂಗಸಿಗಳಿಂದ ತಪ್ಪಿಸಿಕೊಳ್ಳಲು ಒಂದೇ ಮಾರ್ಗ- ಜೊತೆಯಲ್ಲಿ ನಾಗರಹಾವುಗಳನ್ನು ಇಟ್ಟುಕೊಂಡು ಮುಂಗಸಿಗಳು ಹತ್ತಿರ ಬಂದಾಗ ಹಾವುಗಳನ್ನು ಬಿಟ್ಟು ಅವುಗಳ ಗಮನ ಬೇರೆಡೆಗೆ ಸೆಳೆದು ತಪ್ಪಿಸಿಕೊಳ್ಳುವುದು.

ಇನ್ನು ಮುಂದೆ ಪೊಲೀಸಿನವರು ನಾಯಿಗಳನ್ನು ಬಿಟ್ಟು ಮುಂಗಸಿಗಳ ಹಿಂದೆ ಬೀಳುವ ಕಾಲ ಬಂದರೂ ಆಶ್ಚರ್ಯವಿಲ್ಲ.

**★ ಮಾಸ್ತಿ ಕೆ. ಆರ್. ಕೃಷ್ಣಪ್ಪ**

# ಏಷ್ಯಾ ಮತ್ತು ಯುರೋಪ್‌ನ ಗಡಿರೇಖೆ

ಪ್ರಪಂಚದ ಭೂಪಟವನ್ನು ನೋಡಿದಾಗ ಯುರೋಪ್ ಮತ್ತು ಏಷ್ಯದ ದೇಶಗಳು ಪರಸ್ಪರ ಪಕ್ಕದಲ್ಲಿದ್ದು ಈ ಎರಡು ಖಂಡಗಳು ಸೇರುವಲ್ಲಿ ಯೂರಲ್ ಪರ್ವತವಿದೆ. ಆದರೆ ಪ್ರಾರಂಭದಲ್ಲಿ ಈ ಎರಡು ಖಂಡಗಳ ಗಡಿರೇಖೆಯನ್ನು ಬೇರೆ ರೀತಿಯಿಂದ ಗುರುತಿಸಲಾಗುತ್ತಿತ್ತು. ಕ್ರಿ.ಪೂ.ಐದನೇ ಶತಮಾನದಲ್ಲಿ ಗ್ರೀಕ್‌ದೇಶದ ಇತಿಹಾಸಕಾರನಾದ ಹೀರೋಡೋಟಸ್ ಈ ಎರಡು ಖಂಡಗಳನ್ನು ಬಾಸ್ಪೋರಸ್, ಕಪ್ಪು ಮತ್ತು ಅಜಾವ್‌ಸಮುದ್ರಗಳು ಬೇರ್ಪಡಿಸುತ್ತವೆಂದು ಹೇಳಿದ್ದ. ಆನಂತರ ಹದಿನೇಳನೆಯ ಶತಮಾನದಲ್ಲಿ ಈ ದೇಶಗಳ ಗಡಿಯನ್ನು ಡಾನ್, ವೋಲ್ಗಾ, ಕಾಮಾ ಮತ್ತು ಪೆಚೋರ ನದಿಗಳ ಸಹಾಯದಿಂದ ಗುರುತಿಸಲಾಯಿತು. ೧೭೬೦ರಲ್ಲಿ ಫ್ರಾನ್ಸ್ ದೇಶದ ಭೂಗೋಳ ತಜ್ಞ 'ಗುಯಿಲನ್' ಯುರೋಪಿನ ಗಡಿಯನ್ನು 'ಓಬ್' ನದಿವರೆಗೂ ಗುರುತಿಸಿದ. ಆದರೆ ಆತನಿಗೆ ಯೂರಲ್ ಪರ್ವತಗಳ ಪರಿಚಯವಿರಲಿಲ್ಲವೆಂದು ನಂತರದ ತಜ್ಞರು ಅಭಿಪ್ರಾಯಪಟ್ಟರು. ನಂತರದ ದಿನಗಳಲ್ಲಿ ಜರ್ಮನ್ ವಿಜ್ಞಾನಿಯಾದ ಅಲೆಗ್ಸಾಂಡರ್ ಹಮ್‌ಬೋಲ್ಡ್ ಎರಡು ಖಂಡಗಳನ್ನು ಪ್ರತ್ಯೇಕವಾಗಿ ಪರಿಗಣಿಸದೆ ಒಂದೇ ದೇಶವೆಂದು ತಿಳಿಯಬೇಕೆಂದೂ ಇದನ್ನು 'ಯೂರೇಶಿಯ'

# ಜ್ಞಾನನಿಧಿ

ಎಂದು ಕರೆಯಬೇಕೆಂದೂ ಸಲಹೆ ಮಾಡಿದ.

ಈ ಎರಡೂ ಖಂಡಗಳ ನಡುವೆ ಸುಮಾರು ೨೦೦೦ ಕಿಲೋಮೀಟರ್‌ವರೆಗೆ ಹರಡಿಕೊಂಡಿರುವ ಯೂರಲ್ ಪರ್ವತಶ್ರೇಣಿಯನ್ನೇ ಎರಡುದೇಶಗಳ ನಡುವಿನ ಗಡಿರೇಖೆಯನ್ನಾಗಿ ಪರಿಗಣಿಸಬೇಕೆಂದು ರಶಿಯದ ಭೂಗೋಳ ತಜ್ಞ ವಾಸಿಲಿ ಟಾಟಿಶ್ಚೇವ್ ಮೊದಲ ಬಾರಿಗೆ ಸಲಹೆ ಮಾಡಿದ. ಈ ಪರ್ವತಶ್ರೇಣಿಯು ಉತ್ತರ ದಕ್ಷಿಣವಾಗಿ ಹಬ್ಬಿಕೊಂಡಿದೆ. ಈ ಪರ್ವತ ಪ್ರದೇಶಗಳಿಂದ ನದಿಗಳು ಪಶ್ಚಿಮಾಭಿಮುಖವಾಗಿಯೂ ಪೂರ್ವಾಭಿಮುಖವಾಗಿಯೂ ಹರಿಯುವುದನ್ನು ಆತ ಗುರುತಿಸಿದ.

ಈ ಎರಡೂ ಗುಂಪಿನ ನದಿಗಳ ಪ್ರದೇಶಗಳಲ್ಲಿನ ಪ್ರಾಣಿ ಮತ್ತು ಸಸ್ಯಗಳಲ್ಲಿ ಪ್ರಮುಖ ವ್ಯತ್ಯಾಸಗಳಿರುವುದನ್ನು ಆತ ಗಮನದಲ್ಲಿಟ್ಟುಕೊಂಡು ಈ ಸಲಹೆ ಮಾಡಿದ್ದ.

ಪಶ್ಚಿಮದ ಕಡೆಯಲ್ಲಿರುವ ನದಿಗಳಲ್ಲಿನ ಮೀನುಗಳು ಕೆಂಪಗಿದ್ದರೆ ಪೂರ್ವದ ಕಡೆಯಲ್ಲಿರುವ ನದಿಗಳಲ್ಲಿನ ಮೀನುಗಳು ಬಿಳಿ ಬಣ್ಣದಿಂದ ಕೂಡಿವೆಯೆಂದು ಟಾಟಿಶ್ಚೇವ್ ಸ್ಪಷ್ಟಪಡಿಸಿದ. ಅಲ್ಲದೆ ಯೂರಲ್ ಪರ್ವತಶ್ರೇಣಿಯ ಪೂರ್ವ ಮತ್ತು ಪಶ್ಚಿಮ ಭಾಗದಲ್ಲಿನ ಸಸ್ಯಗಳಲ್ಲೂ ಸಾಕಷ್ಟು ವ್ಯತ್ಯಾಸವಿದೆಯೆಂದು ಹೇಳಿದ. ಹೀಗಾಗಿ ಯೂರಲ್ ಪರ್ವತಶ್ರೇಣಿಯನ್ನು ಯುರೋಪ್ ಮತ್ತು ಏಷ್ಯಾ ಖಂಡಗಳ ನಡುವಿನ ಗಡಿರೇಖೆಯೆಂದು ಆಗಿನಿಂದ ಪರಿಗಣಿಸಲಾಗಿದೆ. ಯೂರಲ್ ಪರ್ವತಶ್ರೇಣಿಯನ್ನು ಹಿಂದೆ ಹೈಪರ್‌ಬೋರಿಯನ್ ಪರ್ವತಶ್ರೇಣಿಯೆಂದು ಕರೆಯಲಾಗುತ್ತಿತ್ತು. ನಂತರ ಟಾಟಿಶ್ಚೇವ್ ಇದನ್ನು ಯೂರಲ್ ಪರ್ವತಶ್ರೇಣಿಯೆಂದು ಹೆಸರಿಸಿದ. ಅಂದಹಾಗೆ ಯೂರಲ್ ಎಂದರೆ ಕಲ್ಲಿನ ಪಟ್ಟಿ.

◎ *ಜಿ. ಅನಂತನಾರಾಯಣ ಸ್ವಾಮಿ*

# ಹೂ ರಸ ಹೀರುವ ಬಾವಲಿಗಳು

ಅಮೆರಿಕದ ಅರಿಜೋನಾ ಮರುಭೂಮಿಯಲ್ಲಿ ವಾಸಿಸುವ ಉದ್ದನೆಯ ನಾಲಿಗೆಯ ಕಂದುಬಣ್ಣದ ಬಾವಲಿಗಳು ದುಂಬಿಗಳಂತೆ ಹೂಗಳ ರಸ ಹೀರುತ್ತವೆ. ಹಾಗೆಂದು ಈ ಬಾವಲಿಗಳು ಎಲ್ಲಾ ಜಾತಿಯ ಹೂಗಳ ರಸ ಹೀರುವುದಿಲ್ಲ. ಇದಕ್ಕೆಂದೇ ಒಂದು ವಿಶಿಷ್ಟ ಜಾತಿಯ ಕತ್ತಾಳೆ ಅಲ್ಲಿ ಬೆಳೆಯುತ್ತದೆ. ಕತ್ತಾಳೆಗೆ ಬಾವಲಿ ಬಿಟ್ಟರೆ ಬೇರೆ ಗತಿಯಿಲ್ಲ ಇತರ ಜಾತಿಯ ಹೂಗಳ ಬಳಿಗೆ ಈ ಬಾವಲಿ

# ಜ್ಞಾನನಿಧಿ

ಗಳು ಸುಳಿಯುವುದಿಲ್ಲ. ಸ್ವಜಾತಿ ಹೂಗಳ ಪರಾಗ ಸ್ಪರ್ಶದಿಂದ ಮಾತ್ರ ತನ್ನ ಸಂತಾನ ಅಭಿವೃದ್ಧಿಯಾಗಬೇಕಾಗಿರುವುದರಿಂದ ಈ ಕತ್ತಾಳೆಯೂ ಬೇರೆ ಜೀವಿಗಳಿಗೆ ಮಕರಂದ ನೀಡುವುದಿಲ್ಲ.

ಬಾವಲಿ ರಾತ್ರಿ ವೇಳೆಯಲ್ಲಿ ಹಾರುತ್ತದೆ. ಹಾಗಾಗಿ ಈ ಕತ್ತಾಳೆ ಗಿಡ ಕೂಡ ರಾತ್ರಿಯಲ್ಲೆ ಹೂ ಬಿಡುತ್ತವೆ. ಬಾವಲಿಗೆ ಉದ್ದವಾದ ನಾಲಿಗೆಯಿದೆ. ಅದೇ ಆಕಾರಕ್ಕೆ ಸರಿಹೊಂದುವಂತೆ ಕತ್ತಾಳೆ ಹೂ ಕೂಡ ಕೊಳವೆಯಾಕಾರವಾಗಿ ಉದ್ದವಾಗಿದೆ. ರಾತ್ರಿ ಅರಳುವ ಹೂವಿಗೆ ಬಣ್ಣ ಮುಖ್ಯವಲ್ಲ. ಆದರೆ ಬಾವಲಿಯನ್ನು ಬರ ಮಾಡಿಕೊಳ್ಳಲು ಬೇಕಾದ ತೀಕ್ಷ್ಣ ವಾಸನೆ ಬೇಕು.

ಕತ್ತಾಳೆಯ ಗಿಡದ ಬುಡದಲ್ಲಿ ಮುಳ್ಳುಗಳಿರುವುದರಿಂದ ಬೇರೆ ಪ್ರಾಣಿಗಳು ಗಿಡ ಹತ್ತಿ ಹೂವನ್ನು ನಾಶಮಾಡುವಹಾಗಿಲ್ಲ. ಗುಂಪುಗುಂಪಾಗಿ ಈ ಕತ್ತಾಳೆ ಗಿಡಗಳು ಬೆಳೆಯುವುದರಿಂದ ಬಾವಲಿಗಳು ಆಹಾರ ಹುಡುಕುತ್ತ ದೂರ ದೂರ ಅಲೆಯಬೇಕಾಗಿಲ್ಲ. ಹೂವಿನ ಕೊಳವೆಯ ತಳಕ್ಕೆ ನಾಲಿಗೆ ಇಳಿಸಿ ರಸಾಸ್ವಾದ ಮಾಡುವಾಗ ಬಾವಲಿಗಳ ಮೈಗೆಲ್ಲಾ ಹಳದಿ ರೇಣು ಅಂಟಿಕೊಳ್ಳುತ್ತದೆ. ಹೂವಿಂದ ಹೂಗೆ ಜಿಗಿದು ರಸ ಹೀರುವಾಗ ಪರಾಗಸ್ಪರ್ಶವಾಗುತ್ತದೆ.

(ಸಂಗ್ರಹ) ಸಿ.ಎಸ್.ಎ.

## ಶಿಲಾರಣ್ಯಗಳು

*ಜಗತ್ತಿನ ಹಲವೆಡೆ 'ಶಿಲಾರಣ್ಯ'ಗಳಿರುವ ಸಮಾಚಾರ ನಿಮಗೆ ಗೊತ್ತೆ? ಕೋಟ್ಯಂತರ ವರ್ಷಗಳ ಿಂದೆ ನಿತ್ಯ ಹರಿದ್ವರ್ಣ ಕಾಡಾಗಿದ್ದ ಪ್ರದೇಶಗಳಲ್ಲಿ ಇಂದು ಶಿಲೆಗಳೇ ತುಂಬಿವೆ. ಭೂಕಂಪ ಅಥವಾ ಮತ್ತಿತರ ಕಾರಣದಿಂದ ಆಗ ಉಧ್ವಸ್ಥಗೊಂಡ ಆ ಕಾಡುಗಳು ಮಣ್ಣಿನಿಂದ ಮುಚ್ಚಲ್ಪಟ್ಟವು. ಆದರೆ ಕಾಲಾಂತರದಲ್ಲಿ ಕೊಳೆತ ಕಾಂಡಗಳಲ್ಲಿ ಮಣ್ಣು ನೀರು ಹಾಗೂ ಲವಣಗಳೂ ಸೇರಿಕೊಂಡವು. ಈ ಲವಣಗಳು ಕಾಲಾನುಕ್ರಮದಲ್ಲಿ ಗಟ್ಟಿಯಾಗಿ ಮರಗಳೆಲ್ಲ ಶಿಲಾರೂಪ ತಳೆದು ನಿಂತಿವೆ.*

# ನಿಮ್ಮ ಶಬ್ದಭಾಂಡಾರ ಬೆಳೆಸುರಿ

**ಶಬ್ದಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ.**

*ಇಲ್ಲಿ ಪ್ರತಿ ತಿಂಗಳು ಕೆಲವು ಶಬ್ದಗಳನ್ನು ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು, ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆ ಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾಗಿ ಅರ್ಥಗಳನ್ನು ವಿವರಿಸಿದೆ.*

೧) ಟಂಕಿತ
(ಅ) ತಪ್ಪಿಸಿದ
(ಆ) ಬಾಡಿಗೆ
(ಇ) ಕಿವಿಯ ಆಭರಣ
(ಈ) ಅಚ್ಚೊತ್ತಿದ

೨) ಖಗ್ರಾಸ
(ಅ) ಗ್ರಹಣ
(ಆ) ಹೊಟ್ಟೆ ತುಂಬಾ ಊಟ
(ಇ) ಹುಲ್ಲು
(ಈ) ಆಕಾಶ

೩) ಉಬ್ಬಾಳು
(ಅ) ಬೇಸರಪಡುವಿಕೆ
(ಆ) ತುಂಬಿ ಹೋಗುವದು
(ಇ) ಹೊಗಳಿದರೆ ಕೆಲಸ ಮಾಡುವವ
(ಈ) ಪೀಡಿಸಿ ಆಳುವದು.

೪) ಔತ್ಸುಕ್ಯ
(ಅ) ತುರಿಕೆ
(ಆ) ಆತುರ
(ಇ) ಅವಸರ
(ಈ) ನೀರಿನ ತೊಟ್ಟಿ

೫) ಒಕ್ಕುಡಿತೆ
(ಅ) ಚೆಲ್ಲಾಪಿಲ್ಲಿ
(ಆ) ಒಂದೇ ಗುಟುಕು
(ಇ) ಪ್ರೀತಿ
(ಈ) ತುಳುಕುವದು

೬) ಅವಿಕಲ್ಪ
(ಅ) ಒಂದೇ ಸಾಲು
(ಆ) ಊಹಿಸಲಾಗದ
(ಇ) ಬದಲಾಗದ
(ಈ) ಸುಂದರ

೭) ಅಶಿವ
(ಅ) ವಿಷ್ಣು
(ಆ) ಜೀವಂತ
(ಇ) ಬಹಳ ಸಮಯ
(ಈ) ಅಮಂಗಲ

೮) ದಯಿತ
(ಅ) ಪ್ರಿಯ
(ಆ) ದಾನಮಾಡಿದ
(ಇ) ಜವಾಬ್ದಾರಿ
(ಈ) ಇಬ್ಬರು

೯) ದಾಯಿತ್ವ
(ಅ) ಹೊಣೆಗಾರಿಕೆ
(ಆ) ಪ್ರೇಮ
(ಇ) ದುಷ್ಟತನ
(ಈ) ಕಟ್ಟುಪಾಡು

೧೦) ಸೌಸವ
(ಅ) ಶಕ್ತಿ
(ಆ) ಪರಿಮಳ
(ಇ) ಅಪ್ಪುವಿಕೆ
(ಈ) ತಂಪು

೧೧) ಹುಡುಗುಣಿ
(ಅ) ಬಿಗಿಯಾದ ಉರುಳು
(ಆ) ಆಸೆಬುರುಕ
(ಇ) ಕದ್ದು ತಿನ್ನುವವ
(ಈ) ಜಗಳಗಂಟಿ

೧೨) ಸಸನೆ
(ಅ) ಬಿಡಿಬಿಡಿ
(ಆ) ಉಸಿರು
(ಇ) ಚಂದ್ರನ ಬೆಳಕು
(ಈ) ಸುಮ್ಮನೆ

## 'ಶಬ್ದಭಾಂಡಾರ'ದ ಸರಿಯಾದ ಅರ್ಥಗಳು

**೧. ಟಂಕಿತ**

(ಈ) ಅಚ್ಚೊತ್ತಿದ, ಕಟೆದ. ಉದಾ- ಈ ಮಾತು ಅವನ ಮನದಲ್ಲಿ ಟಂಕಿತವಾಯಿತು. (ಸಂ. ಟಂಕ=ಅಚ್ಚು ಹೊಡೆದ ನಾಣ್ಯ)

**೨. ಖಗ್ರಾಸ**

(ಅ) ಗ್ರಹಣ, ಪೂರ್ಣವಾಗಿ ಮುಚ್ಚಿ ಹೋಗುವದು. ಉದಾ: ಸೂರ್ಯನಿಗೆ ಖಗ್ರಾಸ ಹಿಡಿದಿದೆ; ಅವನ ಅದೃಷ್ಟಕ್ಕೆ ಖಗ್ರಾಸ ಬಂತು. (ಸಂ. ಖ=ರಾಹು, ಗ್ರಾಸ=ನುಂಗುವದು-ರಾಹು ಚಂದ್ರ ಅಥವಾ ಸೂರ್ಯನನ್ನು ಮುಚ್ಚುವದು.)

**೩. ಉಬ್ಬಾಳು**

(ಇ) ಹೊಗಳಿದರೆ ಉಬ್ಬಿ ಕೆಲಸ ಮಾಡುವವ. (ಕನ್ನಡ. ಉಬ್ಬು+ ಆಳು).

**೪. ಔತ್ಸುಕ್ಯ**

(ಆ) ಆತುರ, ಹಂಬಲ, ಕುತೂಹಲ, ಉದಾ- ಪರೀಕ್ಷಾ ಪರಿಣಾಮಗಳನ್ನು ಔತ್ಸುಕ್ಯದಿಂದ ಕಾಯುತ್ತಿದ್ದ. (ಸಂ. ಉತ್ಸುಕ-ದಿಂದ)

**೫. ಒಕ್ಕುಡಿತೆ**

(ಆ) ಒಂದೇ ಗುಟುಕು. ಉದಾ- ಒಕ್ಕುಡಿತೆ ನೀರು ಸಿಗಲಿಲ್ಲ, ಸಮುದ್ರವನ್ನೇ ಒಕ್ಕುಡಿತೆ ಮಾಡಿದ. (ಕನ್ನಡ. ಒರ್ = ಒಂದು, ಕುಡಿತೆ = ಗುಟುಕು)

**೬. ಅವಿಕಲ್ಪ**

(ಇ) ಬದಲಾಗದ, ಒಂದೇ ಬಗೆಯಾಗಿ ಉಳಿಯುವ. ಉದಾ- ಅವಿಕಲ್ಪವಾದ ಸಮಾಧಿ (ಸಂ. ಅ =ಇಲ್ಲ, ವಿಕಲ್ಪ = ಬದಲಾವಣೆ)

**೭. ಅಶಿವ**

(ಈ) ಅಮಂಗಲ, ಕೆಡಕುಂಟುಮಾಡುವ. ಉದಾ-ಅಶಿವವಾದ ವಿಚಾರಗಳು. (ಸಂ. ಅ =ಅಲ್ಲ, ಶಿವ =ಮಂಗಲಕರ)

**೮. ದಯಿತ**

(ಅ) ಪ್ರಿಯ, ಪ್ರೀತಿಪಾತ್ರ, ಪ್ರಣಯಿ, ಉದಾ- ಅವಳು ದಯಿತನನ್ನೇ ಮದುವೆಯಾದಳು. (ಸಂ.)

**೯. ದಾಯಿತ್ವ**

(ಅ) ಹೊಣೆಗಾರಿಕೆ, ಜವಾಬ್ದಾರಿ, ಕರ್ತವ್ಯ- ಉದಾ- ಇದರಲ್ಲಿ ನನ್ನ ದಾಯಿತ್ವವೆಷ್ಟು? (ಸಂ. ದಾಯಿ- ಕೊಡತಕ್ಕವ)

**೧೦. ಸೌಸವ**

(ಆ) ಪರಿಮಳ, ಕಂಪು, ಮಗಮಗಿಸುವಿಕೆ, ಉದಾ- ಹೂವಿನ ಸೌಸವ (ಕನ್ನಡ).

**೧೧. ತುಡುಗುಣಿ**

(ಇ) ಕದ್ದು ತಿನ್ನುವವ, ಕದ್ದು ತಿನ್ನುವವಳು. ಉದಾ- ತುಡುಗುಣಿ ದನಗಳು ಬೇಲಿ ಮುರಿದು ಬಂದವು. (ಕನ್ನಡ. ತುಡುಗು =ಕಳವು, ಉಣಿ =ಉಣ್ಣುವ)

**೧೨. ಸಸನೆ**

(ಈ) ಸುಮ್ಮನೆ, ಮೌನ, ಮೌನವಾಗಿರುವದು, ಅಲುಗದಿರುವದು. ಉದಾ- ಸಸನೆ ಇರಲಾರದವನು (ಕನ್ನಡ)

### ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಎಷ್ಟು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಯನ್ನು ತಿಳಿಯಿರಿ.

೬-೮ ಸರಿಯಿದ್ದರೆ ..... ಸಾಧಾರಣ
೯-೧೦ ,, ..... ಉತ್ತಮ
೧೧-೧೨ ,, .... ಅತ್ಯುತ್ತಮ

## ಸಾಮಾಜಿಕ ಚಿಂತನೆ

# ಸರಳ ಸಮಸ್ಯೆಗೆ ಸಂಕೀರ್ಣ ಉತ್ತರ

★ ಪ್ರಹ್ಲಾದ ಅಗಸನಕಟ್ಟೆ

ನಮ್ಮಂತಹ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬಡತನ, ಅಜ್ಞಾನ, ಅನಕ್ಷರತೆಗಳ ಜೊತೆ ಜೊತೆಗೆ ಅನಾರೋಗ್ಯವೂ ಸಮಾಜವನ್ನು ಸದಾ ಕಾಡುವ ಒಂದು ಶಾಪವಾಗಿದೆ. ಈ ಮುನ್ನ ವಾತಾವರಣದೊಳಗಿನ ಯಾವುದಾದರೂ ಒಂದು ವೈರಸ್ ಅಥವಾ ಬ್ಯಾಕ್ಟೀರಿಯವು ದೇಹ ವನ್ನು ಪ್ರವೇಶಿಸಿದರೆ ವ್ಯಕ್ತಿಗೆ ಜಡ್ಡು ಬರುತ್ತ ದೆಂದು ಸುಲಭವಾಗಿ ನಂಬಲಾಗುತ್ತಿತ್ತು. ಆದರೆ ಈಗ ನಮ್ಮ ಜಡ ಸಮಾಜ ಮತ್ತು ಆದರ ರಾಜಕೀಯ, ಆರ್ಥಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳು ವ್ಯಕ್ತಿಯ ಆರೋಗ್ಯವನ್ನು ನಿಯಂತ್ರಿ ಸುತ್ತವೆಯಷ್ಟೇ ಅಲ್ಲ, ನಿರ್ಧರಿಸುತ್ತವೆ ಕೂಡ ಎಂಬ ವಾಸ್ತವವಾದಿ ತಿಳಿವಳಿಕೆ ಮೂಡುತ್ತಿದೆ.

ವ್ಯಕ್ತಿಯೊಬ್ಬನ ಆರೋಗ್ಯದ ಮೇಲೆ ಅವನು ವಾಸಿಸುವ ಪರಿಸರ, ಅಲ್ಲಿನ ಹವಾ ಮಾನ, ಊಟೋಪಚಾರಗಳು, ಅವನ ಮತ್ತು ಆ ದೇಶದ ವಾರ್ಷಿಕ ವರಮಾನ, ಕುಟುಂಬದ ಗಾತ್ರ, ಜನಸಂಖ್ಯೆಯ ಬೆಳವಣಿಗೆ, ವ್ಯಕ್ತಿಯ ಜಾತಿ, ಧರ್ಮ ಹಾಗೂ ಸಂಸ್ಕೃತಿಗಳೆಲ್ಲವೂ ಒಂದಲ್ಲ ಒಂದು ರೀತಿ ಪ್ರಭಾವ ಬೀರುತ್ತವೆಂಬ ತಿಳಿವಳಿಕೆ ಈಗಣ ಸಾಮಾಜಿಕ ಅಧ್ಯಯನದಿಂದ ಸಾಬೀತಾಗುತ್ತದೆ.

ತಲೆನೋವು ಮತ್ತು ಚಳಿಜ್ವರದಿಂದ ನಡು ಗುತ್ತಾ ಬರುವವನ ರೋಗ ನಿವಾರಣೆ ಕೇವಲ ನಾಲ್ಕು ಪ್ಯಾರಾಸಿಟಮಲ್/ಕ್ರೋಸಿನ್ ಗುಳಿಗೆಗ ಳಲ್ಲಿ ಅಡಗಿರುವುದಿಲ್ಲ. ಹಾಗೆ ಜ್ವರವನ್ನು ತಗ್ಗಿಸಿ ದಲ್ಲಿ ಅದನ್ನು ತಾತ್ಕಾಲಿಕ ದಮನ ಅಥವಾ ಶಮನ ಅನ್ನಬಹುದಷ್ಟೇ.

ರೋಗದ ಚರಿತ್ರೆಯನ್ನು ರೋಗಿಯ ಬಾಯಿಂದ ಕೇಳಲು ಉಪಕ್ರಮಿಸಿದೊಡನೆ ಸಾಮಾಜಿಕ ಕಹಿ ಸತ್ಯಗಳು ಬೆಳಕಿಗೆ ಬರತೊಡ ಗುತ್ತವೆ. ಅವನು ಹೇಳಬಹುದು-“ನಿನ್ನೆ ಬೇಸರ ದಿಂದ ಕುಡಿದು ಮನೆಗೆ ಬರುವಾಗ ಮಳೆಯಲ್ಲಿ ನೆನೆದೆ," ಎಂದು. “ಯಾಕೆ ಬೇಸರ ?" ಎಂಬ ಮರು ಪ್ರಶ್ನೆಗೆ ಅವನಿಂದ ಬರುವ ಉತ್ತರ, “ಓದಿದ್ದೇನೆ, ಕೆಲಸ ಸಿಕ್ಕಿಲ್ಲ," ಎಂದು ಇರಬ ಹುದು. ಅಥವಾ ಸಿಕ್ಕ ಕೆಲಸದಲ್ಲಿ ತೃಪ್ತಿಯಿಲ್ಲ. ಬರುವ ಸಂಬಳ ಕಡಿಮೆ, ಮನೆಯಲ್ಲಿ ಜಗಳ ಎಂದು ಇರಬಹುದು. ಹೀಗೆಯೆ ಅವನ ಉದ್ಯೋಗಕ್ಕೂ-ನಿರುದ್ಯೋಗಕ್ಕೂ, ಅವನ ಕುಡಿತಕ್ಕೂ ಅವನ ತಲೆನೋವಿಗೂ ಯಾರಿಗೂ ಕಾಣದ ನೇಯ್ಗೆಯ ಎಳೆಗಳು ಪರಸ್ಪರ ಬೆಸೆದು ಕೊಂಡಿವೆ. ಇದೊಂದು ವಿಷವೃತ್ತ. ವೈದ್ಯನ ಉಪಚಾರ ನೀರ್ಗಲ್ಲ ತುದಿಯಂತೆಯೆ. ಅವನು ದವಾಖಾನೆಗೆ ಬರುತ್ತಲೇ ಇರುತ್ತಾನೆ, ವೈದ್ಯ ಗುಳಿಗೆ ಬರೆದುಕೊಡುತ್ತಲೇ ಇರುತ್ತಾನೆ. ರೋಗಿಗೆ ಜ್ವರ ಹೋಗಲಿಲ್ಲವೆಂಬ ವಿಷಾದ, ವೈದ್ಯನಿಗೆ ಯಾಕೆ ಜ್ವರ ಹೋಗಲಿಲ್ಲವೆಂಬ ವಿಸ್ಮಯ, ಇಷ್ಟೇ ಆದದ್ದು ಮತ್ತು ಆಗುತ್ತಿರು ವುದು.

ನಾವು ಯಾವುದನ್ನು ಆಧುನಿಕ ರೋಗಗ ಳೆಂದು ಕರೆಯುತ್ತೇವೆಯೋ ಅಂಥಲ್ಲಿ ನಾವು ಇದನ್ನೇ ಕಾಣುತ್ತೇವೆ. ಹೃದ್ರೋಗ, ಕ್ಯಾನ್ಸರ್, ಮಧುಮೇಹ, ರಕ್ತದೊತ್ತಡ ಹಾಗೂ ಮಾನಸಿಕ ತೊಂದರೆಗಳಿಗೂ ನಮ್ಮ ಸಾಮಾಜಿಕ, ಮಾನ ಸಿಕ, ಜೈವಿಕ ಒತ್ತಡಗಳಿಂದ ಉಂಟಾದ ಕಾಯಿಲೆ ಗಳೆಂದು ಕರೆಯುತ್ತಾರೆ. ಹಾಗೆಯೆ ಕೀಲು ನೋವುಗಳು, ಬೊಜ್ಜು, ಕರುಳ ಉರಿತಗಳು,

ಆ್ಯಸಿಡಿಟಿ, ತಲೆನೋವು, ಮಲಬದ್ಧತೆ, ಭೇದಿ ಹಾಗೂ ಮಲರೋಗಗಳಿಗೂ ನಮ್ಮ ಜೀವನ ವಿಧಾನಕ್ಕೂ ಪರಸ್ಪರ ಸಂಬಂಧವಿದೆ. ಎಲ್ಲಿಯವರೆಗೆ ನಾವಿರುವ ಸಮಾಜ ಮತ್ತು ದೈನಂದಿನ ಬದುಕಿನಲ್ಲಿ ಸಮಗ್ರ ಬದಲಾವಣೆಗಳಾಗುವುದಿಲ್ಲವೋ ಅಲ್ಲಿಯವರೆಗೆ ಔಷಧಿ ಕಂಪನಿಗಳ ಮತ್ತು ವೈದ್ಯರ ಉದ್ಧಾರವಾಗುತ್ತಾ ಹೊಸ ಹೊಸ ಆಧುನಿಕ ಆಸ್ಪತ್ರೆಗಳಿಗೆ ದಾರಿಮಾಡಿ ಕೊಟ್ಟಂತಾಗುತ್ತದೆ!

ನಮ್ಮ ಸಮಾಜದಲ್ಲಿನ ವಾತಾವರಣ ಎಷ್ಟು ಮಲಿನವಾಗಿದೆಯೆಂಬುದನ್ನು ಈಗ ಜನಿಸುತ್ತಿರುವ ಮಗುಗಳ ತೂಕ ನೋಡಿಯೇ ಹೇಳಬಹುದು. ಅಮೆರಿಕದಂತಹ ದೇಶದಲ್ಲಿ ಆಗತಾನೆ ಹುಟ್ಟಿದ ಮಗುವಿನ ತೂಕ ಮೂರು ಕಿಲೋದಿಂದ ಮೂರೂವರೆ ಕಿಲೋ ಇದ್ದರೆ ನಮ್ಮ ಭಾರತೀಯ ಶಿಶುವಿನ ತೂಕ ಎರಡೂವರೆ ಕಿಲೋಗಿಂತ ಕಡಿಮೆ. ಇದು ಕೇವಲ ಶಿಶುವಿನ ಆರೋಗ್ಯವನ್ನು ಮಾತ್ರ ಹೇಳುತ್ತಿಲ್ಲ. ಹೆತ್ತ ತಾಯಿಯ ದುರ್ಬಲ ಆರೋಗ್ಯದ ಬಗೆಗೂ ಹೇಳುತ್ತದೆ. ಹೀಗೆ ಹುಟ್ಟುವ ನೂರು ಮಕ್ಕಳಲ್ಲಿ ಐದು ಮಕ್ಕಳು ತಮ್ಮ ಮೊದಲ ವರ್ಷದ ಹುಟ್ಟುಹಬ್ಬ ಕಾಣುವ ಮೊದಲೇ ಈ ತಾಪತ್ರಯದ ಲೋಕಕ್ಕೆ ಅಂತಿಮ ವಿದಾಯ ಹೇಳುತ್ತವೆ.

ತಾಯಿಯ ಆರೋಗ್ಯವೇ ಮಗುವಿನ ಆರೋಗ್ಯವೆಂದೆಲ್ಲ ನಾವು ಹೇಳುತ್ತೇವೆಯಾದರೂ ವಾಸ್ತವವಾಗಿ ನಮ್ಮ ತಾಯಂದಿರು ಹೇಗಿದ್ದಾರೆ ಎನ್ನುವುದರತ್ತ ಸಾಕಷ್ಟು ಗಮನಹರಿಸುವುದೇ ಇಲ್ಲ. ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಪ್ರತಿದಿನ ಎಲ್ಲರಿಗಿಂತ ಮೊದಲು ಕೆಲಸಕ್ಕೆ ತೊಡಗುವ ಆಕೆ ರಾತ್ರಿ ಎಲ್ಲರೂ ಉಂಡು ಮಲಗಿದ ಮೇಲೆ ಮಲಗುತ್ತಾಳೆ. ಗಂಡನ ಆರೈಕೆ, ಮಕ್ಕಳ ಆರೈಕೆ, ಗೃಹಕೃತ್ಯಗಳ ನಡುವೆ ತನ್ನ ಆರೈಕೆ ಮಾಡಿಕೊಳ್ಳಲೂ ಬಿಡುವಿಲ್ಲದಂತಾಗಿದೆ. ಜನಸಂಖ್ಯೆಯ ಅರ್ಧದಷ್ಟಿರುವ ಮಹಿಳೆಯರು ಜಗತ್ತು ಉತ್ಪಾದಿಸುವ ಅರ್ಧದಷ್ಟು ಆಹಾರವನ್ನು ಉತ್ಪಾದಿಸಿದರೂ ಅವರಿಗೆ ಆದರಲ್ಲಿ ದೊರೆಯುವುದು ಕೇವಲ ಕಾಲುಭಾಗ ಮಾತ್ರ. ಜಗತ್ತಿನ ಬಂಡವಾಳ ಮತ್ತು ಭೂಮಿಯಒಡೆತನದಲ್ಲಿ ಅವರಿಗಿರುವ ಒಡೆತನ ನೂರರಲ್ಲಿ ಒಂದು ಭಾಗ ಮಾತ್ರ.

ಯೌವನದಲ್ಲಿ ಆಕೆ ತಲಪುವ ತೂಕ ಹಾಗೂ ಎತ್ತರ ಆಕೆಗೆ ಬಾಲ್ಯದಲ್ಲಿ ದೊರೆತ ಆರೈಕೆಯನ್ನು ಅವಲಂಬಿಸಿರುತ್ತದೆ. ಅಮೆರಿಕದ



ಹರೆಯದ ಹುಡುಗಿಯ ಸರಾಸರಿ ತೂಕ ೫೮ ಕಿಲೋ ಇದ್ದರೆ ಹೆರಿಗೆಮನೆ ಮತ್ತು ಅಡಿಗೆಮನೆಗಳಲ್ಲಿ ಅಡ್ಡಾಡುವ ನಮ್ಮ ಹೆಣ್ಣುಮಕ್ಕಳು ಸದಾ ರಕ್ತಹೀನತೆ ಮತ್ತು ಅಪೌಷ್ಟಿಕತೆಯಿಂದ ಬಳಲುತ್ತಾರೆ. ಇಂಥ ತಾಯಂದಿರು ಹೆತ್ತ ಶಿಶುಗಳು ಹೇಗಿರಬೇಡ ? ಹೀಗಾಗಿ ನಮ್ಮಲ್ಲಿ ಶಿಶುಮರಣ ಮತ್ತು ಗರ್ಭಿಣಿಯರ ಮರಣ ಪ್ರಮಾಣ ಬಹಳ.

ನಮ್ಮ ದೇಶದಲ್ಲಿ ಶೇಕಡಾ ಇಬ್ಬರಿಗೆ ಮಿತಿ ಮೀರಿದ ಆಹಾರ, ಹತ್ತು ಜನಕ್ಕೆ ವಿಪುಲವಾಗಿ, ಮೂವತ್ತು ಜನಕ್ಕೆ ಸಾಕಷ್ಟು, ಉಳಿದ ಐವತ್ತೆಂಟು ಜನರಿಗೆ ಬಹಳ ಕಡಿಮೆ ಆಹಾರ ದೊರೆಯುತ್ತದೆಂದು ತಿಳಿದುಬಂದಿದೆ. ನಾವು ಆಹಾರದ ವಿಷಯದಲ್ಲಿ ಸ್ವಾವಲಂಬಿಗಳಾಗಿದ್ದೇವೆಂದು ಘೋಷಿಸಿಕೊಳ್ಳುತ್ತಿದ್ದರೂ ನೂರಕ್ಕೆ ಐವತ್ತು ಜನ ಅರೆಹೊಟ್ಟೆಯಿಂದ ಬದುಕುತ್ತಿದ್ದು ಅವರ ಆರೋಗ್ಯ ಸ್ಥಿತಿ ಊಹಿಸಲಿಕ್ಕೂ ಸಾಧ್ಯವಾಗದಷ್ಟು ಹೀನವಾಗಿದೆ.

ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆಯಿಂದಾಗಿ ಪ್ರತಿವರ್ಷ ಈ ದುಃಖಮಯ ದೇಶಕ್ಕೆ ಒಂದೂವರೆ ಕೋಟಿಗಿಂತಲೂ ಹೆಚ್ಚು ಮಕ್ಕಳು ಪ್ರವೇಶಿಸುತ್ತಿದ್ದಾರೆ. ಜನನ ಪ್ರಮಾಣ ಶೇಕಡಾ ೩.೨.೭ರಷ್ಟಿದೆ. ಹೀಗೆ ಪ್ರತಿವರ್ಷ ಈ ದೇಶದೊಳಗೊಂದು ಆಸ್ಟ್ರೇಲಿಯಾ ಖಂಡ ಸೇರ್ಪಡೆಯಾಗುತ್ತಿದೆ. ಬರುವ ಮಕ್ಕಳು ಬೇಡುವ ಬಾಯನ್ನೂ ದುಡಿಯುವ ಕೈಗಳನ್ನೂ ಹೊತ್ತು ಬರುತ್ತವೆ. ಹೀಗಾಗಿ ಇಲ್ಲಿ ಹುಟ್ಟುವ ಶಿಶುಗಳಿಗೆ ಯಾರೂ ಮಡಿ ಹಾಸಿ ಬರಮಾಡಿಕೊಳ್ಳುವುದಿಲ್ಲ. ಶ್ರೀಮಂತ ದೇಶಗಳಲ್ಲಿ ನೂರರಲ್ಲಿ ಒಂದು ಮಗು ಸತ್ತರೆ ನಮ್ಮಲ್ಲಿ ೫ ಮಕ್ಕಳು ಸಾಯುತ್ತವೆ. ಶ್ರೀಮಂತ ದೇಶದ ಆಯುಷ್ಯ ಪ್ರಮಾಣ ಸರಾಸರಿ ೭೦ರಷ್ಟಿದ್ದರೆ ನಮ್ಮ ದೇಶದ ಜನರ ಆಯುಷ್ಯ ಪ್ರಮಾಣ ಕೇವಲ ಐವತ್ತು ವರ್ಷ. ನಮ್ಮ ದೇಶದ ಪ್ರಜೆಗಳ ದಿನವೊಂದರ ಆದಾಯ ಇಪ್ಪತ್ತು ರೂಪಾಯಿಗಿಂತಲೂ ಕಡಿಮೆಯಿದೆ. ನಾವು ಪ್ರತಿ ಚದುರ ಕಿಲೋಮೀಟರಿಗೆ ೨೬೭ ಜನರಂತೆ ನೆಲಸಿದ್ದು ಒಬ್ಬರ ಕಾಲನ್ನು ಮತ್ತೊಬ್ಬರು ತುಳಿಯುತ್ತಾ ನಿಂತಿದ್ದೇವೆ. ಆದ್ದರಿಂದ ಬಡ ದೇಶಗಳಲ್ಲಿ ಜನ ಅಪೌಷ್ಟಿಕತೆಗೆ ಮತ್ತು ಸಾಂಕ್ರಾಮಿಕ ರೋಗಗಳ ದವಡೆಗೆ ಸಿಕ್ಕು ಸಾಯುತ್ತಾರೆ. ಕಣ್ಣು ಮರೆಯಾದವೆಂದು ಭಾವಿಸಿದ್ದ ಪ್ಲೇಗ್, ಮಲೇರಿಯಾ, ಕಾಲರಾ, ಡೆಂಗ್ಯು ಜ್ವರಗಳು ಮತ್ತೆ ಬಂದು ಬಾಗಿಲು ಬಡಿಯುತ್ತಿವೆ. ಇದರೊಡನೆ ಶ್ರೀಮಂತ ದೇಶಗಳು ರವಾನಿಸುತ್ತಿರುವ ಏಡ್ಸ್, ಕ್ಯಾನ್ಸರ್ ನಮ್ಮ ಮನೆಯೊಳಗೆ ಬಂದು ಈಗಾಗಲೇ ನೆಲೆಯೂರಿ ಆತಿಥ್ಯ ಅನುಭವಿಸುತ್ತಿವೆ. ಸಾಮಾಜಿಕ, ಆರ್ಥಿಕ ಸಮಸ್ಯೆಗಳು ಆರೋಗ್ಯದ ಸಮಸ್ಯೆಗಳಾಗಿ ವೇಷ ಬದಲಿಸುತ್ತಿವೆ.

ಇಂಥ ಅನಾರೋಗ್ಯಕರ ಪರಿಸ್ಥಿತಿಯಲ್ಲಿ ನಮ್ಮ ಸರ್ಕಾರಗಳು ಹಳ್ಳಿಯ ಜನರ ಆರೋಗ್ಯಕ್ಕಾಗಿ ಮಾಡುವ ವೆಚ್ಚ ಪ್ರತಿವರ್ಷ ತಲಾ ಹದಿಮೂರು ಪೈಸೆ ಮಾತ್ರ. ನಗರಗಳಲ್ಲಿ ಆಧುನಿಕ ಶ್ರೀಮಂತ ಪಾಷ್ ಹೊಟೆಲ್‌ಗಳೋಪಾದಿಯಲ್ಲಿ ಆಸ್ಪತ್ರೆಗಳನ್ನು ನಿರ್ಮಿಸಲು ಉತ್ಸುಕವಾಗುವ ಸರ್ಕಾರಗಳು ಹಳ್ಳಿಗಳಲ್ಲಿನ ಆಸ್ಪತ್ರೆಗಳಿಗೆ ವೈದ್ಯರನ್ನು, ಅಗತ್ಯವಾದ ಔಷಧಿಗಳನ್ನು ಪೂರೈಸಲು ವಿಫಲವಾಗುತ್ತಿವೆ.

ಆರ್ಥಿಕ ಉದಾರೀಕರಣ ಮತ್ತು ಅಂತಾರಾಷ್ಟ್ರೀಯ ಮಾರುಕಟ್ಟೆಗಳು ನಮ್ಮ ಆರೋಗ್ಯವನ್ನು ನಿಯಂತ್ರಿಸುತ್ತಿವೆ. ತಂಬಾಕು ಮತ್ತು ನೀಲಗಿರಿ ಬೆಳೆಯನ್ನು ಪ್ರೋತ್ಸಾಹಿಸಲು ಸರ್ಕಾರಗಳು ನೀಡುವ ಸಬ್ಸಿಡಿ, ಸವಲತ್ತು ಮತ್ತು ಸಹಾಯಧನದ ಕಾಲುಭಾಗವನ್ನು ಕ್ಯಾನ್ಸರ್ ನಿಯಂತ್ರಣಕ್ಕೆ ನೀಡುವುದಿಲ್ಲ. ನಮ್ಮ ಟಿ.ವಿ, ರೇಡಿಯೋ ಮತ್ತು ಚಲನಚಿತ್ರದಲ್ಲಿ ಪ್ರದರ್ಶಿತವಾಗುವ ಜಾಹೀರಾತುಗಳು ನಮ್ಮ ಊಟೋಪಚಾರಗಳನ್ನು, ಆಹಾರಾಭ್ಯಾಸಗಳನ್ನು ದಿನೇ ದಿನೇ ನಾಶಮಾಡುತ್ತಿವೆ. ಅಡುಗೆ ಮಾಡುವ ವಿಧಾನ ಮತ್ತು ನಮ್ಮ ಊಟೋಪಚಾರಗಳು ನಮ್ಮ ಸಂಸ್ಕೃತಿಯ ಪ್ರತಿಬಿಂಬ.

ಎಲ್ಲಿಯವರೆಗೆ ಜನತೆ ಸಂಸ್ಕೃತಿಗೆ ಅಂಟಿ

ಕೊಂಡಿರುತ್ತದೆಯೋ ಅಲ್ಲಿಯವರೆಗೆ ಜನತೆಯ ಮೇಲೆ ನಾಗರಿಕತೆ ಮೋಡಿ ಮಾಡುವುದು ಕಷ್ಟ. ಅದು ಕೂಡ ಸಂಸ್ಕೃತಿಯ ಹುಸಿವೇಷವನ್ನೇ ಧರಿಸಿ ಬರುತ್ತದೆ. ನಮ್ಮ ಆಹಾರಗಳನ್ನೇ ನಮ್ಮಿಂದ ಕಸಿದುಕೊಂಡು ಅದಕ್ಕೆ ನಾನಾ ಬಣ್ಣ, ರೂಪ, ಆಕಾರಗಳನ್ನು ಕೊಟ್ಟು ನಮ್ಮನ್ನು ಖರೀದಿಸುವಂತೆ ಪ್ರೇರೇಪಿಸುತ್ತದೆ. ಸಿದ್ಧವಾದ ತಿನಿಸು, ತಿಂಡಿ ತೀರ್ಥಗಳಿಗೆ ಸಿದ್ಧ ಮನಸ್ಸನ್ನು ರೂಪಿಸುತ್ತದೆ. ಕರಿದ ಪದಾರ್ಥ, ಹುರಿದ ಪದಾರ್ಥ, ಉಪ್ಪು ಮಿಶ್ರಿತ ಪದಾರ್ಥಗಳ ಸೇವನೆ ಹೃದ್ರೋಗಕ್ಕೆ, ರಕ್ತದೊತ್ತಡಕ್ಕೆ ದಾರಿ ಮಾಡಿಕೊಡುತ್ತದೆ.

ಅನೇಕ ಕ್ರೀಡೆ, ಸಿನಿಮಾ, ಕಲಾಪ್ರದರ್ಶನಗಳಿಗೆ ತಂಬಾಕು ಕಂಪನಿಗಳು, ಮದ್ಯ ಕಂಪನಿಗಳು ತಂಪು ಪಾನೀಯ ತಯಾರಿಕಾ ಕಂಪನಿಗಳು ಪ್ರಾಯೋಜಕತ್ವದ ಹೆಸರಿನಲ್ಲಿ ಹೇರಳ ಹಣ ಸುರಿಯುತ್ತವೆ. ಆ ಕಂಪನಿಯ ಮನದಾಳದಲ್ಲಿ ಜನತೆಯನ್ನು ಧೂಮಪಾನಿಗಳನ್ನಾಗಿ ಮತ್ತು ಮದ್ಯವ್ಯಸನಿಗಳನ್ನಾಗಿ ಮಾಡುವುದಷ್ಟೇ ಆಗಿರುತ್ತದೆ. ಒಂದು ಅಂದಾಜಿನ ಪ್ರಕಾರ ಈ ಹತ್ತು ವರ್ಷಗಳಲ್ಲಿ ಕಾಲೇಜು ವಿದ್ಯಾರ್ಥಿಗಳಲ್ಲಿ ತಂಬಾಕು ಸೇವನೆ (ಪಾನ್‌ಬೀಡಾ, ಗುಟುಕಾ, ಮಸಾಲಾ, ಸಿಗರೇಟ್) ಶೇಕಡಾ ೫೦ರಷ್ಟು ಏರಿದೆ. ಇಂಥ ಸಂಸ್ಥೆಗಳು ಏರ್ಪಡಿಸುವ ಸಮಾರಂಭಗಳಲ್ಲಿ ಸಿನಿಮಾ ನಟರೂ ರಾಜಕಾರಣಿಗಳೂ ಭಾಗವಹಿಸುವ ಮೂಲಕ ಅನಾರೋಗ್ಯಕರ ಹವ್ಯಾಸವನ್ನು ಉದ್ಘಾಟಿಸುತ್ತಾರೆ.

ಹಾಗೆಯೇ ಅಂತಾರಾಷ್ಟ್ರೀಯ ಮಟ್ಟದಲ್ಲಿ ಏರುತ್ತಿರುವ ಯುದ್ಧಭಯ ಮತ್ತು ಶಸ್ತ್ರಾಸ್ತ್ರಗಳ ಪೈಪೋಟಿ ನಮ್ಮ ಆರೋಗ್ಯದ ಮೇಲೆ ಪರೋಕ್ಷ ಪ್ರಭಾವ ಬೀರುತ್ತಿದೆ. ಸರ್ಕಾರಗಳು ನೆಪವೊಡ್ಡಿ ತಮ್ಮ ಬಜೆಟ್ಟಿನ ಬಹುಪಾಲು ಹಣವನ್ನು ಶಸ್ತ್ರಾಸ್ತ್ರ ಖರೀದಿಗೆ ಮತ್ತು ಸೈನಿಕರ ತರಬೇತಿಗೆ ಮೀಸಲಿಡುವ ಅನಿವಾರ್ಯತೆಗೆ ಸಿಲುಕುತ್ತವೆ. ಒಬ್ಬ ಸೈನಿಕನಿಗೆ ಒದಗಿಸುವ ತರಬೇತಿ ಮತ್ತು ಶಸ್ತ್ರಾಸ್ತ್ರಗಳಿಂದ ನೂರು ವಿದ್ಯಾರ್ಥಿಗಳಿಗೆ ಶಿಕ್ಷಣವನ್ನು ಕೊಡಬಹುದು. ಒಂದು ನ್ಯೂಕ್ಲಿಯರ್ ಸಬ್‌ಮೆರಿನ್ ತಯಾರಿಕೆಗೆ ತಗಲುವ ವೆಚ್ಚದಿಂದ ೫೦೦,೦೦೦ ಮನೆಗಳನ್ನು ನಿರ್ಮಿಸಬಹುದು. ಒಂದು ಜೆಟ್ ಫೈಟರ್ ತಯಾರಿಕೆಗೆ ತಗಲುವ ವೆಚ್ಚದಿಂದ ೫೦,೦೦೦ ಹಳ್ಳಿಗಳಿಗೆ ವೈದ್ಯಕೀಯ ಸೌಲಭ್ಯ ಒದಗಿಸಬಹುದು. ಶಿಕ್ಷಣ ಮತ್ತು ಆರೋಗ್ಯಕ್ಕೆ ಅಗತ್ಯವಾದ ಹಣವನ್ನು ಯುದ್ಧ ಸಿದ್ಧತೆಗೆ ಮತ್ತು ಶಸ್ತ್ರಾಸ್ತ್ರಗಳ ಮೇಲೆ ಸುರಿಯಲಾಗುತ್ತಿದೆ.

ಹಾಗೆಯೇ ಇಥೋಪಿಯಾದಂತಹ ಆಫ್ರಿಕದ ದೇಶಗಳು ಹಸಿವಿನಿಂದ ಹಪಹಪಿಸುತ್ತಿದ್ದರೂ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಗೋದಿಯ ಬೆಲೆಯನ್ನು ಕುಸಿಯದಂತೆ ತಡೆಯಲು ಅಮೆರಿಕಾ ದೇಶ ಲಕ್ಷಗಟ್ಟಲೇ ಟನ್ ಗೋದಿಯನ್ನು ಪ್ರತಿವರ್ಷ ಸಮುದ್ರಕ್ಕೆ ಸುರಿಯುತ್ತಿದೆ. ತನ್ನಲ್ಲಿ ಬಳಸಬಾರದೆಂದು ನಿಷೇಧಿಸಲ್ಪಟ್ಟ ಔಷಧಗಳನ್ನು ಬಡ ದೇಶಗಳಿಗೆ ಮಾರುತ್ತಿದೆ.

## ಕಾಲ

ಬಾಲ್ಯದ
ಮುಗ್ಧ ಕುತೂಹಲವ
ತಣಿಸಿ
ಹರೆಯದ ಭ್ರಮೆಗಳ
ಬಿಡಿಸಿಕೊಂಡು
ಮುಪ್ಪಿನಲಿ ವಾಸ್ತವದ
ಚಿಂತನೆ ಮಾಡುವ
ಹೊತ್ತಿಗೆ
"ಇದೋ ಬಂದೆ"
ಎನ್ನುತ್ತಾನೆ ಕಾಲ!

★ ದೇವಯಾನಿ

ನಗರಗಳು ಭರದಿಂದ ಬೆಳೆಯುತ್ತಿವೆ. ೧೯೮೧ರಲ್ಲಿ ೧೫.೯೪ ಕೋಟಿಯಷ್ಟಿದ್ದ ನಗರಗಳ ಜನಸಂಖ್ಯೆ ೧೯೯೧ರಲ್ಲಿ ೨೧.೭೧ ಕೋಟಿ ಆಗಿದೆ. ಇವುಗಳನ್ನು "ಕ್ಯೂ ಸಾಮ್ರಾಜ್ಯ" ಎಂದು ಬೇಕಾದರೂ ಕರೆಯಬಹುದು. ಇಲ್ಲಿ ಯಾವುದೂ "ಕ್ಯೂ" ಇಲ್ಲದೆ ಸಿಗುವುದಿಲ್ಲ. ನಗರೀಕರಣ ಎಷ್ಟಾಗಿದೆ ಎನ್ನುವುದರ ಸುಲಭ ಅಳತೆಗೋಲು ಅಲ್ಲಿನ ಜನರ ಮಲಬದ್ಧತೆಯ ಸಮಸ್ಯೆಯಿಂದ ಗುರುತಿಸಬಹುದೆಂದು ಹೇಳಲಾಗುತ್ತಿದೆ. ಮಾನಸಿಕ ಒತ್ತಡ, ಉದ್ವೇಗ, ಆತಂಕ, ಅನಗತ್ಯ ಪೈಪೋಟಿ, ಅನಾಥ ಪ್ರಜ್ಞೆ ಮುಂತಾದವುಗಳ ತವರುಮನೆ ಈ ನಗರಗಳು. ಮೂಲಭೂತ ಸೌಲಭ್ಯಗಳ ಕೊರತೆಯಿಂದಾಗಿ ನಗರವಾಸಿಗಳ ಆರೋಗ್ಯ ಅಪಾಯದ ಅಂಚನ್ನು ತಲುಪಿಬಿಟ್ಟಿದೆ. ಕಣ್ಣಿಗೆ ಕಣ್ಣು ಪಟ್ಟಿ, ಮೂಗಿಗೆ ಮೂಗುಪಟ್ಟಿ, ತಲೆಗೆ ಶಿರಸ್ತ್ರಾಣ ಧರಿಸಿಕೊಂಡು ಓಡಾಡುವ ದೃಶ್ಯ ಇದನ್ನೇ ಸೂಚಿಸುತ್ತದಲ್ಲವೆ!

ನಿದ್ರಾಹೀನತೆ ಆಧುನಿಕ ಮನುಷ್ಯನಿಗೆ ಅಂಟಿದ ಮತ್ತೊಂದು ಶಾಪ. "ಆಧುನಿಕ ಮನುಷ್ಯ ಯಾವಾಗ ಎಚ್ಚರವಾಗಿರಬೇಕೋ ಆಗ ತೂಕಡಿಸುತ್ತಾ ನಿದ್ದೆ ಮಾಡುತ್ತಿರುತ್ತಾನೆ; ಯಾವಾಗ ನಿದ್ದೆ ಮಾಡಬೇಕೋ ಆಗ ಎಚ್ಚರವಾಗಿರುತ್ತಾನೆ" ಎಂಬ ಎರಿಕ್ ಫ್ರಾಮ್‌ನ ಮಾತು ಈ ಕಾಲದ ಸತ್ಯವಾಗಿದೆ.

ಈಗ ಹೇಳಿ ಆರೋಗ್ಯ ಎಂದರೆ ಕೇವಲ ``A pill for every ill" ಎಂಬಷ್ಟು ಸರಳವೆ? ಸರಳ ಸಮಸ್ಯೆಗಳಿಗೆ ಸಂಕೀರ್ಣ ಉತ್ತರಗಳೇ ಈ ಕಲಿಗಾಲದ ಚೋದ್ಯ.

## ತಯಾರಾಗದ ಕಿರೀಟ

೧೯೩೩ರಲ್ಲಿ ಬರೋಡದ ಮಹಾರಾಜ, ಮೂರನೇ ಸಯಾಜಿರಾವ ಗಾಯಕವಾಡ ತಾವು ಬರೋಡದ ಸಿಂಹಾಸನವೇರಿದ ವಜ್ರಮಹೋತ್ಸವದ ಸಮಯದಲ್ಲಿ ಧರಿಸಲು ಹೊಸ ಕಿರೀಟವೊಂದನ್ನು ತಯಾರಿಸಲು ಜಗತ್ಪ್ರಸಿದ್ಧ ವಿನ್ಯಾಸಕಾರ ಕಾರ್ಟಿಯರ್‌ನನ್ನು ಕೇಳಿದ್ದರು. ಆ ಕಿರೀಟದಲ್ಲಿ ೧೨೫ ಕ್ಯಾರೆಟ್ ತೂಗುವ ದಕ್ಷಿಣದ ನಕ್ಷತ್ರವೆನಿಸಿದ ಬರೋಡದ ವಜ್ರವನ್ನು ಹಾಗೂ ಅದಕ್ಕೂ ಸ್ವಲ್ಪ ಚಿಕ್ಕದಾದ 'ಯುಗೀನ್' ವಜ್ರವನ್ನು ಅಳವಡಿಸುವಂತೆ ಹೇಳಲಾಗಿತ್ತು. ಮೊದಲು ಕಿರೀಟ ತಯಾರಿಸಲು ಒಪ್ಪಿದ್ದ ಕಾರ್ಟಿಯರ್ ಈ ಕಿರೀಟವನ್ನು ತಯಾರಿಸಲೇ ಇಲ್ಲ.

ಕಾರಣ? ತಮ್ಮ ಆಳ್ವಿಕೆಗೊಳಪಟ್ಟವರು ತಮಗಿಂತ ಹೆಚ್ಚಿನ ವೈಭವವನ್ನು ಅನುಭವಿಸುವುದನ್ನು ಸಹಿಸದ ಬ್ರಿಟಿಷರ ಮನೋಭಾವನೆ. ಕಿರೀಟ ತಯಾರಿಯ ವಿಷಯವನ್ನು ತಿಳಿದ ಬರೋಡದಲ್ಲಿದ್ದ ಬ್ರಿಟಿಷ್ ರೆಸಿಡೆಂಟ್ ವೈಸ್‌ರಾಯ್‌ಗೊಂದು ಕಾಗದ ಬರೆದು, ಗಾಯಕವಾಡ್ ಧರಿಸಲ್ಪಟ್ಟಿರುವ ಕಿರೀಟ, ಬ್ರಿಟಿಷ್ ಸಾರ್ವಭೌಮರ ಕಿರೀಟವನ್ನೇ ಹೋಲುವುದಲ್ಲದೆ ಭವ್ಯತೆಯಲ್ಲಿ ಬ್ರಿಟಿಷ್ ಚಕ್ರವರ್ತಿಯ ಕಿರೀಟಕ್ಕೆ ಪ್ರತಿಸ್ಪರ್ಧಿಯಂತಿದೆ ಎಂದು ತಿಳಿಸಿದ.

ವೈಸ್‌ರಾಯ್ ಲಂಡನ್ನಿನಲ್ಲಿದ್ದ ತಮ್ಮ ಹಿರಿಯ ಅಧಿಕಾರಿಗೆ ಆ ಬಗ್ಗೆ ಬರೆದ. ಬ್ರಿಟಿಷ್ ಸಾರ್ವಭೌಮತ್ವದ ಸೂಚಕ ವಸ್ತುಗಳೊಂದಿಗೆ ಸ್ಪರ್ಧಿಸುವಂತಹ ಈ ಭಾರತೀಯ ಮಹಾರಾಜನ ದಿಟ್ಟತನ ನೋಡಿ ಬ್ರಿಟಿಷ್ ಅಧಿಕಾರಿ ಸಿಟ್ಟಿಗೆದ್ದ. ಹೊಸ ಕಿರೀಟ ತಯಾರಿಸಲು ಕಾರ್ಟಿಯರ್‌ಗಿತ್ತ ಸೂಚನೆ ಬ್ರಿಟಿಷ್ ಅಧಿಕಾರಿಗಳಿಗೆ ಅಪ್ರಿಯವಾಗಿರುವುದೆಂಬ ವಿಷಯವನ್ನು ಸಯಾಜಿರಾವ್‌ಗೆ ಸೂಚ್ಯವಾಗಿ ತಿಳಿಸಲಾಯಿತು. ಈ ಸೂಚನೆಯನ್ನು ಅರ್ಥೈಸಿಕೊಂಡ ಗಾಯಕವಾಡರು ಕಿರೀಟ ತಯಾರಿಸಲು ಕೊಟ್ಟ ಸಲಹೆಯನ್ನು ಹಿಂತೆಗೆದುಕೊಂಡರು!

✷ ಟಿ.ಎಸ್. ಲಲಿತ

ಯಾವ ಜನ್ಮದ ಅನುಬಂಧವೊ........

# ಗೋಪೀಕೃಷ್ಣ

ಅನುಭವ

ವೈಶಾಖ ಬಹುಳ ನವಮಿ. ಅಲ್ಲೊಂದು ಇಲ್ಲೊಂದು ಹಸಿಮಳೆಯಾಗಿತ್ತಷ್ಟೆ. ಬೆಳಿಗ್ಗೆಯೇ ಬಿಸಿಲಿನ ಝಳ. ಆರು ಗಂಟೆಗೆಲ್ಲಾ ತೂರಿ ಬರುವ ಬಾಲರವಿಯ ಕಿರಣಗಳು ಕೊಠಡಿಯನ್ನೆಲ್ಲಾ ಆವರಿಸಿದ್ದವು. ಆದರೆ ಮನಸ್ಸು ಮಾತ್ರ ಖಿನ್ನವಾಗಿತ್ತು. ಪ್ರತಿ ವೈಶಾಖ ನವಮಿಗಿಂತ ಈ ಸಲ ಮನದಲ್ಲಿ ಹೆಚ್ಚು ದುಗುಡ, ದುಃಖ ತುಂಬಿತ್ತು. ಯಾಂತ್ರಿಕ ಕೆಲಸಗಳನ್ನು ಮನಸ್ಸಿಲ್ಲದ ಮನಸ್ಸಿನಿಂದ ನಿರ್ವಹಿಸುತ್ತಿದ್ದೆ. ಕೆಲವು ಬಾರಿ ಗಡಗಡ ಸದ್ದು ಮಾಡಿದರೆ ಮತ್ತೆ ಹಲವು ಬಾರಿ ಚೆನ್ನಾಗಿ ಎಣ್ಣೆ ಹಾಕಿದ ಚಕ್ರದಂತೆ ಸದ್ದಿಲ್ಲದೆ ಸುಸೂತ್ರವಾಗಿ ಉರುಳುವುದು- ಇದೇ ಜೀವನದ ಜಟಕಾ ಬಂಡಿ.

******

"ಲೇ, ಹುಡುಗಿ, ಆರತಿ ತಗೊಂಡು ಬಾ ಬೇಗ," ತಂದೆಯವರ ದನಿಗೆ ಲಗುಬಗೆಯಿಂದ ಅಮ್ಮ ಮುಂಬಾಗಿಲಿಗೆ ಬಂದಳು. ಹಾಲು ಬಣ್ಣದ ಕೈಗಳಲ್ಲಿ ಕೆಂಪು ಹಸಿರು ಬಳೆಗಳ ಘಲುಘಲು ಸದ್ದು. ಪುಟ್ಟ ಬೆಳ್ಳಿ ತಟ್ಟೆಯಲ್ಲಿ ಓಕುಳಿ; ಅದರಲ್ಲಿ ಬೆಳಗುವ ನೀಲಾಂಜನ. ಪಕ್ಕದಲ್ಲೇ ಅತ್ತಿಗೆ ಪಂಚವಾಳ ಹಿಡಿದು ನಿಂತಿದ್ದಳು.

"ಆರತಿ ಹಾಡು ಹೇಳಮ್ಮ" ಎಂದು ಆಜ್ಞಾಪಿಸುತ್ತಲೇ ತಂದೆಯವರೇ ಆರಂಭಿಸಿದ್ದರು, "ಆರುತಿ ಮಾಡಿರೆ ಶ್ರೀಲಕ್ಷ್ಮಿದೇವಿಗೆ ಆನಂದದಿಂದಲಿ ಆರುತಿಯಾ...." "ಬಾಮ್ಮ ತಾಯಿ, ಗೋಪೀ ಬಲಗಾಲಿರಿಸಿ ಬಾ, ಒಳಗೆ ಬಾ," ನಾಮಕರಣವೂ ಆಯಿತು. "ಇರೀಂದ್ರೆ, ಅಕ್ಕಿ-ಬೆಲ್ಲ ತಿನ್ನಲಿ," ಎಂದಳು ಅಮ್ಮ

ಸ್ವಲ್ಪವೇ ಅಕ್ಕಿ-ಬೆಲ್ಲ ತಿಂದು ಒಮ್ಮೆ ತಲೆ ಎತ್ತಿ ನೋಡಿ ತನ್ನ ಉದ್ದವಾದ ಬಾಲವನ್ನು ಅಲ್ಲಾಡಿಸಿ ಅಲ್ಲೇ ನಿಂತಳು ಗೋಪಿ. ಹೊಸ ಮನೆ, ಹೊಸ ಪರಿಸರ, ಹಿಂದೆಂದೂ ಕಾಣದ ಮುಖಗಳು.

"ನಡೀ ಗೌರಿ. ಇನ್ಯಾಕೆ ಇವ್ರೆ ನಿನ್ನೊಡೇರು. ನಿನ್ನ ಭೋ ಪಸಂದಾಗಿ ನೋಡ್ಕತಾರೆ," ಎಂದಾಗ ಲಕ್ಕಿನಕೊಪ್ಪದ ದ್ಯಾವೇಗೌಡರ ಕಂಠ ಗದ್ಗದಿತವಾಗಿತ್ತು. ಆದರೂ ಗೋಪಿ ನಿಂತ ಸ್ಥಳದಿಂದ ಹೆಜ್ಜೆ ಮುಂದಿಡಲಿಲ್ಲ.

"ಸೊಮಿ, ಕೃಷ್ಣಪ್ನೋರೆ, ಈಕೆ ಎಸ್ರು ಗೌರಿ, ನೀವು ಗೋಪಿ ಅಂದದ್ದು ಗಲಬಿಲಿಗೊಂಡಾಳೆ, ಹೊಸ ಜಾಗ ಬ್ಯಾರೆ ನೋಡ್ರಲ್ಲ."

"ಗೌರಿ' ನನ್ನ ಅತ್ತೆಮ್ನೋರ ಹೆಸ್ರು ಗೌಡ್ರೇ, ಅಲ್ಲದೆ ಈ ಹಸು ನನಗೆ ತಾಯಿ; ಕೃಷ್ಣನ್ನ ಸಲಹಿದ ತಾಯಿ ಗೋಪಿಯಲ್ಲವೆ? ನಮ್ಮ ಮನೆದೇವತೆ ಮಾತೃದೇವತೆ." ನನ್ನ ತಂದೆ

★ ರತ್ನಾ ಶಾಸ್ತ್ರಿ

ಭಾವುಕರಾಗಿದ್ದರು. ಚಿಕ್ಕ ವಯಸ್ಸಿನಲ್ಲಿ ಕಳೆದು ಕೊಂಡ ತಾಯಿಯ ವಾತ್ಸಲ್ಯಕ್ಕಾಗಿ ಕಾತರಿಸು ತ್ತಿತ್ತು ಅವರ ಮನಸ್ಸು.

ಗೌಡರು ಮೃದುವಾಗಿ ಗೋಪಿಯನ್ನು ತಟ್ಟಿದರು. ತಂದೆಯ ಪ್ರೀತಿಯ ಕರೆಗೆ ಓಗೊಟ್ಟಂತೆ ಗೋಪಿ ಅವರ ಹಿಂದೆ ನಿಧಾನವಾಗಿ ನಡೆದು ಕೊಟ್ಟಿಗೆ ಸೇರಿದಳು. ಹೀಗೆ ಅಡಿಯಿರಿಸಿದ ಗೋಮಾತೆ ನಮ್ಮ ಮನೆಯ ಹಿರಿಯ ಸದಸ್ಯಳಾಗಿ ಉಳಿದಳು.

ನಮ್ಮಮನೆ 'ಗೀತಾ'ಗೆ ಕಾಲಿಟ್ಟಾಗ ಬಡಕಲಾಗಿದ್ದ ಗೋಪಿ ಈಗ ಮೈಕೈ ತುಂಬಿಕೊಂಡು ಸೊಂಪಾಗಿ ಬೆಳೆದಿದ್ದಳು. ಕಪ್ಪು ಮೈಬಣ್ಣ, ಉದ್ದವಾದ ಬಾಲದ ಕೆಳಗೆ ಗೊಂಚಲಿನಂತೆ ಬೆಳೆದ ರೋಮರಾಶಿ ನಡೆದಾಗ ಅತ್ತಿತ್ತ ಚಲಿಸು ತ್ತಿತ್ತು. ಹಣೆಯ ಭಾಗ ಬಿಳುಪಾಗಿದ್ದು ಕೊಂಬುಗಳು ಸ್ವಲ್ಪವೇ ಒಳಗೆ ಬಾಗಿ ಮಾಟವಾಗಿತ್ತು.

ತಂದೆಯವರಿಗಂತೂ ಆಕೆ ಕೇವಲ ಹಾಲು ಕರೆಯುವ ಹಸುವಲ್ಲ, ತಾಯಿಯೇ ಆಗಿದ್ದಳು. ಜನ್ಮ ಜನ್ಮಾಂತರಗಳ ಅನುಬಂಧವೋ ಅಥವಾ ಮುಂಬರುವ ಯುಗಗಳ ಬಂಧನದ ಬುನಾದಿಯೊ!

ಸರ್ಕಾರಿ ಅಧಿಕಾರಿಯಾಗಿ ನಿವೃತ್ತರಾದ ತಂದೆಯವರ ದಿನಚರಿ ಆರಂಭವಾಗುವುದು ಬೆಳಿಗ್ಗೆ ಗೋಪಿಯ ದರ್ಶನದಿಂದ. ಜೀವರಾಶಿಗಳಲ್ಲಿ ದೇವರನ್ನು ಕಾಣುವ ನನ್ನ ತಂದೆ ಮುಕ್ಕೋಟಿ ದೇವತೆಗಳನ್ನು ಆ ಗೋವಿನಲ್ಲಿ ಕಾಣಬಲ್ಲರು. ಜೀವನದಲ್ಲಿ ತಮ್ಮದೇ ಆದ ಉನ್ನತ ಭಾವನೆಗಳು, 'ಮನೆಯೇ ಕಾಶಿ, ಮನವೇ ಗಂಗೆ' ಅದಕ್ಕೆ ಅನುರೂಪಳಾದ ನನ್ನ ಅಮ್ಮ ಕಾಶಿ ವಿಶ್ವೇಶ್ವರನ ದರ್ಶನ ಮಾಡಬೇಕೆಂದೋ, ರಾಮೇಶ್ವರದ ಲಿಂಗೇಶ್ವರನನ್ನು ಕಾಣಬೇಕೆಂದೋ ಪತಿಯನ್ನು ಪೀಡಿಸಿರಲಿಲ್ಲ. ಎಂದಾದರೊಮ್ಮೆ ಬಿಡುವಾದರೆ ಶಿವಮೊಗ್ಗೆಯಲ್ಲೆ ಇರುವ ಶ್ರೀಭೀಮೇಶ್ವರನ ಗುಡಿಗೋ ಬಿ.ಎಚ್.ರಸ್ತೆಯಲ್ಲಿರುವ ಶ್ರೀದುರ್ಗಮ್ಮನ ದರ್ಶನಕ್ಕೋ ಹೋಗಿ ಬರುವಳು. 'ಅತಿಥಿ ದೇವೋಭವ' ಎಂದು ಮನೆಗೆ ಬೆಳಗಿನಿಂದ ಬೈಗಿನವರೆಗೆ ಬರುವ ಅತಿಥಿಗಳಿಗೆಲ್ಲಾ ನಗುಮೊಗದಿಂದ ಉಣಬಡಿಸುವಳು, ಬಿಸಿಲಿನಲ್ಲಿ ತಂಪನ್ನೀಯುವಳು, ಎಂದೂ ಬೇಸರದ ಮಾತೇ ಇಲ್ಲ. ಕಾಯಕವೇ ಕೈಲಾಸ ಅವಳಿಗೆ.

ಅಮ್ಮ ಎದ್ದ ಸ್ವಲ್ಪ ಸಮಯಕ್ಕೆ ಗೋಪಿಗೆ ಬೆಳಕು ಹರಿಯುವುದು, 'ಅಂಬಾ' ಎಂಬ ಅವಳ ಕೂಗಿಗೆ ತಂದೆಗೂ ಎಚ್ಚರವಾಗುವುದು. ಎದ್ದು ಮೊದಲು ಅವಳಿಗೆ ಹುಲ್ಲು ಹಾಕಿ ಬಾನಿಯಲ್ಲಿ ನೀರಿಡುವರು. ನಿಧಾನವಾಗಿ ತಿನ್ನುತ್ತಾ ಗೋಪಿ ಯೋಗಾಸನವನ್ನಾರಂಭಿಸುವಳು. ಕೈ-ಕಾಲು, ಬಾಲವನ್ನು ಆಡಿಸುತ್ತಾ ಕೊಟ್ಟಿಗೆಯಲ್ಲೇ ಅಡ್ಡಾಡುವಳು. ತಂದೆ ಪ್ರಾತರ್ವಿಧಿಗಳನ್ನು ಮುಗಿಸಿ ಅವಳಿಗೆ ಸ್ನಾನ ಮಾಡಿಸುವರು. ಹವಾಮಾನಕ್ಕೆ ತಕ್ಕಂತೆ ಹದವಾದ ಬಿಸಿನೀರು, ಮೃದುವಾದ ಬಟ್ಟೆಯಲ್ಲಿ ಮೆದುವಾಗಿ ಮೈಯೆಲ್ಲ ತಿಕ್ಕುವರು. ಆಗಾಗ ಎಣ್ಣೆಯ ಮಾಲೀಷ್ ಸಹ ಆಗುತ್ತಿತ್ತು. ಹಾಗಾಗಿ ಗೋಪಿಯ ಕರಿ ಚರ್ಮ ಮಿರಿ ಮಿರಿ ಮಿಂಚುತ್ತಿತ್ತು. ಈ ವೇಳೆಗೆ ಅಮ್ಮ ಎಸರಿಡುತ್ತಿದ್ದಳು. ಗೋಪಿಗೆ ಅಕ್ಕಿ ಬೆಲ್ಲದ ನೈವೇದ್ಯ. ಕಲ್ಲು, ಬತ್ತ ಒಂದೂ ಇರದ ಶುದ್ಧ ಅಕ್ಕಿ ಅದಕ್ಕೆ. ಅದಕ್ಕೇ ಭಗವಂತ ಆಕೆಗೆ ಬಿಳಿಯ ಹಣೆಯನ್ನಿತ್ತಿದ್ದನೋ, ದುಂಡನೆಯ ಎರಡು ಬೊಟ್ಟು ಅರಿಷಿಣದ ಮಧ್ಯೆ ಕೆಂಪು ಕುಂಕುಮ ತುಂಬಾ ಸುಂದರವಾಗಿ ಕಾಣುತ್ತಿತ್ತು. ಹಬ್ಬದ ದಿನಗಳಲ್ಲಿ ವಿಶೇಷ ಅಲಂಕಾರ. ಗೊರಸು, ಕೊಂಬುಗಳಿಗೆ ಕೆಮ್ಮಣ್ಣಿನ ಪಾಲಿಶ್. ಅದನ್ನು ನೋಡಿ ತಂದೆಗೆ ಎಲ್ಲಿಲ್ಲದ ಸಂತೋಷ. ನಮಗೋ ಆಗ ಹುಡುಗಾಟದ ದಿನಗಳು. ಇದೆಲ್ಲಾ ನಮಗೆ ಮೋಜೆನಿಸುತ್ತಿತ್ತು. ವಯಸ್ಸು ಕಳೆದಂತೆ ಅವರ ಆತ್ಮೀಯತೆಯ ಆಳ ಗೋಚರಿಸುತ್ತಿದೆ.

ಗೋಪಿಯ ಜೊತೆ ನೆನಪಾಗುವುದು ಪುಟ್ಟ ಗೊಲ್ಲ ಸುದಾಮ. ನಿತ್ಯವೂ ಹಸಿರು ಹುಲ್ಲು ಮೇಯಿಸಲು ಗೋಪಿಯನ್ನು ಕರೆದೊಯ್ಯುತ್ತಿದ್ದ. ತಂದೆ ಹೇಳಿಕೊಟ್ಟ.'ಇಟ್ಟರೆ ಸಗಣೆಯಾದೆ ತಟ್ಟಿದರೆ ಕುರುಳಾದೆ

ಇಟ್ಟರೆ ನೊಸಲಿಗೆ ವಿಭೂತಿಯಾದೆ ಎಂದು ಇನಿದನಿಯಲ್ಲಿ ಹಾಡುವನು. ಆಗಾಗ ತಂದೆ ಅವನಿಗೆ ಕಿತ್ತಳೆ ತೊಳೆಯನ್ನೋ, ಪೆಪ್ಪರ ಮೆಂಟು, ಬತ್ತಾಸನ್ನೋ ಕೊಡಿಸುತ್ತಿದ್ದರು. ಗುಡ್ಡೇಕಲ್ಲಿನ ಸಿದ್ಧೇಶ್ವರನ ಜಾತ್ರೆ ದಿನ ಅವನಿಗೆ ರಜೆ. ಆ ದಿನ ಅವನಿಗೆ ಎರಡು ರೂಪಾಯಿ ಭಕ್ಷೀಸು. ಆಗಂತೂ ಅವನಿಗೆ ಹಿಗ್ಗೋ ಹಿಗ್ಗು. ಗಣಪತಿ ಹಬ್ಬಕ್ಕೆ ಬಣ್ಣದ ಅಂಗಿ. ಹತ್ತು-ಹದಿನೈದು ದನಗಳ ಮಂದೆಯನ್ನು ಬಹಳ ಮುತುವರ್ಜಿಯಿಂದ ಹುಲ್ಲುಗಾವಲಿಗೆ ಕೊಂಡೊಯ್ಯುವನು.

"ಸಾಮೇರ, ನಮ್ಗೋಪೀಗೇಂತ ಭೋ ಪಸಂದಾದ ಹುಲ್‌ಕಿತ್ಕಂಡ್ ಬಂದೀವ್ನಿ; ತಕ್ಕಳಿ," ಎಂದು ಕೊಟ್ಟಿಗೆಗೆ ಹುಲ್ಲು ತಂದು ಹಾಕುವ ಸೊಪ್ಪಿನ ಕೆಂಚಿ ಈ ಬಳಗದ ಇನ್ನೊಬ್ಬ ಸದಸ್ಯಳು.

ಹನ್ನೊಂದು ಗಂಟೆಗೆಲ್ಲ ಸಮಪ್ರಮಾಣದಲ್ಲಿ ಹತ್ತಿ ಹಿಂಡಿ, ಕಡಲೆ ಹಿಂಡಿ, ಭೂಸಾ ಎಲ್ಲವನ್ನೂ ಸ್ವಲ್ಪ ಸ್ವಲ್ಪವಾಗಿ ನೀರು ಹನಿಸಿ ಹದವಾಗಿ ಕಲೆಸಿಡುವುದು ತಂದೆಯ ಕೆಲಸ. ಅದು ಗೋಪಿಯ ಮೂರು ಗಂಟೆಯ ತಿನಿಸು.

ಹೀಗೊಂದು ದಿನ ಹೊತ್ತಿಗೆ ಮುಂಚೆ ಬಾಗಿಲಲ್ಲಿ ಗೋಪಿಯ ದನಿ ಕೇಳಿಬಂತು. ಹಿಂದೆಯೇ ಸುದಾಮ. "ಯಾಕೋ ಸ್ವಾಮೇರ ಗೋಪಿ ಉಬ್ಕಂತವ್ಳೆ. ಅದ್ಕೆ ಜಲ್ದಿ ಕರ್ಕಂಡ್ ಬಂದ್ಬಿಟ್ಟೆ," ಎಂದ. ತಂದೆಯ ಆತಂಕ ಹೇಳತೀರದು. ಅಮ್ಮ ಬೇಗನೆ ಒಂದು ಪಾತ್ರೆಗೆ ನೀರು, ಉಪ್ಪು-ಬೆಲ್ಲ ಬೆರೆಸಿ ಕುಡಿಯಲಿಟ್ಟಳು. ಬಾಯಾರಿಕೆಗೇನೋ ಸರಸರ ಹೀರಿದಳು ಗೋಪಿ. ಆದರೆ ಎಲ್ಲ ನೀರು ಸಗಣಿಯಾಗಿ ವಿಸರ್ಜಿಸಿತು. ತಕ್ಷಣ ಡಾ. ಬಂದಯ್ಯನವರನ್ನು ಕರೆಸಲಾಯಿತು. ಅವರು ಪಶು ವೈದ್ಯರೂ ಹೋಮಿಯೋಪತಿಯನ್ನು ಚನ್ನಾಗಿ ಅಭ್ಯಸಿಸಿದವರೂ ಹಾಗೂ ತಂದೆಯ ಪರಮಾಪ್ತ ಮಿತ್ರರೂ ಆಗಿದ್ದರು. ಅವರು ಹಸುವನ್ನು ಪರೀಕ್ಷಿಸಿ, "ಏನಿಲ್ಲ ರಾಯ್ರೆ, ನಿಮ್ಮ ಉಪಚಾರ ಜಾಸ್ತಿ ಆಯ್ತು. ಟೆಂಪರೇಚರು ೯೬ಕ್ಕೆ ಬಂದಿದೆ, ಕಾರ್ಬೋವೆಜ್ ಕೊಡ್ತೀನಿ, ಇಂದೇ ಸರಿಹೋಗ್ತಾಳೆ," ಎಂದಾಗ ತಂದೆಗೆ ನೆಮ್ಮದಿ.

'ಮುಂದೆ ಬಂದರೆ ಹಾಯದ, ಹಿಂದೆ ಬಂದರೆ ಒದೆಯದ' ಗೋಪಿ ಮನೆಯಲ್ಲಿ ಎಲ್ಲರಿಗೂ ಅಚ್ಚುಮೆಚ್ಚು. ಅಮ್ಮನೇ ಹಾಲು ಕರೆಯಬೇಕೆಂದಿಲ್ಲ. ಎಲ್ಲರಿಗೂ ಒಂದೇ ಸಮ ಹಾಲು ಸ್ರವಿಸುವಳು. ಮಕ್ಕಳ ಕೀಟಲೆ ಕೋಟಲೆಗಳು ಆಕೆಗೆ ಪ್ರಿಯ.

ಮತ್ತೊಂದು ದಿನ ಗೋಪಿ ಏನನ್ನೂ ಮುಟ್ಟದಾದಳು. ಒಂದು ಬಗೆಯ ಔದಾಸೀನ್ಯ ಆಕೆಯಲ್ಲಿ ಮನೆ ಮಾಡಿತ್ತು. ಮತ್ತೆ ಡಾಕ್ಟರರಿಂದ ತಪಾಸಣೆ. "ಕೃಷ್ಣಪ್ಪನೋರೆ, ಗೋಪಿ ಗರ್ಭಿಣಿ," ಎಂದಾಗ ಮನೆಯಲ್ಲೆಲ್ಲಾ ಹಬ್ಬದ ಸಂಭ್ರಮ.

ಈ ನಡುವೆಯೇ ನನ್ನ ವಿವಾಹವಾಗಿ ಪತಿಗೃಹಕ್ಕೆ ತೆರಳಿದ್ದೆ. ಮುಂದೆ ಅತ್ತಿಗೆ ಬರೆದಿದ್ದಳು. 'ಗೋಪಿಗೆ ಗಂಡು ಮಗು, ಈ ಪೋರನ ಹೆಸರು ಗುಂಡ. ಕೆಂಪು ಕೆಂಪಾಗಿ ಮುದ್ದಾಗಿದ್ದಾನೆ. ಮನೆಯೆಲ್ಲಾ ಜಿಗಿಯುತ್ತಾನೆ," ಎಂದು. ಗುಂಡನಿಗೆ ವರ್ಷ ತುಂಬುವ ಕಾಲಕ್ಕೆ ನಾನು ತವರಿಗೆ ಬಂದಿದ್ದೆ. ಹೊಸ ಜೀವ ನನ್ನ ಉದರದಲ್ಲಿ ಮಿಸುಕಾಡುತ್ತಿತ್ತು. ನವಚೇತನ ಮೈ-ಮನಗಳನ್ನು ಆವರಿಸಿ ಅನಿರ್ವಚನೀಯ ಸಂಭ್ರಮವನ್ನೀಯುವ ಕಾಲ.

ಅಮ್ಮ ಗೊಟ್ಟದಲ್ಲಿ ಹುಯ್ಯುವ ಮಜ್ಜಿಗೆ, ಸ್ವಲ್ಪ ಹಿಂಡಿ, ಹುಲ್ಲು ಎಲ್ಲ ಮೇಯುತ್ತಾ ಗುಂಡ ಸೊಂಪಾಗಿ ಬೆಳೆದಿದ್ದ. ಅವನ ಓಡಾಟ ಕೊಟ್ಟಿಗೆಗಷ್ಟೇ ಸೀಮಿತವಾಗದೆ ಮನೆಯನ್ನೆಲ್ಲಾ ಆವರಿಸಿತ್ತು. ಪುಟ್ಟ ಮಕ್ಕಳನ್ನೆಲ್ಲಾ ಲೆಕ್ಕಿಸದೆ ಗಲಾಟೆ ಮಾಡುವ ಆ ಮುದ್ದು ಕರುವನ್ನು ಸಂಭಾಳಿಸುವುದು ಬಹಳ ಕಷ್ಟವಾಗುತ್ತಿತ್ತು. ಕೊನೆಗೊಮ್ಮೆ ಗುಂಡನನ್ನು ಅಕ್ಕನಕೊಪ್ಪದ ಗೌಡರ ಮನೆಗೆ ಕಳಿಸುವುದೆಂದು ತೀರ್ಮಾನವಾಯಿತು. ಉದರದಲ್ಲಿ ಸಣ್ಣ ಜೀವವನ್ನು ಹೊತ್ತ ನನಗೆ ಆ ದಿನ ಬಹಳ ದುಃಖವಾಗಿತ್ತು.

ನನ್ನ ಹೃದಯಯಾಂತರಾಳದ ನೋವನ್ನು ತಮ್ಮ ಎಕ್ಸ್‌ರೇ ಕಣ್ಣುಗಳಿಂದಲೇ ಗ್ರಹಿಸಿದ್ದರು ನನ್ನ ತಂದೆ.

"ನೋಡು ಮಗು, ಗುಂಡ ಬಲು ತುಂಟ. ಗಂಡು ಕರುಗಳನ್ನು ಮನೆಯಲ್ಲಿ ಸಾಕುವುದು ಅಪಾಯಕರ. ನಾನೂ ತಾಯಿ- ಮಕ್ಕಳನ್ನು ಬೇರ್ಪಡಿಸಬಾರದೆಂದು ಬಹಳ ಪ್ರಯತ್ನಪಟ್ಟೆ. ನಿರ್ವಾಹವೇ ಇಲ್ಲದಾಗಿದೆ," ಎಂದು ಪಂಚೆ ಯಂಚಿನಲ್ಲಿ ಕಣ್ಣೊರಸಿಕೊಂಡಿದ್ದರು. ಗುಂಡ ನನ್ನು ಬೀಳ್ಕೊಟ್ಟ ದಿನ ಹಲವಾರು ಬಾರಿ ಗೋಪಿಯ ಮೈದಡವಿ, "ತಾಯಿ, ನಾನೇನಾದರೂ ತಪ್ಪು ಮಾಡಿದರೆ ಕ್ಷಮಿಸಮ್ಮ" ಎಂದು ಕಣ್ಣೀರಿಟ್ಟಿದ್ದರು.

* * * *

ತವರಿನಲ್ಲಿ ಅವಿಭಕ್ತ ಕುಟುಂಬ. ಮಕ್ಕಳು, ಸೊಸೆಯಂದಿರು, ಮೊಮ್ಮಕ್ಕಳು, ಹೀಗೆ ಜೇನು ಗೂಡಿನಂತೆ ಸಂಸಾರ, ಅಷ್ಟೆ ಮಧುರವೂ ಕೂಡ. ಪುಟ್ಟ ಮಕ್ಕಳ ಕೇಕೆ, ನಗು- ಅಳು, ಆಟ, ನಂದಗೋಕುಲದಂತಹ ಗೃಹ. ನೆಂಟರಿಷ್ಟರಿಗೊಂದು ಗೆಸ್ಟ್‌ಹೌಸ್ ತರಹ. ಅತ್ತಿಗೆಯಂದಿರ ಸಹಾಯ, ಅಮ್ಮನ ನೇತೃತ್ವದಲ್ಲಿ ಗೃಹಕೃತ್ಯಗಳು ಸುಲಲಿತವಾಗಿ ಸಾಗುತ್ತಿದ್ದವು.

ಯುಗಯುಗಾದಿ ಕಳೆದು ನವ ವರ್ಷದ ಆಗಮನ. ಪರೀಧಾವೀ ಸಂವತ್ಸರ. ಕೋಗಿಲೆಯ ಇಂಪಿಗೆ ಮಾವು-ಬೇವಿನ ತಂಪು ಪಸರಿಸುವ ವಸಂತ ಕಾಲ, ಯುಗಾದಿ, ತದಿಗೆ ಗೌರಿ, ರಾಮನವಮಿ ಹೀಗೆ ಹಬ್ಬಗಳ ಸಂಭ್ರಮ. ಪ್ರತಿ ದಿನವೂ ಗೋಪಿಯ ಅಮೃತ ಸದೃಶವಾದ ಹಾಲಿನಿಂದ ದೇವರಿಗೆ ಅಭಿಷೇಕ. ಹೀಗೇ ಸಂತಸದ ಅಲೆಗಳ ಚೆಲ್ಲಾಟ. ಚೈತ್ರ ಬಹುಳ ನವಮಿ. ಕೃಷ್ಣಪಕ್ಷ ಹತ್ತಿರವಾಗುತ್ತಾ ಅಂಧಕಾರ ಹೆಚ್ಚುತ್ತಿತ್ತು.

ರಾತ್ರಿ ಎಲ್ಲರೂ ವಿಶ್ರಮಿಸುವ ವೇಳೆ. ನೀರವ ನಿಶಬ್ದ ರಾತ್ರಿ. ಬಹುಶಃ ರಾತ್ರಿ ೧೨ ಗಂಟೆಯಾಗಿರಬಹುದು. ಮೌನವನ್ನು ಸೀಳಿ ಕೊಟ್ಟಿಗೆಯಿಂದ ಆರ್ತನಾದ ಕೇಳಿಬಂತು. ಎಲ್ಲರೂ ಕೊಟ್ಟಿಗೆಗೆ ಧಾವಿಸಿದೆವು. ಗೋಪಿ ಎದ್ದು ನಿಂತಿದ್ದಳು, ತಂದೆ ಗಾಬರಿಯಾಗಿದ್ದರು.

"ಏಕಮ್ಮ ಗೋಪಿ? ಏನಾಯ್ತು?" ಎಂದು ಹಗುರವಾಗಿ ಮೈದಡವಿದರು. ಎಂದೂ ಕಾಲನ್ನೆತ್ತದ ಗೋಪಿ ಜೋರಾಗಿ ತಂದೆಯನ್ನು ಒದ್ದುಬಿಟ್ಟಳು. ಆ ರಭಸಕ್ಕೆ ಅವರ ಮೊಳಕೈ ಗೋಡೆಗೆ ತಾಗಿ ರಕ್ತ ಒಸರತೊಡಗಿತು. ಆದರ ಮೇಲೆ ಗಮನವೇ ಇಲ್ಲದೆ ಮತ್ತೆ ಗೋಪಿಯ ಹಣೆಯನ್ನು ನೇವರಿಸಿದಾಗ ಆಕೆಯ ನೇತ್ರಗಳಿಂದ ಹರಿದ ಕಣ್ಣೀರು ತಂದೆಯ ಪಾದಗಳ ಮೇಲೆ ಬಿತ್ತು. ಅಧೋವದನಳಾಗಿ ನಿಂತಿದ್ದಳು ಗೋಪಿ. ಯಾವುದಾದರೂ ವಿಷ ಜಂತು ಕಡಿದಿದೆಯೇ ಎಂದು ನಖಶಿಖಾಂತ ಪರೀಕ್ಷೆ ಮಾಡಲಾಯಿತು. ಯಾವ ಸುಳಿವೂ ಇಲ್ಲ. ಮೇಯುವ ಮೈದಾನದಲ್ಲಿ ಬೆದರಿರಬಹುದೋ ಅಥವಾ ದೃಷ್ಟಿ ತಗುಲಿರಬಹುದೋ ಎಂದು ಅಮ್ಮ ಉಪ್ಪು ಮೆಣಸಿನಕಾಯಿ ನಿವಾಳಿಸಿ ಕೆಂಡದಲ್ಲಿ ಹಾಕಿದಾಗ ಚಟ-ಚಟ ಸದ್ದುಬಂತು. ತಂದೆ ಕೊಟ್ಟ ನೀರು ಕುಡಿದ ಗೋಪಿ ಗೆಲುವಾದಳು. ಆವಳು ಗೋಣಿ ಚೀಲದ ಮೇಲೆ ಮೈಚೆಲ್ಲಿದ ನಂತರವೇ ಎಲ್ಲರೂ ಮಲಗಲು ಅಣಿಯಾದೆವು.

ಮರುದಿನ 'ಗೀತ'ದಲ್ಲಿ ಸುಪ್ರಭಾತ ತಡವೇ ಆಯಿತು. ಮೂಡಣವನ್ನೆಲ್ಲಾ ಕೆಂಪಾಗಿಸಿ ಸೂರ್ಯ ಉದಯಿಸುತ್ತಿದ್ದ. ತಂದೆ ಗಡಬಡಿಸಿ ಡಾ. ಬಂದಯ್ಯನವರನ್ನು ಕರೆತಂದರು. ಗೋಪಿ ಮಲಗಿಯೇ ಇದ್ದಳು. ಅವಳ ಬೆನ್ನು ಸವರಿದಾಗ ಮೈ ತಣ್ಣಗಾಗಿತ್ತು. "ಗೋಪಿ ಇನ್ನಿಲ್ಲ," ಎಂದು ಹೇಳಲು ಅಶಕ್ತರಾದ ವೈದ್ಯರು ಖಿನ್ನರಾಗಿ ಹಿಂದಿರುಗಿದ್ದರು. ಅವಳು 'ಗೀತ'ವನ್ನು ತ್ಯಜಿಸಿದ್ದಷ್ಟೆ ಅಲ್ಲದೆ ಈ ಪ್ರಪಂಚದ ಕೋಟಲೆಗಳಿಂದಲೂ ಮುಕ್ತಳಾಗಿದ್ದಳು. ಶಿರಭಾಗ ಸ್ವಲ್ಪವೇ ವಾಲಿ ಕೊರಳ ಮೇಲಿತ್ತು. ಉದರದ ಮೇಲೆ ಬಾಲ ಸುರುಳಿಯಾಗಿ ಹರಡಿಕೊಂಡಿತ್ತು. ಶಾಂತವಾದ ಮುಖಮುದ್ರೆ, ಅಪೂರ್ವ ಕಾಂತಿ. ಹಣೆಯ ಬಿಳಿನಾಮ ಈಗೊಂದು ದಿವ್ಯ ಜ್ಯೋತಿಯಂತೆ

ಕಂಗೊಳಿಸುತ್ತಿತ್ತು.

ತಂದೆಯನ್ನು ಸಮಾಧಾನಪಡಿಸುವುದು ಬಹಳ ಕಷ್ಟವಾಯಿತು. ತಾಯಿಯನ್ನು ಕಳೆದು ಕೊಂಡ ಹಸುಗೂಸಿನಂತೆ ಅತ್ತುಬಿಟ್ಟರು ತಂದೆ. ಮನೆಯ ಕಾಮಧೇನು ಇನ್ನಿಲ್ಲ!

* * * *

ದಿನಗಳು ಉರುಳಿದಂತೆ ದೈನಂದಿನ ಚಟು ವಟಿಕೆಗಳಲ್ಲಿ ಎಲ್ಲರ ನೋವೂ ಸ್ವಲ್ಪ ಶಮನವಾ ದರೂ ತಂದೆಯ ನೋವು ಕಡಿಮೆಯಾಗಲೇ ಇಲ್ಲ. ಮಾತುಕತೆ, ಊಟ-ನಿದ್ರೆ ಎಲ್ಲದರಲ್ಲೂ ಅನ್ಯಮನಸ್ಕತೆ.

ಚೈತ್ರ ಕಳೆದು ವೈಶಾಖದ ಆರಂಭ. ಸುಡು ಬಿಸಿಲಿನ ನಡುವೆ ಒಂದೊಂದು ತುಂತುರು ಹನಿ ಮಳೆಯಾಗಿ ಧಗೆಯನ್ನು ಕೆರಳಿಸುತ್ತಿತ್ತು.

ಅಂದು, "ಸಂಜೆ ಪೇಟೆ ಕಡೆ ಹೋಗೋ ಣವೆ? ದಿನಸಿ ಮುಗಿದಿದೆ," ಎಂದು ಕೇಳಿದಳು ಅಮ್ಮ.

"ನೀನೇ ಹೋಗಿ ಬಾ. ನನಗೇತಕೋ ಈ ವ್ಯವಹಾರ ಸಾಕೆನಿಸಿದೆ," ಎಂದು ಆ ತಿಂಗಳ ಪೂರ್ತಿ ಹಣ ಅಮ್ಮನ ಕೈಯಲ್ಲಿಟ್ಟರು ತಂದೆ.

ಅಂದು ಅಮ್ಮ ಬಹಳ ದುಃಖಪಟ್ಟಳು ಬಲಗಣ್ಣು ಅದುರಿದಂತಾಗಿ ಎಲ್ಲೋ ಅಪಶಕು ನದ ಸ್ವರ ಕೇಳಿ ಬಂತು.

ಮರುದಿನ ಬೆಳಗ್ಗೆ ಎಲ್ಲರಿಗೂ ಬೆಳಗಾ ಯಿತು. ಆದರೆ ನನ್ನ ತಂದೆ ವೈಶಾಖ ಬಹುಳ ನವಮಿಯ ರವಿಯನ್ನು ಕಾಣಲೇ ಇಲ್ಲ. ಗೋಪಿ ಅಗಲಿದ ಒಂದೇ ತಿಂಗಳಿಗೆ ನಮ್ಮನ್ನೆಲ್ಲಾ ಅನಾಥ ರನ್ನಾಗಿ ಮಾಡಿ ಆ ತಾಯಿಯ ಹಿಂದೆ ಮಗುವಿ ನಂತೆ ಹಿಂಬಾಲಿಸಿದ್ದರು ಅವರು. ಇದಾಗಿ ೨೫ ಯುಗಾದಿಗಳೇ ಕಳೆದಿವೆ. ಅದೇ ಮನೆ, ಅದೇ ತವರು, ಅದೇ ಹೊಸ್ತಿಲು, ಆದರೆ ಆದರದಿಂದ "ಬಾ" ಎನ್ನುವ ಹಿರಿಯ ಜೀವ ಇಲ್ಲ. 'ಅಂಬಾ' ಎನ್ನುವ ಧ್ವನಿಯಂತೂ ಇಲ್ಲವೇ ಇಲ್ಲ.



## ಏನು ಮಾಡ್ತೀ?

ಆಫೀಸಿನಲ್ಲಿ ಅಂದು ಕೆಲಸದ ಒತ್ತಡ ಜಾಸ್ತಿ ಇತ್ತು. ಕೊನೆಗೂ ಕೆಲಸ ಮುಗಿಸಿ ಹೊರಬಿದ್ದ ಅವನು ಸಿಟಿಬಸ್ಸಿಗಾಗಿ ಮುಕ್ಕಾಲು ಗಂಟೆ ಕಾಯಬೇಕಾಯಿತು. ಸುಸ್ತಾಗಿ ಬಂದ ಆತ ಮನೆಯಲ್ಲಿ ಕಂಡದ್ದೇನು? ಎಲ್ಲೆಂದರಲ್ಲಿ ಸಾಮಾನು, ಒಳಕೋಣೆಯಲ್ಲಿ ಚೆಲ್ಲಾಡಿದ ಬಟ್ಟೆಗಳು, ಅಡಿಗೆಮನೆಗೆ ಬಂದರೆ ಸಿಂಕ್ ತುಂಬ ಪಾತ್ರೆಗಳು, ಮುಖ ತೊಳೆಯಲು ಬಚ್ಚಲು ಮನೆಗೆ ಬಂದರೆ ಅಲ್ಲಿಯೂ ಅಧ್ವಾನ......

ಮೊದಲೇ ಹಣ್ಣಾಗಿ ಬಂದ ಆತನಿಗೆ ಮನೆಯ ಈ ಅವಸ್ಥೆಯನ್ನು ಕಂಡು ಕೋಪ ಉಕ್ಕೇರಿತು. "ಏನು, ಏನಿದು ಅವಸ್ಥೆ, ನೀನೇನು ಮಾಡ್ತಿದ್ದೀಯಾ?" ಎಂದು ಪತ್ನಿಗೆ ಗದರಿಸಿದ.

ಆದರೆ ಅವಳು ಅತ್ಯಂತ ಶಾಂತಸ್ವರದಲ್ಲಿ ಉತ್ತರಿಸಿದಳು- "ಏನಿಲ್ಲ, ಏನೇನೂ ಇಲ್ಲ. ಪ್ರತಿ ದಿನ ನೀವು ಕೇಳ್ತಿರಲಿಲ್ಲವೇ, ದಿನವಿಡೀ ಏನು ಮಾಡ್ತಿರ್ತಿಯಾ ಅಂತ? ಇವತ್ತು ನೋಡಿ, ದಿನಾಲು ಮಾಡ್ತಿದ್ದ ಯಾವ ಕೆಲಸವನ್ನೂ ಇಂದು ನಾನು ಮಾಡಿಲ್ಲ ಅಷ್ಟೆ."

ಗಂಡ ಮತ್ತಷ್ಟು ಸುಸ್ತಾದ.

• ಶ್ರೀವತ್ಸ

ಕರ್ನಾಟಕ

# ನಿರ್ದಿಷ್ಟ ಯೋಜನೆ ನಿಗದಿತ ಸಾಧನೆ





ಶ್ರೀ ಜೆ.ಹೆಚ್. ಪಟೇಲ್
ಮಾನ್ಯ ಮುಖ್ಯಮಂತ್ರಿಗಳು

ಪ್ರಸಕ್ತ ಸರ್ಕಾರ ಕರ್ನಾಟಕದ ಆಡಳಿತ ಸೂತ್ರ ವಹಿಸಿಕೊಂಡ ನಂತರ ರಾಜ್ಯದಲ್ಲಿ ಬದಲಾವಣೆಯ ಗಾಳಿ ಬೀಸುತ್ತಿದೆ. ಆಡಳಿತದಲ್ಲಿ ಕಾಲಬದ್ಧತೆಗೆ ಒತ್ತುಕೊಟ್ಟು, ದಕ್ಷತೆಯನ್ನು ಹೆಚ್ಚಿಸಿ, ಪಾರದರ್ಶಕತೆ ಮೂಡಿಸಲು ಪ್ರಾಮಾಣಿಕವಾಗಿ ಪ್ರಯತ್ನಿಸುತ್ತಿದೆ.

ಅಭಿವೃದ್ಧಿ ಯೋಜನೆಗಳನ್ನು ತೀವ್ರವಾಗಿ ಕಾರ್ಯಗತಗೊಳಿಸುವ ದಿಸೆಯಲ್ಲಿ ಅಗತ್ಯ ಸಂಪನ್ಮೂಲ ಕ್ರೋಢೀಕರಿಸಲು ಸರ್ಕಾರದ ಸತತ ಪ್ರಯತ್ನ. ಆದ್ದರಿಂದಲೇ ವಿದ್ಯುಚ್ಛಕ್ತಿ, ಕುಡಿಯುವ ನೀರು, ಸಾರಿಗೆ ದರಗಳನ್ನು ಹೆಚ್ಚಿಸುವ ಕಠಿಣ ನಿರ್ಧಾರ ತೆಗೆದುಕೊಳ್ಳಬೇಕಾದ ಅನಿವಾರ್ಯತೆ.

ದಶಕಗಳಿಂದಲೂ ನಿಧಾನಗತಿಯಲ್ಲಿ ಸಾಗುತ್ತಿದ್ದ ರಾಜ್ಯದ ಪ್ರತಿಷ್ಠಿತ 'ಕೃಷ್ಣಾ ಮೇಲ್ದಂಡೆ ಯೋಜನೆ'ಗೆ ಕಳೆದ 2 ವರ್ಷಗಳಲ್ಲಿ ತೀವ್ರ ಚಾಲನೆ. ಅದಕ್ಕಾಗಿ 'ಕೃಷ್ಣಾ ಭಾಗ್ಯ ಜಲ ನಿಗಮ'ದ ಉದಯ.

ಕೃಷಿಗೆ ಹಿಂದೆಂದಿಗಿಂತಲೂ ಹೆಚ್ಚಿನ ಉತ್ತೇಜನ ದೊರಕಿಸಿ ಆ ಮೂಲಕ 1996-97ನೇ ಸಾಲಿನಲ್ಲಿ 91.70 ಲಕ್ಷ ಟನ್ ಆಹಾರಧಾನ್ಯಗಳ ದಾಖಲೆ ಉತ್ಪಾದನೆ.

ಆದ್ಯತಾ ವಲಯಗಳಾದ ವಸತಿ, ಶಿಕ್ಷಣ, ಆರೋಗ್ಯ, ಕುಡಿಯುವ ನೀರು, ಸಮಾಜ ಕಲ್ಯಾಣ ಕ್ಷೇತ್ರಗಳಿಗೆ ಹೆಚ್ಚಿನ ಒತ್ತು. ಖಾಸಗಿ ವಲಯಗಳ ಸಹಯೋಗದೊಂದಿಗೆ ವಿದ್ಯುಚ್ಛಕ್ತಿ ಉತ್ಪಾದನೆಗೆ ಕ್ರಮ.

4ನೇ ರಾಷ್ಟ್ರೀಯ ಕ್ರೀಡೆಗಳನ್ನು ಏರ್ಪಡಿಸಲು ಬೇಕಾಗಿದ್ದ ರೂ. 100 ಕೋಟಿ ಮೌಲ್ಯದ ಅಗತ್ಯ ಪರಿಕರಗಳನ್ನು ಅತ್ಯಲ್ಪ ಅವಧಿಯಲ್ಲೇ ಪೂರೈಕೆ.

ಮಾನ್ಯ ಮುಖ್ಯಮಂತ್ರಿ ಶ್ರೀ ಜೆ. ಹೆಚ್. ಪಟೇಲ್ ಅವರ ನೇತೃತ್ವದ ಪ್ರಗತಿಶೀಲ ಸರ್ಕಾರದ ಸಾಧನೆಯ ಒಳನೋಟವನ್ನು ನೋಡಬನ್ನಿ.

**ಯೋಜನಾ ವೆಚ್ಚ :** 1996-97ನೇ ಸಾಲಿನಲ್ಲಿ ಪ್ರಮುಖ ವಲಯಗಳ ಯೋಜನಾ ವೆಚ್ಚದಲ್ಲಿ ಹೆಚ್ಚಳ. 1997-98ರಲ್ಲಿ ಒದಗಿಸಿರುವ ಮೊತ್ತ ರೂ. 4545 ಕೋಟಿ ಇದುವರೆಗಿನ ದಾಖಲೆ.




**ನೀರಾವರಿ:** 1996-97 ಸಾಲಿನ ಒಂದು ವರ್ಷದ ಅವಧಿಯಲ್ಲೇ ನೀರಾವರಿಗಾಗಿ ರೂ. 1381.45 ಕೋಟಿ ಖರ್ಚು. ಇದೂ ಒಂದು ದಾಖಲೆಯೇ! ಈ ಮೊತ್ತ ನೀರಾವರಿಗಾಗಿ 1992-93 ಮತ್ತು 1993-94ನೇ ಸಾಲಿನ ಎರಡು ವರ್ಷಗಳಲ್ಲಿ ಮಾಡಲಾದ ವೆಚ್ಚ ರೂ. 1231.92 ಕೋಟಿಗಿಂತಲೂ ಸುಮಾರು ರೂ. 150 ಕೋಟಿ ಹೆಚ್ಚು. 1997-98ರಲ್ಲಿ ನೀರಾವರಿ ಅಭಿವೃದ್ಧಿಗಾಗಿ ರೂ. 1,517.96 ಕೋಟಿ.



ಕರ್ನಾಟಕದ ಪ್ರತಿಷ್ಠಿತ ನೀರಾವರಿ ಯೋಜನೆ ಕೃಷ್ಣಾ ಮೇಲ್ದಂಡೆ ಯೋಜನೆ 2000ನೇ ಇಸವಿಯ ವೇಳೆಗೆ ಸಂಪೂರ್ಣಗೊಳ್ಳಲಿದ್ದು, ಈ ಯೋಜನೆಯು ಬರ ಪೀಡಿತ ಬಿಜಾಪುರ, ಗುಲ್ಬರ್ಗ, ರಾಯಚೂರು ಜಿಲ್ಲೆಗಳಿಗೆ ವರಪ್ರಸಾದ. ಯೋಜನೆ ಮುಕ್ತಾಯಗೊಂಡಾಗ ಈ ಪ್ರದೇಶದ ಸುಮಾರು 6.22 ಲಕ್ಷ ಹೆಕ್ಟೇರು ಹೆಚ್ಚುವರಿ ಜಮೀನು ಹಸಿರಿನಿಂದ ಕಂಗೊಳಿಸುವ ಸೌಭಾಗ್ಯ.







**ವಿದ್ಯಾಭ್ಯಾಸ :** ವಿದ್ಯಾಭ್ಯಾಸಕ್ಕೆ ಹಿಂದೆಂದೂ ಇಲ್ಲದಷ್ಟು ಪ್ರಾಶಸ್ತ್ಯ. 1996-97ರಲ್ಲೇ 18,650 ಪ್ರಾಥಮಿಕ ಶಿಕ್ಷಕರ ಹಾಗೂ 2,500 ಪ್ರೌಢಶಾಲಾ ಶಿಕ್ಷಕರ ದಾಖಲೆ ನೇಮಕಾತಿ. 1 ರಿಂದ 7ನೇ ತರಗತಿಯವರೆಗೆ 82,14,000 ಮಕ್ಕಳ ದಾಖಲಾತಿ ಮತ್ತು 9,000 ಶಾಲಾ ಕೊಠಡಿಗಳ ನಿರ್ಮಾಣ. ಹೆಣ್ಣು ಮಕ್ಕಳ ಹಾಗೂ ಪರಿಶಿಷ್ಟ ಜಾತಿ/ವರ್ಗದ ಮಕ್ಕಳ ವಿದ್ಯಾಭ್ಯಾಸಕ್ಕೆ ಉತ್ತೇಜನ ನೀಡಲು ಒಂದು ಲಕ್ಷ ಮಕ್ಕಳಿಗೆ ಉಚಿತ ಶಾಲಾ ಬ್ಯಾಗ್ ಹಾಗೂ 52 ಲಕ್ಷ ಮಕ್ಕಳಿಗೆ ಉಚಿತ ಪಠ್ಯಪುಸ್ತಕಗಳ ಹಂಚಿಕೆ. ಅಲ್ಲದೆ, 25.17 ಲಕ್ಷ ಮಕ್ಕಳಿಗೆ ಉಚಿತ ಸಮವಸ್ತ್ರ ಮತ್ತು ಅಕ್ಷಯ ಆಹಾರ ಕಾರ್ಯಕ್ರಮದಡಿ 10 ಲಕ್ಷ ಮಕ್ಕಳಿಗೆ ಉಚಿತ ಪೌಷ್ಟಿಕ ಆಹಾರ ಪೂರೈಕೆ.

**ವಸತಿ :** 1995-97ರ ಅವಧಿಯಲ್ಲಿ ವಸತಿ ಹೀನರಿಗೆ ಆಶ್ರಯ, ಇಂದಿರಾ ಆವಾಸ್ ಮತ್ತು ಡಾ|| ಅಂಬೇಡ್ಕರ್ ವಸತಿ ಯೋಜನೆಗಳಡಿ ಹಂಚಿಕೆಯಾದ ಮನೆಗಳ ಸಂಖ್ಯೆ 1993-95ರಲ್ಲಿ ಹಂಚಿಕೆಯಾದ ಮನೆಗಳ ಸಂಖ್ಯೆಗಿಂತ ದ್ವಿಗುಣ! 1997-98ರ ಸಾಲಿನಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ 1,00,000 ನಿವೇಶನಗಳು ಮತ್ತು 1,20,000 ಮನೆಗಳು, ನಗರಪ್ರದೇಶದಲ್ಲಿ 50,000 ನಿವೇಶನಗಳ ಹಾಗೂ 35,000 ಮನೆಗಳನ್ನು ಹಂಚುವ ಕಾರ್ಯಕ್ರಮ. ನೇಕಾರರ ಭಾಗ್ಯ ಯೋಜನೆಯಡಿ 10,000 ಮನೆಗಳ ಹಂಚಿಕೆ.







**ಸಮಾಜ ಕಲ್ಯಾಣ** : ಪರಿಶಿಷ್ಟ ಜಾತಿ/ವರ್ಗದವರೇ ಮುಂತಾದ ಸಮಾಜದ ದುರ್ಬಲ ವರ್ಗದವರ ಜೀವನ ಮಟ್ಟ ಉತ್ತಮಗೊಳಿಸುವುದು ಸರ್ಕಾರದ ಆದ್ಯ ಧ್ಯೇಯಗಳಲ್ಲೊಂದು. ವಿಶೇಷ ಘಟಕ ಯೋಜನೆ, ಹಾಗೂ ಗಿರಿಜನ ಉಪಯೋಜನೆಯಡಿ 1996-97ರಲ್ಲಿ ರೂ.104.12 ಕೋಟಿ ವೆಚ್ಚ. 1997-98ರಲ್ಲಿ ವಿವಿಧ ಕಾರ್ಯಕ್ರಮಗಳಿಗಾಗಿ






ರೂ.190.90 ಕೋಟಿ ಮೀಸಲು. ಗಂಗಾಕಲ್ಯಾಣ ಯೋಜನೆಯಡಿ 20,000 ಎಕರೆ ಜಮೀನಿಗೆ ನೀರಾವರಿ ಸೌಕರ್ಯ. 75 ವಸತಿ ಶಾಲಾ ಕಟ್ಟಡ ನಿರ್ಮಾಣ, 40 ಮೊರಾರ್ಜಿ ದೇಸಾಯಿ ಶಾಲೆಗಳ ಆರಂಭ, 50 ಮೆಟ್ರಿಕ್ ಪೂರ್ವ ಹಾಗೂ 25 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳು. 75,000 ಮನೆಗಳ ನಿರ್ಮಾಣ, ನವಚೇತನ ಕಾರ್ಯಕ್ರಮದಡಿ 5,000 ವಿದ್ಯಾವಂತ ನಿರುದ್ಯೋಗಿಗಳಿಗೆ ತರಬೇತಿ. ಪರಿಶಿಷ್ಟ ಜಾತಿ/ವರ್ಗದವರ ಕಲ್ಯಾಣಕ್ಕಾಗಿ ವಿಶೇಷ ಘಟಕ ಯೋಜನೆಯಡಿ 1997-98ನೇ ಸಾಲಿಗೆ ರೂ.454.98 ಕೋಟಿ ಮೀಸಲು. ಇದರಿಂದ 2 ಲಕ್ಷ ಮಂದಿ ಫಲಾನುಭವಿಗಳಿಗೆ ಸೌಕರ್ಯ. ಹಾಗೂ ಗಿರಿಜನ ಉಪಯೋಜನೆಯಡಿ 35,000 ಫಲಾನುಭವಿಗಳಿಗೆ ರೂ.94.07 ಕೋಟಿ ಮೀಸಲು.

ಮಹಿಳೆಯರಿಗೆ ಮಕ್ಕಳಿಗೆ ಸೌಲಭ್ಯಗಳನ್ನೊದಗಿಸಲು ಅರುಣೋದಯ, ನವಚೇತನ, ಜಾಗೃತಿ, ನಮ್ಮ ಮಗಳು ನಮ್ಮ ಶಕ್ತಿ, ಫಾಸ್ಟರ್ ಕೇರ್, ವಿಕಾಸಿನಿ, ಕಿತ್ತೂರು ರಾಣಿ ಚೆನ್ನಮ್ಮ ಪ್ರಶಸ್ತಿ, ಸ್ವಶಕ್ತಿ ಮತ್ತಿತರ ಅನೇಕ ಕಾರ್ಯಕ್ರಮಗಳು.

**ಕೃಷಿ, ತೋಟಗಾರಿಕೆ ಮತ್ತು ಪಶು ಸಂಗೋಪನೆ** : ಕೃಷಿ ಉತ್ಪಾದನೆಗಳ ಸಂಕಷ್ಟ ಮಾರಾಟ ತಡೆಗಾಗಿ ಕ್ರಮ. ರಸಗೊಬ್ಬರಗಳ ಮೇಲಿನ ರಿಯಾಯಿತಿ ಹೆಚ್ಚಳ. ಸಣ್ಣ ರೈತರಿಗಾಗಿ ನಮ್ಮ ಮನೆ ನಮ್ಮ ತೋಟ ಕಾರ್ಯಕ್ರಮ, ತಳ್ಳುಗಾಡಿ ತರಕಾರಿ ವ್ಯಾಪಾರಿಗಳಿಗಾಗಿ ಜೀವನಮಾರ್ಗ ಕಾರ್ಯಕ್ರಮ; ಜಾನುವಾರುಗಳಿಗೆ ಶೇ.100ರಷ್ಟು ಆರೋಗ್ಯ ರಕ್ಷಣೆ.




**ಆರೋಗ್ಯ** : ಮೂರು ಹಂತಗಳ ಆರೋಗ್ಯ ಪರಿಕರಗಳ ವ್ಯವಸ್ಥೆ ಉಪಕೇಂದ್ರಗಳು, ಪ್ರಾಥಮಿಕ ಆರೋಗ್ಯ ಕೇಂದ್ರಗಳು ಹಾಗೂ ಸಮುದಾಯ ಆರೋಗ್ಯ ಕೇಂದ್ರಗಳು. ವಿಶ್ವಬ್ಯಾಂಕ್ ನೆರವಿನ ಕರ್ನಾಟಕ ಆರೋಗ್ಯ ಸೇವೆಗಳ ಅಭಿವೃದ್ಧಿ ಯೋಜನೆ-II ರೂ.548.50 ಕೋಟಿಯ ಕಾರ್ಯಕ್ರಮದಡಿ ತಾಲ್ಲೂಕು ಹಾಗೂ ಜಿಲ್ಲಾಮಟ್ಟದ ಆಸ್ಪತ್ರೆಗಳ ಸುಧಾರಣೆ; ಬಡತನ ರೇಖೆಯ ಕೆಳಗಿರುವ ಕಡು ಬಡವರ ಉಚಿತ ವೈದ್ಯಕೀಯ ಶುಶ್ರೂಷೆಗಾಗಿ ಮುಖ್ಯಮಂತ್ರಿಗಳ ವೈದ್ಯಕೀಯ ಪರಿಹಾರ ನಿಧಿ; ಬಡವರಿಗೆ ಮಾರಕ ಕಾಯಿಲೆಗಳ ಚಿಕಿತ್ಸೆಗೆ ರೂ.100 ಕೋಟಿ ಮೊತ್ತದ ಸ್ಥಾಯಿ ನಿಧಿ; 800 ವೈದ್ಯರ ನೇಮಕಾತಿ; 40 ಲಕ್ಷ ಪ್ರಾಥಮಿಕ ಶಾಲಾ ಮಕ್ಕಳಿಗೆ ಉಚಿತ ವೈದ್ಯಕೀಯ ತಪಾಸಣೆಯ ಬೃಹತ್ ಕಾರ್ಯಕ್ರಮ.

**ವಿದ್ಯುಚ್ಛಕ್ತಿ**: ರಾಜ್ಯದಲ್ಲಿ ಮಳೆಯ ಅಭಾವವೇ ವಿದ್ಯುತ್






ಕೊರತೆಗೆ ಮುಖ್ಯ ಕಾರಣ. ವಿದ್ಯುತ್ ಕೊರತೆ ನೀಗಲು ಹೊಸ ಶಾಖೋತ್ಪನ್ನ ವಿದ್ಯುತ್ ಸ್ಥಾವರಗಳ ಆರಂಭಕ್ಕೆ ಕ್ರಮ. ರಾಯಚೂರು ಶಾಖೋತ್ಪನ್ನ ವಿದ್ಯುತ್ ಕೇಂದ್ರದ 5 ಮತ್ತು 6ನೇ ಘಟಕಗಳನ್ನು ಪ್ರಾರಂಭಿಸಲು ವಿವಿಧ ಹಣಕಾಸು ಸಂಸ್ಥೆಗಳಿಂದ ಹಾಗೂ ಸಾರ್ವಜನಿಕ ಸಂಸ್ಥೆಗಳಿಂದ ರೂ.1,545 ಕೋಟಿ ಸಂಗ್ರಹಕ್ಕೆ ಕರ್ನಾಟಕ ವಿದ್ಯುತ್ ನಿಗಮದ ಉಪಕ್ರಮ. ಉತ್ತಮ ಕಾರ್ಯಾಚರಣೆಯಿಂದಾಗಿ ಶಾಖೋತ್ಪನ್ನ ವಿದ್ಯುತ್ ಉತ್ಪಾದನೆ 1996-97ರಲ್ಲಿ 5,152 ಮಿ.ಯೂನಿಟ್‌ಗಳಿಗೆ ಹೆಚ್ಚಳ.

**ಕೈಗಾರಿಕೆ** : 1996-97ರಲ್ಲಿ ರೂ.6,577.75 ಕೋಟಿ ಬಂಡವಾಳ ಹೂಡಿಕೆಯ 20 ಬೃಹತ್ ಖಾಸಗಿ ಯೋಜನೆಗಳಿಗೆ ಸರ್ಕಾರದ ಅಸ್ತು. ಈ ಪ್ರತಿಷ್ಠಿತ ಯೋಜನೆಗಳ ಪೈಕಿ ಆನೇಕಲ್ ಬಳಿ ವಾಲ್ವೋರವರ ರೂ.525 ಕೋಟಿ ಹೂಡಿಕೆಯ ಭಾರಿ ವಾಣಿಜ್ಯ ವಾಹನ ಘಟಕ ಹಾಗೂ ಧಾರವಾಡದಲ್ಲಿ ಟೆಲ್ಕೊರವರ ರೂ.150 ಕೋಟಿ ಹೂಡಿಕೆಯ ವಿಶೇಷೋದ್ದೇಶ ವಾಹನ ಘಟಕ.

**ಕುಡಿಯುವ ನೀರು** : ಗ್ರಾಮೀಣ ಪ್ರದೇಶಗಳಲ್ಲಿ ಕುಡಿಯುವ ನೀರು ಸರಬರಾಜಿಗೆ ಪ್ರಥಮಾದ್ಯತೆ. ಮುಂದಿನ ಮೂರು ವರ್ಷಗಳ ಅವಧಿಯಲ್ಲಿ ರಾಜ್ಯದ ಎಲ್ಲಾ






ಗ್ರಾಮಗಳಿಗೂ ಕುಡಿಯುವ ನೀರು ಸರಬರಾಜು ಮಾಡುವ ಸಮಗ್ರ ಕಾರ್ಯಕ್ರಮಕ್ಕಾಗಿ 900 ಕೋಟಿ ರೂ. ಮೀಸಲು.

**ಗ್ರಾಮೀಣಾಭಿವೃದ್ಧಿ** : ಗ್ರಾಮೀಣ ಪ್ರದೇಶಗಳಲ್ಲಿ ಹಿಂದಿನ 10 ವರ್ಷಗಳಲ್ಲಿ 1,09,435 ಶೌಚಾಲಯಗಳನ್ನು




ನಿರ್ಮಿಸಿದ್ದರೆ ಕಳೆದ ಕೇವಲ 18 ತಿಂಗಳ ಅವಧಿಯಲ್ಲಿ ನಿರ್ಮಲ ಗ್ರಾಮ ಯೋಜನೆಯಡಿ 2,92,000 ಶೌಚಾಲಯಗಳನ್ನು ನಿರ್ಮಿಸಿ ಗುರಿಮೀರಿ ಸಾಧನೆ. ಸ್ವಸ್ತಿ ಗ್ರಾಮ ಯೋಜನೆಯಡಿ 100 ಮಾದರಿ ಗ್ರಾಮಗಳ ಅಭಿವೃದ್ಧಿ. ನೆಲ, ಜಲ, ನೈರ್ಮಲ್ಯ ಮತ್ತು ಗಿಡಮರಗಳ ಅಭಿವೃದ್ಧಿಗೆ ಪೂರಕ. ವಿದ್ಯಾವಂತ ಯುವಕರಿಗೆ ಸ್ವಾವಲಂಬನಾ ಯೋಜನೆ - ಮೊದಲ ಹಂತದಲ್ಲಿ 4 ಜಿಲ್ಲೆಗಳಲ್ಲಿ ಅನುಷ್ಠಾನ. ವಿವಿಧ ಬಡತನ ನಿರ್ಮೂಲನ ಕಾರ್ಯಕ್ರಮಗಳು ಹಾಗೂ ಗ್ರಾಮೀಣ ಪರಿಕರ ಅಭಿವೃದ್ಧಿ ಕಾರ್ಯಕ್ರಮಗಳಡಿ 1996-97ರಲ್ಲಿ ರೂ.883.31 ಕೋಟಿ ವೆಚ್ಚ. ನಬಾರ್ಡ್ ನೆರವಿನ ಗ್ರಾಮೀಣ ಪರಿಕರ ಅಭಿವೃದ್ಧಿ ನಿಧಿಯಿಂದ ಎರಡು ವರ್ಷಗಳಲ್ಲಿ ರೂ.237 ಕೋಟಿ ವೆಚ್ಚ.

**ಪರಿಕರ ಸಾಧನಗಳ ಅಭಿವೃದ್ಧಿ**: ರಸ್ತೆಗಳ ದುರಸ್ತಿಗಾಗಿ ರೂ.40 ಕೋಟಿ ಹೆಚ್ಚುವರಿ ಮೊತ್ತ; ರಸ್ತೆ ಜಾಲದ ಅಭಿವೃದ್ಧಿಗಾಗಿ ಹಾಗೂ ಸುಧಾರಣೆಗಾಗಿ ರಸ್ತೆ ನಿಧಿ ಸ್ಥಾಪನೆ; ರಾಜ್ಯ ಹೆದ್ದಾರಿಗಳ ಸುಧಾರಣೆಗಾಗಿ ಖಾಸಗಿ ವಲಯದ ಸಹಭಾಗಿತ್ವಕ್ಕಾಗಿ ಹೊಸ ನೀತಿ; ಹೊಸ ಹೆದ್ದಾರಿಗಳ ಆರಂಭಕ್ಕೆ



ಕ್ರಮ ಮತ್ತು ಬೆಂಗಳೂರು- ಮೈಸೂರು ಎಕ್ಸ್‌ಪ್ರೆಸ್ ಹೆದ್ದಾರಿ ನಿರ್ಮಾಣಕ್ಕೆ ಕ್ರಮ; ಖಾಸಗಿ ವಲಯದಿಂದ ಕಿರು ಬಂದರುಗಳ ಅಭಿವೃದ್ಧಿ; ಆರು ಹೊಸ ವಿಮಾನ ನಿಲ್ದಾಣಗಳ ಸ್ಥಾಪನೆಯ ಪ್ರಸ್ತಾವನೆ

**ವಾಣಿಜ್ಯ ತೆರಿಗೆ** : ಸರ್‌ಚಾರ್ಜ್ ರದ್ದು. 28 ವಿವಿಧ ವಸ್ತುಗಳ ಮೇಲೆ ತೆರಿಗೆ ಇಳಿತ. ರಸಗೊಬ್ಬರಗಳಿಗೆ ತೆರಿಗೆ ವಿನಾಯಿತಿ - ಇವೆಲ್ಲ ಬೆಲೆ ಏರಿಕೆಗೆ ಕಡಿವಾಣ ಹಾಕುವ ಕ್ರಮಗಳು. ಶ್ರೀಸಾಮಾನ್ಯನಿಗೆ ನಿರಾಂತಕ ಕ್ಷಣ.

**ಇಷ್ಟೇ ಅಲ್ಲ!**

- ಆಡಳಿತ ಯಂತ್ರವನ್ನು ಚುರುಕುಗೊಳಿಸಲು ಹಾಗೂ ಸರ್ಕಾರವನ್ನು ಜನರ ಸಮೀಪಕೊಯ್ಯಲು ಮತ್ತಷ್ಟು ಅವಕಾಶ ಮಾಡಿಕೊಡಲು ಏಳು ಹೊಸ ಜಿಲ್ಲೆಗಳ ಉದಯ; ದೀರ್ಘಕಾಲದಿಂದಲೂ ನೆನೆಗುದಿಯಲ್ಲಿದ್ದ ಈ ವಿಷಯದಲ್ಲಿ ದಿಟ್ಟ ನಿರ್ಧಾರ.
- ಬೀದಿ ಮಕ್ಕಳು, ಚಿಂದಿ ಆಯುವ ಮಕ್ಕಳು ಹಾಗೂ ಬಾಲಕಾರ್ಮಿಕರ ಕಲ್ಯಾಣಕ್ಕಾಗಿ ಯೋಜನೆಗಳು. ಮನೋವಿಕಲ ಮಕ್ಕಳಿಗಾಗಿ ಬಾಲಮಂದಿರಗಳು.
- ವಿವೇಚನಾ ಪೂರ್ಣ ವರ್ಗಾವಣೆ ನೀತಿ.

**ಈ ಎಲ್ಲ ಕಾರ್ಯಕ್ರಮಗಳ ಯಶಸ್ವೀ ಸಾಧನೆಯಿಂದಾಗಿ ರಾಜ್ಯವು ನಡೆಯುತ್ತಿರುವ ಹಾದಿಯು ಪ್ರಗತಿ ಪಥದತ್ತ ಸಾಗಿದೆ**

## ಜನರಿಗೇ ಪ್ರಗತಿಯ ಫಲ : ಅದುವೇ ಸರ್ಕಾರದ ಛಲ

ಕರ್ನಾಟಕ ವಾರ್ತೆ

ಮಾತು ಮಾಣಿಕ್ಯ ೪೪

# ಮನೋಬಲ ಮನೋರಥ

ಕಾರ್ಯಾಗಾರವೊಂದರಲ್ಲಿ ಬೇರೆ ಬೇರೆ ಕಾರ್ಮಿಕರು ತಮ್ಮದೇ ಆದ ಕಾರ್ಯದಲ್ಲಿ ನಿರತರು. ಇವರೆಲ್ಲರ ಕೆಲಸವನ್ನು ಒಂದುಗೂಡಿಸಿ ಹೊಂದಾಣಿಕೆಯನ್ನು ಸಾಧಿಸಿ ಅವರ ಮೇಲ್ವಿಚಾರಣೆ ನಡೆಸುವ ಹೊಣೆ ವ್ಯವಸ್ಥಾಪಕನದು. ಈ ಕಾರ್ಮಿಕರೆಲ್ಲ ಆತನಿಗೆ ವಿಧೇಯರು. ಅವರ ಕಾರ್ಯಾಚರಣೆಯನ್ನು ಅನುಮೋದಿಸುವವನು ಆತನು. ಇಂತಹದೇ ವ್ಯವಸ್ಥೆ ನಮ್ಮೀ ದೇಹದಲ್ಲಿ. ಇಂದ್ರಿಯಗಳು ಬೇರೆ ಬೇರೆ ಕೆಲಸ ನಿರ್ವಹಿಸಿದರೂ ಅದರಲ್ಲಿ ಏಕಸೂತ್ರತೆಯನ್ನು ಸಾಧಿಸಿ ತನ್ನ ಸಮ್ಮತಿಯನ್ನು ಸೂಚಿಸುವುದು ಮನಸ್ಸು. ಕನ್ಯಾ ಪರೀಕ್ಷೆಯಂತಹ ಸಂದರ್ಭವನ್ನೇ ಗಮನಿಸಬಹುದು. ಕನ್ಯೆಯ ರೂಪ ಕಂಡು ಕಣ್ಣು 'ಸರಿ' ಎಂದೀತು; ಅವಳ ಮಧುರ ಸ್ವರವನ್ನು ಆಲಿಸಿ ಕಿವಿ ಸಂತಸಪಟ್ಟೀತು; ಆದರೆ 'ಕನ್ಯೆ ಮನಸ್ಸಿಗೆ ಬಂದಿದ್ದಾಳೆ' ಎಂಬ ಮನದ ಪ್ರಶಸ್ತಿಪತ್ರ ದೊರಕಿದ ಮೇಲೆಯೇ ಲಗ್ನಪತ್ರಿಕೆ ಸಿದ್ಧ.

ನಿತ್ಯದ ಬದುಕಿನ ಪ್ರತಿಯೊಂದು ಹಂತದಲ್ಲೂ ಈ 'ಮನ'ವೆಂಬ ಮಹಾನುಭಾವನ ಪ್ರವೇಶವಿದ್ದುದೇ ಪರೀಕ್ಷೆಯಲ್ಲಿ ಯಶಸ್ಸು ಇಲ್ಲವೆ ಕ್ರೀಡೆಯಲ್ಲಿ ಗೆಲುವು ಪಡೆದವನನ್ನು ಅಭಿನಂದಿಸುವುದು ಬಾಯಿಯಿಂದಾದರೂ 'ಮನವಾರೆ ಅಭಿನಂದಿಸುತ್ತೇನೆ' ಎಂದೇ ಪದಪ್ರಯೋಗ. ರುಚಿಸಿದ ತಿಂಡಿಯನ್ನು ನಾಲಿಗೆ ಚಪ್ಪರಿಸುತ್ತಾ ಸಾಕಷ್ಟು ಸೇವಿಸಿದವನು 'ಮನದಣಿಯೆ ತಿಂದುಬಿಟ್ಟೆ' ಎನ್ನುತ್ತಾನೆ. ಹೆರವರು ಸಂಕಟದಲ್ಲಿ ಸಿಲುಕಿದುದನ್ನು ಕಂಡು ಮೃದು ಸ್ವಭಾವದವನ 'ಮನ ಕರಗು'ತ್ತದೆ. ದುಃಖಿತರನ್ನು ಕಂಡು ಸಹಾನುಭೂತಿಯುಳ್ಳವನ 'ಮನ' ಮೊದಲು ಮಿಡಿಯುತ್ತದೆ; ಕಂಬನಿ ಮಿಡಿಯುವುದು ಆ ಬಳಿಕವೆ. ಪ್ರಭಾವಶಾಲಿಯಾದ ಶೈಲಿಯಲ್ಲಿ ಮಾತನಾಡುವ ಪ್ರವಚನಕಾರನು ತಾನು ಪ್ರತಿಪಾದಿಸುವ ವಿಷಯವನ್ನು ಕೇಳುಗರ ಮನಂಬುಗುವಂತೆ ಮಾಡುತ್ತಾನೆ. ಇಂತಹ ಹತ್ತು ಹಲವು ಪದಪ್ರಯೋಗಗಳಲ್ಲಿ ಮನಕ್ಕಿರುವ ಪ್ರಾಧಾನ್ಯ ಒಡೆದುಕಾಣುತ್ತದೆ. ಇಂದ್ರಿಯಗಳಲ್ಲಿ ಇದು ಗೌಣ, ಇದು ಪ್ರಧಾನ ಎಂದು ನಿವೇದಿಸುವುದು ಅರ್ಥಹೀನವೇನೋ. ಅವೆಲ್ಲ ಕೂಡಿ ಕಾರ್ಯಪ್ರವೃತ್ತವಾದಾಗಲೆ ದೇಹಕ್ಕೆ ನೆಮ್ಮದಿ. ಆದರೂ ಅವೆಲ್ಲ ಮನಕ್ಕೆ ಅಧೀನವಾಗಿರುವುದರಿಂದ ಮನಕ್ಕೇನೇ ಪ್ರಾಶಸ್ತ್ಯ.

ಮನಸ್ಸಿನಿಂದ ಪರಿಶುದ್ಧವೆಂದು ಪರಿಗಣಿತವಾದುದನ್ನು ಎಂದರೆ ಅಂತಹ ಪ್ರಶಸ್ತ ಕರ್ಮವನ್ನು ಆಚರಿಸತಕ್ಕದ್ದು ಎನ್ನುತ್ತಾನೆ ಮನು. ಇದಲ್ಲದೆ ಶಾಸ್ತ್ರದ ಬೆಳಕಿನಲ್ಲಿ ಪರಿಷ್ಕೃತವಾದುದನ್ನು ನುಡಿಯುವುದು, ಬಟ್ಟೆಯಿಂದ ಸೋಸಿದ ನೀರನ್ನೇ ಕುಡಿಯುವುದು, ನೋಟದಿಂದ ಸುರಕ್ಷಿತವೆಂದು ಕಂಡಾಗಲೆ ಮುಂದಡಿ ಇಡುವುದು. ಅದರಂತೆಯೆ ಮನಸ್ಸು ಪ್ರಶಸ್ತವೆಂದು ಒಪ್ಪಿದುದನ್ನೇ ಆಚರಿಸುವುದು ಎಂಬ ಅರ್ಥವುಳ್ಳ ಮನುವಿನ ಉಕ್ತಿ ಇಂತಿದೆ:

ಶಾಸ್ತ್ರಪೂತಂ ವದೇದ್ ವಾಕ್ಯಂ ವಸ್ತ್ರ ಪೂತಂ ಜಲಂ ಪಿಬೇತ್। ದೃಷ್ಟಿಪೂತಂ ಪದಂ ನ್ಯಸ್ಯೇತ್ ಮನಂ ಪೂತಂ ಸಮಾಚರೇತ್।।

ದೇಹೇಂದ್ರಿಯಗಳೊಂದಿಗೆ ಹೋಲಿಸಿದಾಗ ಮನವು ಕಿರಿದು ಎಂದೆನಿಸೀತು. ಆದರೆ ಅದರ ಬಲವನ್ನು ದೇಹೇಂದ್ರಿಯಗಳು ಸರಿಗಟ್ಟಲಾರವು. ಮುಪ್ಪಿನಿಂದ ಶರೀರ ಜರ್ಜರಿತವಾಗಿ ಕಣ್ಣು, ಕಿವಿ ಮೊದಲಾದವುಗಳ ಕಾರ್ಯಸಾಮರ್ಥ್ಯ ಕ್ಷೀಣಿಸಿದರೂ ಮನೋಬಲವುಳ್ಳವನು ಉಲ್ಲಸಿತನಾಗಿಯೇ ಇರುತ್ತಾನೆ. ಎಷ್ಟೇ ಕಷ್ಟನಷ್ಟಗಳು

ಬಂದೊದಗಿದರೂ ಸೊಪ್ಪು ಹಾಕುವುದಿಲ್ಲ. ಹತಾಶೆಯ ಭಾವನೆ ಅಂತಹನ ಹತ್ತಿರ ಕೂಡ ಸುಳಿಯುವುದಿಲ್ಲ. 'ಮನಸ್ವೀ ಕಾರ್ಯಾರ್ಥೀ ನ ಗಣಯತಿ ದುಃಖಂ ನ ಚ ಸುಖಂ' ಎಂಬ ಭರ್ತೃಹರಿಯ ಮಾತಿನಂತೆ ಮನೋದಾರ್ಢ್ಯವನ್ನು ಪಡೆದ ವ್ಯಕ್ತಿ ಬದುಕಿನಲ್ಲಿ ತಾನಿರಿಸಿಕೊಂಡ ಉದಾತ್ತ ಗುರಿಯತ್ತ ಮುನ್ನಡೆಯುವಾಗ ಬಂದೊದಗುವ ಸುಖ ದುಃಖಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳುವುದಿಲ್ಲ. ಮನೋಬಲಕ್ಕೆ ಹಿಡಿದ ಕೈಗನ್ನಡಿಯಲ್ಲವೆ ಇದು?

ಈಚೆಗೆ ಪರಿಸರ ಮಾಲಿನ್ಯದ ಬಗೆಗೆ ಸಾಕಷ್ಟು ಚರ್ಚೆ ಸಾಗಿದೆ. ತನ್ನ ಮನೆ ಅಷ್ಟೆ ಶುಚಿಯಾಗಿದ್ದರೆ ನಡೆಯುತ್ತಿದೆ. ಸಾಲದು; ಅಕ್ಕಪಕ್ಕದ ಭಾಗ ಕೂಡ ಚೊಕ್ಕಟವಾಗಿರಬೇಕೆಂಬುದು ಎಲ್ಲರೂ ಅರಿತ ವಿಷಯ. ಅದರಂತೆಯೆ ತನು-ಮನಗಳೆರಡರಲ್ಲಿ ಒಂದು ಆರೋಗ್ಯವಂತವಾಗಿದ್ದರೆ ಸಾಲದು. ಒಂದು ಅಸ್ವಸ್ಥವಾದರೆ ಅದರ ಬಿಸಿ ಇನ್ನೊಂದಕ್ಕೆ ತಟ್ಟುವುದು. `A sound mind in a sound body or a sound body in a sound mind' ಎಂದೆಲ್ಲ ವಾದ ಸರಣಿ ಎಂದಿನಿಂದಲೂ ಕೇಳಿಸುತ್ತ ಬಂದುದು. ತನ್ನ ಮನೆಯ ಒಳಗಣ ಭಾಗವೊಂದನ್ನು ಬಾಡಿಗೆ ಹಣದ ಮೇಲೆ ಕಣ್ಣಿರಿಸಿ ಒಳಬಕ್ಕಲಿಗೆ ನೀಡುತ್ತಾರಲ್ಲ, ಹಾಗಿದೆ ತನುಮನಗಳ ನಡುವಣ ಸಂಬಂಧ. ಮನೆಯ ಮಾಲೀಕ ಮತ್ತು ಬಾಡಿಗೆದಾರ ಇಬ್ಬರೂ ಏಕಕಾಲಕ್ಕೆ ಸ್ವಸ್ಥರಾಗಿದ್ದರೇನೆ ಸುಖಮಯ ಸಹಜೀವನ ಸಾಧ್ಯ. ತನುಮನಗಳಲ್ಲಿ ಯಾವುದರ ಸ್ವಾಸ್ಥ್ಯ ಮೊದಲು, ಯಾವುದರದು ಅನಂತರ? ಈ ವಿಷಯಗಳಲ್ಲಿ ದೇಹದ ವಕಾಲತ್ತು ವಹಿಸುವವರು ಇರುವಂತೆ, ಮನಕ್ಕೆ ಅಗ್ರಪಟ್ಟ ಕಟ್ಟುವವರೂ ಉಂಟು. ಏನಿದ್ದರೂ ಇವೆರಡೂ ನೆಮ್ಮದಿಯನ್ನು ಕಾಪಾಡಿಕೊಂಡಿದ್ದರೆ ಬದುಕು ಸುಖ-ಸಮಾಧಾನದ ಬೀಡಾಗುವುದು ಖಂಡಿತ.

ಮನಸ್ಸಿನ ಮಹತಿಯನ್ನು ಎತ್ತಿ ತೋರಿಸಲೆಂದೋ, ಅದರ ಘನತೆಯನ್ನು ಹೆಚ್ಚಿಸಲೆಂದೋ ನಮ್ಮ ಪ್ರಾಚೀನ ಶಾಸ್ತ್ರಕಾರರು ಮಹಾದೇವನನ್ನು ಮನಸ್ಸಿನ ಅಭಿಮಾನಿ ದೇವತೆಯೆಂದು ಬಗೆದಿರಬೇಕು. ಶಂಕರನ ಅನುಗ್ರಹದಿಂದಲೆ ತಾನೆ ಪಾಶುಪತದಂತಹ ದಿವ್ಯಾಸ್ತ್ರಗಳನ್ನು ಸಂಪಾದಿಸಲು ಪಾರ್ಥನು ಸಮರ್ಥನಾದುದು! ಅದರಂತೆಯೆ ಮನದ ಬೆನ್ನಿಗೆ ಮಹಾದೇವನಿದ್ದುದರ ದ್ಯೋತಕವಾಗಿಯೇ 'ಮನವಿದ್ದಲ್ಲಿ ಮಾರ್ಗವಿದೆ,' 'ಮನವಿದ್ದಲ್ಲಿ ಮಾಹಾದೇವನಿದ್ದಾನೆ' ಎಂಬೆಲ್ಲಾ ನುಡಿಗಳು ರೂಢಿಯಲ್ಲಿ ಬಂದಿರಲು ಸಾಕು.

ಮನದ ಬಲಾತಿಶಯವನ್ನು ಪ್ರತಿಬಿಂಬಿಸುವಂತಿದೆ ಆಂಗ್ಲ ವಾಙ್ಮಯದ ಸೂಕ್ತಿ: `The mind in its own place can make a heaven of hell & a hell of heaven' ತನುವಿನ ಒಳಗಡೆ ಅದಾವುದೂ ಠಾವಿನಲ್ಲಿ ಅವಿತುಕೊಂಡಿರುವ ಮನವು ಬಯಸಿದರೆ ನರಕವನ್ನು ನಾಕವನ್ನಾಗಿ ಪರಿವರ್ತಿಸಬಲ್ಲದು; ಇಲ್ಲವೆ ನಾಕವನ್ನು ನರಕವನ್ನಾಗಿ ಮಾರ್ಪಡಿಸಬಲ್ಲದು. ಈ ತೆರನಾಗಿ ತಾರಕ ಮತ್ತು ಮಾರಕ ಎಂಬೆರಡೂ ಶಕ್ತಿಗಳನ್ನು ಪಡೆದಿರುವ ಮನಸ್ಸು ಒಳಿತನ್ನು ಇಲ್ಲವೆ ಕೆಡಕನ್ನು ಸೃಜಿಸಬಲ್ಲದು.

ದೂರದ ಪ್ರಯಾಣ ಕೈಕೊಳ್ಳುವವನಿಗೆ, ಸ್ವಂತದ ವಾಹನವಿದ್ದರೆ ವಾಸಿ ತಾನೆ? ಹಾಗೆಯೆ ಎಲ್ಲೆಲ್ಲಿಯೋ ಯಾವಾಗಲೂ ಅಲೆದಾಡಲು ಎಳಸುವ ಮನಸ್ಸಿಗೆ ವಾಹನ ಬೇಕಲ್ಲವೆ? ಬಯಕೆಗಳ ಜನ್ಮ ಭೂಮಿಯೆಂದೆನಿಸಿದ ಮನಸ್ಸು ತಾನೇ ರಥವಾಗಿ ಬಿಡುತ್ತದೆ. ನಿಮಿಷಾರ್ಧದಲ್ಲಿ 'ಮನೋರಥ' ಸಿದ್ಧ. `If wishes were horses, beggers would ride! (ಬಯಕೆಗಳು ಕುದುರೆಗಳಾಗಿದ್ದರೆ ತಿರುಕರೂ ಸವಾರಿ ಮಾಡುವವರೆ!) ಎಂದು ಹೇಳುತ್ತಾರಲ್ಲ ಹಾಗೆಯೇ ಮನವೆಂಬ ಈ ತೇರು ಕ್ರಮಿಸದ ದಾರಿಯಿಲ್ಲ; ನಿಲುಕದ ನೆಲೆಯಿಲ್ಲ; ಮರೆಯದ ಐಸಿರಿಯಿಲ್ಲ. ಇದನ್ನು ಗಮನಿಸಿಯೆ 'ಮನೋರಥಾನಾಮಗತಿರ್ನವಿದ್ಯತೇ' ಎಂದು ಕಾಳಿದಾಸ ನುಡಿದಿರಬೇಕು.

ಮನಸ್ಸಿನಲ್ಲಿ ಮಂಡಿಗೆ ಮಾಡುವಷ್ಟು ಪ್ರಶಸ್ತವಾದ ಅವಕಾಶ ಉಂಟೋ ಏನೋ! ಗೋದಿಗೆ ರೊಕ್ಕ ತೆರಬೇಕಿಲ್ಲ! ತುಪ್ಪ, ಸಕ್ಕರೆ, ಹಾಲು ಬೇಕಿಲ್ಲ, ಒಲೆ ಹೊತ್ತಿಸಬೇಕಿಲ್ಲ. ಹರವಿಯ ಮೇಲೆ ಹರಡಿ ಬೇಯಿಸಬೇಕಿಲ್ಲ. ಕ್ಷಣಾರ್ಧದಲ್ಲಿ ಮನಸ್ಸಿನ ಮಂಡಿಗೆ ಸಿದ್ಧ. ಇದೊಂದು ವಿವಿಧ ಸುಖದ ಸೃಷ್ಟಿಗೆ ಮನಸ್ಸು ಕಾರಣವಲ್ಲವೆ?

**ಶ್ರೀನಿವಾಸ ತೋಫಖಾನೆ**







# ಮರುಭೂಮಿಯಲ್ಲಿ ನಂದನವನ

ಬುದ್ಧಿವಂತಿಕೆಯಲ್ಲಿ ತಾನೇನೂ ಕಡಿಮೆಯವನಲ್ಲವೆಂದು ಅರಸನ ಮನವೊಲಿಸಬೇಕಾದರೆ ಮಂತ್ರಿಗೆ ಸಾಕುಬೇಕಾಗಿ ಹೋಯಿತು. ಅಂತೂ ಕೊನೆಗೊಮ್ಮೆ ತನ್ನ ಮೂರನೆಯ ಪ್ರಯತ್ನದಲ್ಲಿ ಪ್ರತಾಪನನ್ನು ಯಮಸದನಕ್ಕಟ್ಟಿಯೇ ತೀರುವುದಾಗಿ ಅದು ಹೇಗೊ ಅರಸನನ್ನು ಒಪ್ಪಿಸಲು ಅವನು ಸಮರ್ಥನಾದ.

"ಮಹಾರಾಜ, ಈ ಸಲ ಮೊದಲಿಗಿಂತಲೂ ಎಷ್ಟೋ ಪಾಲು ಹೆಚ್ಚು ಅಪಾಯಕರವಾದ ಕಾರ್ಯವನ್ನು ಪ್ರತಾಪನಿಗೆ ವಹಿಸಿಕೊಡೋಣ. ಈ ಸಲ ಅವನು ಸಜೀವ ಮರಳಿ ಬರುವನೆಂಬುದಂತೂ ಅಸಾಧ್ಯಕೋಟಿಯ ಮಾತು. ತಾವು, ನಾನು ಹಾಗೂ ನಮ್ಮ ದಂಡನಾಯಕ-ಮೂವರೂ ನಮ್ಮ ನಮ್ಮ ಪಿತೃಗಳಿಗೆ ಪತ್ರಗಳನ್ನು ಬರೆದು ಅವನನ್ನು ಅವರಿಗೊಪ್ಪಿಸಿ ಅವರ ಉತ್ತರಗಳನ್ನು ತನ್ನಿರೆಂದು ಪ್ರತಾಪನಿಗೆ ವಿಧಿಸೋಣ. ನಮ್ಮ ಪುರಾತನರು ಸ್ವರ್ಗದಲ್ಲಿರುವರೋ ನರಕದಲ್ಲಿರುವರೋ ಕಂಡವರಾರು ? ಅವನಿಗಾದರೂ ಏನು ಗೊತ್ತು ? ಒಂದು ವೇಳೆ ಅವನಿಗದು ತಿಳಿದಿದೆ ಎಂದಿಟ್ಟುಕೊಂಡರೂ ಅವನು ಅಲ್ಲಿಗೆ ತೆರಳುವುದೆಂತು ? ತಮ್ಮ ಆಜ್ಞೆಯನ್ನು ಅವನು ಮೀರಿದ್ದೇ ಆದರೆ ಅವನಿಗೆ ಮರಣದಂಡನೆಯನ್ನೇ ವಿಧಿಸುವುದಾಗಿ ಮೊದಲೇ ಎಚ್ಚರಿಕೆ ಕೊಡೋಣ. ಇದರಿಂದಾಗಿ ಈ ಸಲ ಅವನು ನಶಿಸಿಹೋಗುವಲ್ಲಿ ಹಾಗೂ ಅವನ ಮೂವರು ಜನ ಹೆಂಡತಿಯರ ತಮ್ಮವರಾಗುವಲ್ಲಿ ನನಗೆ ಯಾವ ಸಂದೇಹವೂ ತೋರುತ್ತಿಲ್ಲ."

ಮಂತ್ರಿಯ ಈ ಮಾತು ಅರಸನಲ್ಲಿ ವಿಶ್ವಾಸ ಹುಟ್ಟಿಸಿತು. ಅದರಂತೆಯೇ ಮೂರು ಪತ್ರಗಳು ಕ್ಷಿಪ್ರದಲ್ಲಿಯೇ ಸಿದ್ಧವಾದವು. ಅನಂತರ ಪ್ರತಾಪನನ್ನು ಕರೆಸಿ ರಾಜಾಜ್ಞೆಯನ್ನು ಅವನಿಗೆ ತಿಳಿಸಲಾಯಿತು. ರಾಜಾಜ್ಞೆಯನ್ನು ಧಿಕ್ಕರಿಸುವುದರಿಂದ ಕೇಡಾಗಬಹುದೆಂದು ಬಗೆದು ಆ ಮೂರೂ ಪತ್ರಗಳನ್ನು ಸ್ವೀಕರಿಸಿ ಅವನು ಮನೆಗೆ ಮರಳಿದ.

ಮನೆ ತಲುಪಿದೊಡನೆಯೆ ಪ್ರತಾಪನು ಮಾಡಿದ ಕೆಲಸವೆಂದರೆ ತನ್ನ ಪ್ರಥಮ ಪತ್ನಿಯಾದ ಇಂದ್ರಕುಮಾರಿಯನ್ನು ಕಂಡು ಈ ಹೊಸ ಸಂಗತಿಯನ್ನು ತಿಳಿಸಿದ್ದು.

ಇದನ್ನು ಕೇಳಿದ ಇಂದ್ರಕುಮಾರಿಗೆ ಆಘಾತವಾದಂತಾಯಿತು. 'ನನ್ನ ಪತಿಯನ್ನು ಪರೀಕ್ಷಿಸಿ ಅವನ ಅದ್ಭುತ ಶಕ್ತಿಯನ್ನು ಕಂಡು ಅರಸ ತಲೆದೂಗುತ್ತಿದ್ದಾನೆಂದು ನಾನು ಇದುವರೆಗೆ ಬಗೆದುದು ತಪ್ಪು ಎಂದಂತಾಯಿತು. ಈ ಸಲ ಅವನು ಪ್ರತಾಪನಿಗೆ ವಹಿಸಿರುವ ಕಾರ್ಯವನ್ನು ನೋಡಿದರೆ ಇದರಲ್ಲೇನೋ ಮೋಸವಿದೆಯೆಂದು ವ್ಯಕ್ತವಾಗುತ್ತದೆ. ಬಹುಶಃ ಎಂತಾದರೂ ಪ್ರತಾಪನನ್ನು ಮುಗಿಸಿಬಿಟ್ಟು ಅವನ ಪತ್ನಿಯರಾದ ನಾವು ಮೂವರನ್ನೂ ಅಪಹರಿಸುವ ದುರಾಲೋಚನೆ ಅವನಿಗಿರಬೇಕು. ಅರಸ ಮತ್ತು ಅವನ ಸಂಗಡಿಗರಿಗೆ ಸರಿಯಾದ ಶಿಕ್ಷೆ ವಿಧಿಸುವುದೇ ಯೋಗ್ಯ ಮಾರ್ಗ' ಎಂದೆಲ್ಲ ಮನದಲ್ಲಿಯೇ ಆಲೋಚಿಸಿ ನಂತರ ಪತಿಯ

ನ್ನುದ್ದೇಶಿ, "ಸ್ವಾಮಿ, ನೀವು ಕೂಡಲೇ ಅರಮನೆಗೆ ಹೋಗಿ ಎಂಟು ದಿನಗಳಲ್ಲಿ ನಿಮ್ಮ ಕಾರ್ಯ ಪೂರೈಸಿ ಬರುವುದಾಗಿ ತಿಳಿಸಿಬನ್ನಿರಿ. ಅಲ್ಲದೆ ಎಂಟನೆಯ ದಿನ ಸಂಜೆಗೆ ವಿಶಾಲ ಅಗ್ನಿಕುಂಡವೊಂದನ್ನು ಯಜ್ಞ ಕಾರ್ಯವೊಂದಕ್ಕಾಗಿ ಸಿದ್ಧಪಡಿಸಲು ಹೇಳಿ," ಎಂದಳು.



ಆವಳನ್ನು ಸಂಪೂರ್ಣ ನಂಬಿದ್ದ ಪ್ರತಾಪ ತಕ್ಷಣ ಅರಮನೆಗೆ ತೆರಳಿದ. ಆವನು ಮರಳಿ ಬರುವುದರೊಳಗೆ ಇಂದ್ರಕುಮಾರಿಯು ಅರಸ, ಮಂತ್ರಿ ಹಾಗೂ ದಂಡನಾಯಕರಿಗೆಂಬಂತಹ ಪತ್ರವೊಂದನ್ನು ಬರೆದು ಸಿದ್ಧಪಡಿಸಿದಳು. ಅದರ ಒಕ್ಕಣಿಕೆ ಇಂತಿತ್ತು:

"ನಮ್ಮ ಪ್ರಿಯ ಪುತ್ರರೆ,

ಸ್ವರ್ಗಲೋಕದಲ್ಲಿ ನಾವೆಲ್ಲ ಆನಂದದಿಂದಿದ್ದೇವೆಂದು ಬರೆಯಲು ಸಂತೋಷವೆನಿಸುತ್ತದೆ. ಇಷ್ಟೊಂದು ವೈಭವಪೂರ್ಣ, ವಿಲಾಸಮಯ ಜೀವನವನ್ನು ಭೂಲೋಕದಲ್ಲಿ ಕಾಣುವುದೇ ಅಶಕ್ಯ. ಕಲ್ಪನೆಯಲ್ಲಿ ಕೂಡ ನಿಮಗೆ ಸುಳಿಯದಂತಹ ಸುಖ ಸೌಕರ್ಯಗಳು ನಮಗಿಲ್ಲಿ ಇವೆಯಲ್ಲದೆ, ರೂಪರಾಶಿಯರೆನಿಸಿದ ಯುವತಿಯರ ಸಂಗವೂ ದೊರೆಯುತ್ತಿದೆ. ಆದರೆ ಭೂಲೋಕದಲ್ಲಿ ನೀವು ಮಾತ್ರ ಅತ್ಯಂತ ಕೀಳು ಜೀವನವನ್ನು ಬಾಳುತ್ತಿದ್ದುದನ್ನು ಕಂಡು ನಮಗೆ ವ್ಯಸನವಾಗುತ್ತಿದೆ. ನೀವಲ್ಲಿ ಬಾಳುತ್ತಿರುವ ಜೀವನವನ್ನೇ ಇಲ್ಲಿನವರು ನರಕಪ್ರಾಯವೆಂದು ಕರೆಯುತ್ತಿದ್ದಾರೆ. ನೀವು ಮೋಸದ, ಹೊಟ್ಟೆಕಿಚ್ಚಿನ ಬಾಳನ್ನು ನಡೆಸುತ್ತಿದ್ದೀರಿ. ಇನ್ನು ಮುಂದಾದರೂ ನೀವು ಒಳ್ಳೆಯವರಾಗಬೇಕೆಂದು ನಮ್ಮ ಇಚ್ಛೆಯಾಗಿದೆ. ಆದರೆ ನಿಮ್ಮನ್ನೊಂದು ಸಲ ಕಾಣಬೇಕೆಂದು ನಮಗೆಲ್ಲ ತುಂಬ ಆಸೆಯಾಗಿದೆ. ಅಂತೆಯೆ ನಮ್ಮ ಈ ಸ್ವರ್ಗಲೋಕಕ್ಕೊಂದು ಬಾರಿ ನೀವು ಬರುವುದಾದರೆ ನಮಗೆ ತುಂಬ ಸಂತೋಷವಾಗುವುದು. ಇಲ್ಲಿಗೆ ಬಂದ ನಂತರ ನಿಮಗೆ ಬೇಕಿದ್ದರೆ ನೀವಿಲ್ಲಿಯೇ ಉಳಿಯಬಹುದು ಇಲ್ಲವೆ ಮತ್ತೆ ಭೂಲೋಕಕ್ಕೆ ಮರಳಬಹುದು. ಇತಿ ಆಶೀರ್ವಾದಗಳು.

ನಿಮ್ಮ ಪೂರ್ವಜರು"

ಪ್ರತಾಪನು ಅರಮನೆಯಿಂದ ಬಂದೊಡನೆಯೆ ಇಂದ್ರಕುಮಾರಿ, "ಸ್ವಾಮಿ, ಅರಸನಿಗೆ ಹಾಗೂ ಅವನ ಸಂಗಡಿಗರಿಗೆ ತಕ್ಕ ಪಾಠ ಕಲಿಸಲು ನಾನಾಗಲೇ ಒಂದು ಯೋಜನೆ ಸಿದ್ಧಪಡಿಸಿದ್ದೇನೆ. ಈ ಮೊದಲು ಅರಸನು ನಿಮಗೆ ವಹಿಸಿಕೊಟ್ಟ ಕಾರ್ಯಗಳ ಹಿಂದೆ ಅವನ ದುರಾಸೆಯೇ ಅಡಗಿತ್ತೆಂಬುದು ನನಗೀಗ ಪೂರ್ಣ ತಿಳಿದಿದೆ. ಆಗ ಸಫಲನಾಗದಿದ್ದುದರಿಂದ ಈ ಸಲ ಹೇಗಾದರೂ ಮಾಡಿ ನಿಮ್ಮನ್ನು ಯಮಸದನಕ್ಕಟ್ಟಿಯೇ ತೀರುವುದೆಂದು ಅವನು ಹೊಂಚು ಹಾಕಿದ್ದಾನೆ. ನಿಮ್ಮ ಸತಿಯರಾದ ನಾವು ಮೂವರ ಮೇಲೆ ಅವನ ಕಣ್ಣಿದೆಯೆಂಬುದು ಸ್ಪಷ್ಟವಿದೆ. ಈಗ ನೀವು ಏಳು ದಿನಗಳವರೆಗೆ ಎಲ್ಲಿಯೂ ಹೋಗದೆ ಮನೆಯಲ್ಲಿಯೇ ಇದ್ದುಬಿಡಿ. ಎಂಟನೆಯ ದಿನ ಸಂಜೆಗೆ ಸಿದ್ಧವಾಗಿರುವ ಅಗ್ನಿಕುಂಡಕ್ಕೆ ಹೋಗಿರಿ. ನಾನು ಕೊಡುವ ಪತ್ರವೊಂದನ್ನು ಅಗ್ನಿಯಲ್ಲಿ ಹಾಕಿದರೆ ತಕ್ಷಣ ಅಗ್ನಿದೇವನು ಪ್ರತ್ಯಕ್ಷನಾಗುವನು. ಆಗ ಅಗ್ನಿಗೆಷ್ಟೂ ಭಯಪಡದೆಯೆ ಅದರಲ್ಲಿ ಹಾರಿ ಬಿಟ್ಟು ನೀವು ಮುಂದೇನಾಗುವುದೆಂದು ದಾರಿಕಾಯಿರಿ," ಎಂದು ಹೇಳಿದಳು.

ಎಂಟನೆಯ ದಿನ ಸಂಜೆ ಮೊದಲು ನಿರ್ಧರಿಸಿದಂತೆಯೆ ಜಗತಾಲಪ್ರತಾಪ ಅಗ್ನಿಕುಂಡಕ್ಕೆ ಹೊರಟು ನಿಂತಾಗ ಅವನ ಹತ್ತಿರ ಎರಡು ಪತ್ರಗಳಿದ್ದವು. ಮೊದಲಿನದು ಅರಸ ಮುಂತಾದವರ ಪೂರ್ವಜರು ಬರೆದಂತಿದ್ದು ಅದನ್ನು ಆವನು ತನ್ನ ನಿಲುವಂಗಿಯ ಒಳಜೇಬಿನಲ್ಲಿರಿಸಿಕೊಂಡಿದ್ದ ಎರಡನೆಯದು ಇಂದ್ರಕುಮಾರಿಯು ಅಗ್ನಿದೇವನಿಗೆ ಬರೆದ ಪತ್ರವಾಗಿತ್ತು. ಅದರಲ್ಲಿ ಪ್ರತಾಪನು ತನ್ನ ಪತಿಮಾತ್ರವಲ್ಲದೆ ನಾಗರಾಜ ಹಾಗೂ ವರುಣದೇವನ ಅಳಿಯನೂ ಆಗಿದ್ದಾನೆಂದು ಬರೆದು ಅಗ್ನಿದೇವನೂ ತನ್ನೊಬ್ಬ ಮಗಳನ್ನು ಅವನಿಗೆ ಧಾರೆಯೆರೆದು ಕೊಡಬೇಕೆಂದೂ, ಅವಳ ಕ್ಷೇಮದ ವಿಚಾರ ತನ್ನನ್ನು ಕೂಡಿದೆ ಎಂದೂ ತಿಳಿಸಿದ್ದಳು. ಅಲ್ಲದೆ ಪ್ರತಾಪನನ್ನು ಯೋಗ್ಯ ರೀತಿಯಲ್ಲಿ ಸತ್ಕರಿಸಿ ನಂತರ ಅಗ್ನಿಕುಂಡದೆದುರು ನೆರೆದ ಜನರೆಲ್ಲರ ಎದುರಿನಲ್ಲಿಯೇ ಆವನನ್ನು ಕುಂಡದಿಂದ ಹೊರತಂದು ಬಿಡಬೇಕೆಂದೂ ಬಿನ್ನವಿಸಿದ್ದಳು.

ಅಗ್ನಿಕುಂಡವನ್ನು ನಿರ್ಮಿಸಿದ ಬಯಲಿಗೆ ಪ್ರತಾಪನು ಹೋದಾಗ ಅಲ್ಲಿ ದೊಡ್ಡ ಜನಸಂದ

ಣಯೇ ನೆರೆದಿತ್ತು. ಅವರೆದುರಿನಲ್ಲಿಯೇ ಅವನು ಅಗ್ನಿಯಲ್ಲಿ ತಾನು ತಂದ ಪತ್ರವನ್ನು ಚೆಲ್ಲಿ ಎಲ್ಲರೂ ನೋಡುತ್ತಿರುವಂತೆಯೆ ತಾನೂ ಕುಂಡದಲ್ಲಿ ಹಾರಿಬಿಟ್ಟ. ಮುಂದೇನಾಗುವುದೋ ಎಂದು ಎದುರುನೋಡಲಾರಂಭಿಸಿದ.

ಇಂದ್ರಕುಮಾರಿಯು ಹೇಳಿದಂತೆಯೇ ಅಗ್ನಿದೇವನು ಅತ್ಯಾದರಪೂರ್ವಕವಾಗಿ ಪ್ರತಾಪನನ್ನು ಬರಮಾಡಿಕೊಂಡು ಅಂದೇ ರಾತ್ರಿ ತನ್ನ ಪುತ್ರಿಯರಲ್ಲಿಯೇ ಅತ್ಯಂತ ರೂಪವತಿಯಾದವಳನ್ನು ಅವನಿಗಿತ್ತು ವಿವಾಹವನ್ನು ನೆರವೇರಿಸಿದ.

ಅದೇ ದಿನ ಮಧ್ಯರಾತ್ರಿಯ ನಂತರ ಅಗ್ನಿಕುಂಡದ ಹತ್ತಿರ ನೆರೆದ ಜನರೆಲ್ಲ ತಮ್ಮ ತಮ್ಮ ಮನೆಗಳಿಗೆ ಹೋಗಿದ್ದಾಗ ಪ್ರತಾಪನು ತನ್ನ ನೂತನ ಪತ್ನಿಯೊಂದಿಗೆ ಹೊರಬಂದು, ಮನೆಗೆ ಹೋಗಿ ತನ್ನ ಮೊದಲಿನ ಮೂವರು ಪತ್ನಿಯರಿಗೆ ಅವಳನ್ನೊಪ್ಪಿಸಿ ಮತ್ತೆ ಅಗ್ನಿ ಪ್ರವೇಶ ಮಾಡಿದ. ಆಗಲೂ ಅದರ ಶಾಖ ಅವನಿಗೆಷ್ಟೂ ತಾಗಲಿಲ್ಲ.

ಅರಸ ಹಾಗೂ ಮಂತ್ರಿಗಳಿಗೆ ಪ್ರತಾಪನಿನ್ನು ಮರಳಿಬಾರನೆಂದು ಖಚಿತವೆನಿಸಿಬಿಟ್ಟಿತ್ತು. ಆದರೂ ತಮ್ಮ ಎಣಿಕೆ ತಪ್ಪಾಗಬಾರದೆಂದು ಮರುದಿನ ಇನ್ನೊಮ್ಮೆ ಅಗ್ನಿಕುಂಡಕ್ಕೆ ಸಮಕ್ಷಮ ಹೋಗಿಬರಬೇಕೆಂದು ಅವರು ನಿರ್ಧರಿಸಿದರು. ಮರುದಿನ ನಡುಮಧ್ಯಾಹ್ನದ ಹೊತ್ತಿಗೆ ಅರಸು ಮಂತ್ರಿಗಳನ್ನೊಳಗೊಂಡು ಸಾವಿರಾರು ಜನರು ಮುಂದೇನಾಗುವುದೆಂಬ ಕುತೂಹಲದಿಂದ ಅಗ್ನಿಕುಂಡದ ಹತ್ತಿರ ನೆರೆದಿದ್ದರು. ಎಲ್ಲರೂ ನೋಡುತ್ತಿದ್ದಂತೆಯೆ ಒಮ್ಮಿಂದೊಮ್ಮೆಲೆ ಅಗ್ನಿಕುಂಡದಲ್ಲಿಯ ಜ್ವಾಲೆಗಳು ಆಕಾಶವನ್ನೇ ಮುತ್ತುವೋಪಾದಿಯಲ್ಲಿ ಮೇಲೆದ್ದವು. ಸೂರ್ಯಪ್ರಕಾಶದಂತೆ ಹೊಳೆಯುತ್ತಿದ್ದ ಜಗತಾಲ ಪ್ರತಾಪ ಅದರೊಳಗಿಂದ ಹೊರಬಂದ ನಂತರ ಅಗ್ನಿ ಮತ್ತೆ ಶಾಂತವಾಯಿತು.

ಎಲ್ಲರೂ ಚಕಿತರಾಗಿ ನೋಡುತ್ತಿದ್ದಂತೆಯೆ ಪ್ರತಾಪನು ಕೈಯಲ್ಲಿ ಪತ್ರವೊಂದನ್ನು ಹಿಡಿದುಕೊಂಡು ಅರಸನೆಡೆಗೆ ನಡೆದನು.

ಆಗಲೇ ಅಪ್ರತಿಭನಾಗಿದ್ದ ಅರಸ ಪ್ರತಾಪನಿತ್ತ ಪತ್ರವನ್ನು ಕೂಡಲೇ ಬಿಚ್ಚಿ ಓದಿ ಮಂತ್ರಿ ಹಾಗೂ ದಂಡನಾಯಕರಿಗಿತ್ತ. ಅವರೆಲ್ಲರ ಮುಖದ ಮೇಲೂ ಪಶ್ಚಾತ್ತಾಪ ತಾನೇತಾನಾಗಿ ಮೆರೆಯುತ್ತಿತ್ತು. ಅವರು ತಮ್ಮ ತಮ್ಮೊಳಗೆಯೆ ಮಾತನಾಡಿಕೊಂಡು ನಂತರ ಅವರು ಪ್ರತಾಪನನ್ನು ಹತ್ತಿರ ಕರೆದು ತಮ್ಮ ತಪ್ಪಿಗಾಗಿ ಕ್ಷಮಾಯಾಚನೆ ಮಾಡಿದ್ದಲ್ಲದೆ ತಮ್ಮ ಪೂರ್ವಜರಿರು

## ಸುಖದಾಂಪತ್ಯ

ಬದುಕಿನಲ್ಲಿ
ಏನೇ ತೊಂದರೆಗಳು
ಎದುರಾದರೂ
ಬದುಕಬಲ್ಲೆವು
ನಾವಿಬ್ಬರೂ;
ಅದಕ್ಕೆ ಕಾರಣ
ಬದುಕ ಬಲ್ಲೆವು
ನಾವಿಬ್ಬರೂ!

• ಸಂಜೀವ ಹಲವಾಯಿ



ವಲ್ಲಿಗೆ ತಮ್ಮನ್ನು ಕರೆದೊಯ್ಯಬೇಕೆಂದು ಬೇಡಿಕೊಂಡರು. ಆಗ ಪ್ರತಾಪನು ಮರುದಿನ ಸಂಜೆಗೆ ಅಗ್ನಿಪ್ರವೇಶದ ಮೂಲಕ ಅವರನ್ನಲ್ಲಿ ಕರೆದೊಯ್ಯುವುದಾಗಿ ಆಶ್ವಾಸನವಿತ್ತು ಮನೆಗೆ ಮರಳಿ ಪತ್ನಿಯರಿಗೆ ನಡೆದುದನ್ನೆಲ್ಲವನ್ನೂ ಹೇಳಿದ.

ತನ್ನ ಯೋಜನೆಯಂತೆಯೆ ಎಲ್ಲವೂ ನಡೆಯುತ್ತಿರುವುದನ್ನು ಕಂಡು ಇಂದ್ರಕುಮಾರಿ ಸಂತಸಗೊಂಡಳು. ಅಲ್ಲದೆ ಮರುಸಂಜೆ ಅಗ್ನಿಕುಂಡಕ್ಕೆ ತೆರಳುವಾಗ ಪ್ರತಾಪನ ಕೈಗೆ ಅಗ್ನಿದೇವನಿಗೆ ಬರೆದ ಇನ್ನೊಂದು ಪತ್ರವನ್ನಿತ್ತಳು. ಅದರಲ್ಲಿ ಪ್ರತಾಪನೊಬ್ಬನನ್ನು ಳಿದು ಅಗ್ನಿ ಪ್ರವೇಶಿಸಿದ ಇತರ ಮೂವರನ್ನೂ ಭಸ್ಮವಾಗಿಸಿಬಿಡಬೇಕೆಂದು ಬಿನ್ನವಿಸಿದ್ದಳು.

ಪ್ರತಾಪನು ಅಗ್ನಿಕುಂಡಕ್ಕೆ ಬರುವುದರೊಳಗಾಗಿ ಉಳಿದವರು ಅವನಿಗಾಗಿ ಅಲ್ಲಿ ದಾರಿಕಾಯುತ್ತಿದ್ದರು. ತಮ್ಮ ಪೂರ್ವಜರನ್ನು ಕಾಣಬೇಕೆಂಬ ಆತುರ ಅವರ ಮುಖದ ಮೇಲೆ ಸ್ಪಷ್ಟವಾಗಿ ಕಾಣುತ್ತಿತ್ತು. ಅವನು ಆ ಮೂವರಿಗೂ ತನ್ನ ಹಿಂದೆಯೆ ಅಗ್ನಿಕುಂಡ ಪ್ರವೇಶಿಸಲು ಹೇಳಿ ಅವನು ಮೊದಲು ಪತ್ರವನ್ನು ಅಗ್ನಿಯಲ್ಲಿ ಹಾಕಿ ತಾನೂ ಹಾರಿದ.

ಅಂತೆಯೆ ಅಗ್ನಿದೇವ ತನ್ನ ಅಳಿಯನನ್ನು ಗುರುತಿಸಿ ಅವನನ್ನುಳಿದು ಇತರ ಮೂವರನ್ನು ಸುಟ್ಟುಬಿಟ್ಟ.

ಅನಂತರ ಪ್ರತಾಪನೊಬ್ಬನೇ ಅಗ್ನಿಯಿಂದ ಎಲ್ಲರ ಸಮ್ಮುಖದಲ್ಲಿಯೇ ಹೊರಬಂದು ನೆರೆದ ಜನರಿಗೆ ಅರಸ ಮತ್ತು ಅವನ ಮಂತ್ರಿ, ದಂಡನಾಯಕರ ದುಷ್ಟಕೃತ್ಯಗಳನ್ನು ವಿವರಿಸಿ ಹೇಳಿದ. "ಅದಕ್ಕಾಗಿಯೇ ಅವರಿಗೆ ಯೋಗ್ಯ ಶಿಕ್ಷೆಯನ್ನೇ ನಾನೀಗ ವಿಧಿಸಿದ್ದೇನೆ," ಎಂದು ಸಾರಿದ.

ಆಗ ಜನಸ್ತೋಮ ಪ್ರತಾಪನ ಜಯಜಯಕಾರ ಮಾಡಿ ಅವನೇ ತಮ್ಮ ನಾಡಿಗೆ ಅರಸನಾಗಬೇಕೆಂದು ಆಗ್ರಹಪಡಿಸಲಾರಂಭಿಸಿತು. ಆದರೆ

**ಪ್ರತಿಬಿಂಬ**

ಕನ್ನಡಿ ಒಡಿಯಿತೆಂಬ
ಬೇಸರವೇಕೆ ನಲ್ಲಾ,
ನನ್ನ ಕಣ್ ಕನ್ನಡಿಯಲ್ಲಿ
ನೋಡಿದರೆ,
ಪ್ರತಿಬಿಂಬ ನಿನ್ನದೇ
ಕಾಣುವೆಯಲ್ಲಾ!

✹ ಪ್ರೇಮಾ ಗೋರೋಜನ

ಅದಕ್ಕವನು ಒಪ್ಪಲಿಲ್ಲ. ಅನಂತರ ಅರಮನೆಯ ಸೇವೆಯಲ್ಲಿ ಪ್ರತಾಪನ ಸಹಕಾರಿಯಾಗಿದ್ದ ಇನ್ನೊಬ್ಬನನ್ನು ಅರಸನೆಂದು ಒಪ್ಪಲು ಅವರು ಸಿದ್ಧರಾದರು. ಪ್ರತಾಪನು ಸ್ವತಃ ಅವನನ್ನು ಸಿಂಹಾಸನಾರೋಹಣ ಮಾಡಿಸಿ, ಆಮೇಲೆ ಜನತೆಯನ್ನೆಲ್ಲ ಬೀಳ್ಕೊಂಡು ತನ್ನ ನಾಲ್ವರೂ ಹೆಂಡಂದಿರೊಂದಿಗೆ ಅಲ್ಲಿಂದ ಹೊರಟ.

ಅವರೈವರೂ ಪ್ರವಾಸ ಮಾಡುತ್ತಿದ್ದಂತೆಯೆ ಮರುಭೂಮಿಯೊಂದನ್ನು ಪ್ರವೇಶಿಸಿದರು. ಆಗ ಇಂದ್ರಕುಮಾರಿಯು ನಸುನಗುತ್ತಿರುವುದನ್ನು ಕಂಡು ಪ್ರತಾಪ ಅದೇಕೆಂದು ವಿಚಾರಿಸಿದ. "ಮಹಾರಾಜ, ನಾನೇಕೆ ನಗುತ್ತಿದ್ದೇನೆಂಬುದು ನಿಮಗೆ ಅರ್ಥವಾಗಲಿಲ್ಲವೇನೋ. ಈ ಮರುಭೂಮಿಯನ್ನು ಕಂಡೊಡನೆಯೆ ನನ್ನ ಮನಸ್ಸಿನಲ್ಲಿ ಅದೇಕೋ ವಿಚಾರವೊಂದು ಸುಳಿದು ಹೋಯಿತು. ನಾನು ಮನಸ್ಸು ಮಾಡಿದರೆ ಈ ಉಸುಕಿನ ಅರಣ್ಯವನ್ನು ನನ್ನ ತಂದೆಯ ನಗರಕ್ಕಿಂತಲೂ ಹೆಚ್ಚು ಸುಂದರ ನಗರವಾಗಿ ಪರಿವರ್ತಿಸಬಲ್ಲೆ," ಎಂದಳು.

"ಓ! ಅದು ನನಗೆ ಗೊತ್ತು. ನಿಜ ಹೇಳುವುದಾದರೆ ನೀನು ಜಗನ್ಮಾತೆಯೇ ಸರಿ. ನಾನು ನಿನ್ನ ಪತಿಯಾದುದು ಒಂದು ವಿಚಿತ್ರ ಆಕಸ್ಮಿಕವೇ ಸರಿ. ಅದೆಂತು ಆಯಿತೊ ನನಗೇ ಆಶ್ಚರ್ಯವಾಗುತ್ತಿದೆ!" ಎಂದು ಪ್ರತಾಪ ಉತ್ತ

ರಿಸಿದ.

“ಅದೇಕೋ ನನ್ನ ಮಾತಿನಲ್ಲಿ ನಿಮಗಿನ್ನೂ ವಿಶ್ವಾಸವಿದ್ದಂತಿಲ್ಲ."

“ಹಾಗೆ ಮಾತ್ರ ಭಾವಿಸಬೇಡ. ನಿನ್ನಲ್ಲಿ ನನಗೆ ಸಂಪೂರ್ಣ ವಿಶ್ವಾಸವಿದೆಯೆಂದೇ ನಾನು ಇದುವರೆಗೂ ಬದುಕಿ ಉಳಿದಿದ್ದೇನೆ."

“ಆದರೂ ನನ್ನ ಶಕ್ತಿಯನ್ನು ಪ್ರದರ್ಶಿಸಿಬಿಡುವ ಇಚ್ಛೆ ನನಗಾಗಿದೆ, ನೋಡುತ್ತಿರಿ," ಎಂದಳು ಆಕೆ.

ಮರುಕ್ಷಣದಲ್ಲಿಯೆ ಮರುಭೂಮಿ ನಂದನವನವಾಗಿ ಮೆರೆಯತೊಡಗಿತು. ಇಂದ್ರ ನಗರಿಯನ್ನೂ ನಾಚುವಂತಹ ನಗರ ಎದ್ದು ನಿಂತಿತು.

ಇಂದ್ರಕುಮಾರಿ ಪ್ರತಾಪನನ್ನು ನಗರದ ರಾಜನಾಗಿ ಮಾಡಿ ಪಟ್ಟಾಭಿಷೇಕ ನೆರವೇರಿಸಿದಳು. ನಾಗಕನ್ಯೆಯೂ ನಗರದ ತುಂಬೆಲ್ಲ ಉಪನಗರಗಳನ್ನು ನಿರ್ಮಿಸಿದಳು. ವರುಣಕುಮಾರಿಯು ನಗರದಲ್ಲಿ ಮನಮೋಹಕ ಸರೋವರನ್ನು ರಚಿಸಿದಳು. ಅಗ್ನಿಕನ್ಯೆಯು ನಗರದಲ್ಲಿ ಚತುರಂಗ ಬಲವನ್ನು ರೂಪಿಸಿದಳು.

ಕೆಲ ದಿನಗಳಲ್ಲಿಯೇ ಜಗತಾಲಪ್ರತಾಪನು ಸಾರ್ವಭೌಮನೆಂದು ಸಾವಿರಾರು ರಾಜರಿಂದ ಪರಿಗ್ರಹಿಸಲ್ಪಟ್ಟ; ಅವನ ಮನೆ ಸಂತಸದ ಸಾಗರವಾಯಿತು.

**(ಮುಂದುವರಿಯುವುದು)**



# ಬಯಲು ಕಂಡಲ್ಲಿ ಬಾವುಟ ನೆಟ್ಟವರು.....

**ಸು. ಕೃಷ್ಣ**

ಅಂದು ಶುಕ್ರವಾರ. ೧೪೯೨ರ ಅಕ್ಟೋಬರ್ ಹನ್ನೆರಡನೆಯ ದಿನಾಂಕ. ಎಂದಿನಂತೆ "ಗ್ವಾನಹಾನಿ" ನಡುಗಡ್ಡೆಯಲ್ಲಿ ಅರುಣೋದಯವಾಯಿತು. ಆದರೆ ಅದು ಪಶ್ಚಿಮಾರ್ಧ ಗೋಲದಲ್ಲಿ ಮುಂದಿನ ದಿನಗಳಲ್ಲಿ ನಡೆಯಲಿದ್ದ ಮಹಾ ನರಮೇಧದ ರಕ್ತದೋಕುಳಿಯ ಸಂಕೇತವಾದುದನ್ನು ಯಾರೂ ಊಹಿಸಿದ್ದಿಲ್ಲ ಕೂಡ. ಸಂಸ್ಕೃತಿ, ನಾಗರಿಕತೆಯ ಹೆಗ್ಗಳಿಕೆಯನ್ನು ಹೊತ್ತ ನಾಗರಿಕರಿಂದ ಅಬೋಧರಾದ, ನಿರಾಯುಧರಾದ "ಅನಾಗರಿಕ" ಜನಾಂಗಗಳ ಮೇಲೆ ಸುಧಾರಣೆಯ ಹೆಸರಿನಲ್ಲಿ ಸಾಮೂಹಿಕ ಕಗ್ಗೊಲೆಗೆ ನಾಂದಿಯಾಯಿತು. ಇದೆಲ್ಲಾ ಆ ಮುಂದಿನ ಎರಡು-ಮೂರೇ ಶತಮಾನಗಳ ಮಾತು.

ಅದರ ಹಿಂದಿನ ರಾತ್ರಿ ದ್ವೀಪದ ತೀರದಿಂದ ಎರಡು ಹರದಾರಿ ದೂರಕ್ಕೆ ಮೂರು ನೌಕೆಗಳು ಬಂದು ನಿಂತಿದ್ದವು. ತಿಂಗಳುಗಟ್ಟಲೆ ಸಮುದ್ರಯಾನದ ನಂತರ ನಟ್ಟಿರುಳು ಕಳೆದ ಸ್ವಲ್ಪ ಹೊತ್ತಿಗೆ ಹಡಗಿನ ಕೂವೆ ಮರವನ್ನೇರಿ ಕುಳಿತಿದ್ದ ಕಾವಲುಗಾರನಿಗೆ ದೂರದ ದಿಗಂತದಲ್ಲಿ ಕರಿಯ ಮೋಡ ಹೆಪ್ಪುಗಟ್ಟಿದಂತೆ ಈ ದ್ವೀಪ ಕಾಣಿಸಿತ್ತು. ಒಡನೆಯೇ ಕ್ಯಾಪ್ಟನ್ನನ ಆಜ್ಞೆಯಂತೆ ಮುಖ್ಯವಾದ ಹಾಯಿಪಟವೊಂದನ್ನು ಬಿಟ್ಟು ಉಳಿದೆಲ್ಲ ಪಟಗಳನ್ನೂ ಸುತ್ತಿ ಕೆಳಗೆ ಇಳಿಸಿದರು. ಈಗ ನೌಕೆಗಳು ಮಂದ್ರವಾದ ಅಲೆಗಳ ಮೇಲೆ ತುಯ್ದಾಡುತ್ತಾ ಮೆಲುಗತಿಯಲ್ಲಿ ಈ ಅಜ್ಞಾತ ದ್ವೀಪದತ್ತ ತೇಲುತ್ತಿದ್ದವು. ಕ್ಯಾಪ್ಟನ್ ಹಾಗೂ ನಾವಿಕರೆಲ್ಲರೂ ನಸುಕು ಹರಿಯುವುದನ್ನೇ ಕಾಯುತ್ತಿದ್ದರು.

ಶುಕ್ರವಾರ ಸೂರ್ಯೋದಯವಾಗುತ್ತಿರುವಂತೆಯೇ ಹಡಗುಗಳು ತೀರದ ಸನಿಹಕ್ಕೆ ಬಂದು ಸೇರಿದ್ದವು. ಹಡಗಿನವರು ತೀರದತ್ತ ಕಣ್ಣುಹಾಯಿಸಿ ನೋಡಿದರು. ಅಲ್ಲಲ್ಲಿ ಕೆಲವಾರು ಬೆತ್ತಲೆ ಜನ ಬಿಟ್ಟ ಬಾಯಿ ಬಿಟ್ಟುಕೊಂಡು ನೀರಿನಿಂದ ಒಮ್ಮೆಗೇ ಪ್ರತ್ಯಕ್ಷವಾದ ನೌಕೆಗಳನ್ನು ಬೆರಗುಗಣ್ಣಿಂದ ನೋಡುತ್ತಿದ್ದರು. ತಕ್ಷಣವೇ ಅಡ್ಮಿರಲ್ ಕೊಲಂಬಸ್ ಸಾಯುಧನಾಗಿ ಒಂದು ದೋಣಿಯೇರಿ ಕುಳಿತ. ಅವನೊಂದಿಗೆ ಅವನ ಆಪ್ತರಾದ ಮಾರ್ಟಿನ್ ಪಿಂಜಾನ್ ಹಾಗೂ ಜತೆಯ "ನೀನಾ" ನೌಕೆಯ ಕ್ಯಾಪ್ಟನ್ ಆಗಿದ್ದ ಸೋದರ ವಿಸೆಂಟ್ ಯೂನೇಜ್ ಬಂದು ಸೇರಿದರು, ಅಡ್ಮಿರಲ್ ತನ್ನ ಕೈಯಲ್ಲಿ ಸ್ಪೇನ್ ಚಕ್ರವರ್ತಿಯ ಧ್ವಜವನ್ನು ಹಿಡಿದಿದ್ದ. ಅವನ ಕ್ಯಾಪ್ಟನ್ನರು ಹಸಿರು ಶಿಲುಬೆಯ ಗುರುತಿನ ಎರಡು ಬಾವುಟಗಳನ್ನು ತಂದಿದ್ದರು. ದೋಣಿ ನೆಲವನ್ನು ಮುಟ್ಟುತ್ತಲೇ ಅವರೆಲ್ಲರೂ ಆ ದಟ್ಟವಾದ ಹಸಿರು ಗಿಡಮರಗಳ ನಡುವಿನ ಸಪೂರ ತೀರದಲ್ಲಿ ಕಾಲಿಟ್ಟರು. ಆ ಬೆತ್ತಲೆ ನಿವಾಸಿಗಳು ಬೆಕ್ಕಸಬೆರಗಾಗಿ ನೋಡುತ್ತಿರುವಂತೆಯೇ ಅಡ್ಮಿರಲ್ ಕೊಲಂಬಸ್ ತನ್ನ ಕಡೆಯವರನ್ನುದ್ದೇಶಿಸಿ ಎತ್ತರದ ದನಿಯಲ್ಲಿ ಘೋಷಿಸಿದ: "ನನ್ನ ಈ ಸಾಧನೆಗೆ ನೀವೆಲ್ಲರೂ ಪ್ರತ್ಯಕ್ಷದರ್ಶಿಗಳಾಗಿದ್ದೀರಿ. ಇದೀಗ ಈ ದ್ವೀಪ, ಈ ಭೂಭಾಗ ಹಾಗೂ ಇಲ್ಲಿನ ಸಮಸ್ತ ಪ್ರಜಾವರ್ಗದವರನ್ನೂ ನಮ್ಮ ಪ್ರಭುಗಳಾದ ಸ್ಪೇನ್

ರಾಜ ರಾಣಿಯರ ಹೆಸರಿನಲ್ಲಿ ಕೈವಶ ಮಾಡಿಕೊಂಡಿದ್ದೇನೆ. ಇದಕ್ಕೆ ನೀವೇ ಸಾಕ್ಷಿಗಳು."ಹೀಗೆ ಸ್ಪೇನ್ ಚಕ್ರವರ್ತಿಯ ಮುಕುಟದಲ್ಲಿ ಒಂದು ಅನರ್ಘ್ಯ ರತ್ನವನ್ನು ಕೊಲಂಬಸ್ ಸೇರಿಸಿದ. 'ಗ್ವಾನಹಾನಿ' ದ್ವೀಪಕ್ಕೆ "ಸಾನ್ ಸಾಲ್ವಡಾರ್" ಎಂಬ ಹೆಸರಿಟ್ಟು, ಅಲ್ಲಿನ ಜನರನ್ನು ಇಂಡಿಯನ್ನರೆಂದು ಭಾವಿಸಿ ಕರೆದು, ಇತಿಹಾಸದಲ್ಲಿ ಹೊಸ ಅಧ್ಯಾಯವನ್ನು ಆರಂಭಿಸಿದ.

ಕೊಲಂಬಸ್ ಸ್ವತಃ ಬರೆದಿದ್ದ ಹಡಗಿನ ದಿನಚರಿ ಈಗ ಲಭ್ಯವಿಲ್ಲ. ಆದರೂ ಅದನ್ನು ಓದಿ ತಿಳಿದಿದ್ದ ಬಾರ್ಥಲೋಮೆ ಡಿ ಲಾ ಕಾಸಾಸ್ ಅದರ ಸಾರಾಂಶವನ್ನು ತನ್ನ "ಇಂಡೀಸ್ ಚರಿತ್ರೆ"ಯಲ್ಲಿ ಉಲ್ಲೇಖಿಸಿದ್ದಾನೆ. ಇದರಿಂದ ನಮಗೆ ಕೊಲಂಬಸ್‌ನ ಆಗಿನ ಪ್ರತಿಕ್ರಿಯೆ ಮತ್ತು ವಿಚಾರಗಳು ತಿಳಿದುಬರುತ್ತವೆ. ಅವನ ವಿಚಾರಗಳೇ ಮುಂದಿನ ಸಾಹಸಿ ಪರ್ಯಟಕರಿಗೂ ಮಾರ್ಗದರ್ಶಿ ಸೂತ್ರಗಳಂತಿದ್ದವು. ಅಂತೆಯೇ ಅವನ ಯೋಚನಾಲಹರಿ ಹಾಗೂ ಕಾರ್ಯವೈಖರಿ ಪ್ರಸ್ತುತವಾಗಿವೆ.

ಈ ಜನರೆಲ್ಲರೂ ಮುಗ್ಧರು, ಅಸಹಾಯರು. ನಮ್ಮ ಪವಿತ್ರವಾದ ಧರ್ಮಕ್ಕೆ ಇವರನ್ನು ಸೇರಿಸಿಕೊಂಡು ಇವರಿಗೆಲ್ಲಾ ಸದ್ಗತಿ ತೋರಿಸಬೇಕು. ಇವರನ್ನು ಪ್ರೀತಿಯಿಂದ, ಆಸೆ ತೋರಿಸಿ ಮತಾಂತರಗೊಳಿಸುವುದು ಒಳ್ಳೆಯದು. ಬಲಾತ್ಕಾರ ಮಾಡಿಯಲ್ಲ ಎಂದಾತ ಯೋಚಿಸಿದ.

ಅವನು ಅಲ್ಲಿ ನೆರೆದಿದ್ದ ದ್ವೀಪವಾಸಿಗಳಿಗೆಲ್ಲ ಕೆಂಪು ಟೊಪ್ಪಿಗೆ, ಗಾಜಿನ ಮಣಿ ಇತ್ಯಾದಿ ಹಂಚಿದ. ಅವರಿಗೆಲ್ಲ ತುಂಬಾ ಸಂತೋಷವಾಯಿತು. ನನಗೆ, ತನಗೆ ಎಂದು ಕೈಚಾಚಿ ಅವನ್ನು ಪಡೆದುಕೊಂಡರು. ಕುತ್ತಿಗೆಗೆ ಗಾಜಿನಮಣಿ ಸರವನ್ನು ಹಾಕಿಕೊಂಡು ಕುಣಿದಾಡಿದರು. ಕೊಲಂಬಸ್‌ನ ದೋಣಿಯ ಸುತ್ತಲೂ ಈಜಾಡಿದರು. ತಾವು ತಂದಿದ್ದ ಗಿಳಿ ಜಾತಿಯ ಹಕ್ಕಿಗಳನ್ನು, ಮೀನಿನ ಮೂಳೆಯ ತುದಿಯ ಸಪುರವಾದ ಈಟಿಗಳನ್ನು, ದಾರದ ಎಳೆಗಳನ್ನು ತಮ್ಮ ಬಳುವಳಿಯಾಗಿ ಒಪ್ಪಿಸಿದರು. ಅದನ್ನು ನೋಡಿ ಕೊಲಂಬಸ್‌ನಿಗೆ ತುಂಬಾ ನಿರಾಸೆಯಾಯಿತು. ಎಂಥಾ ನಿರ್ಗತಿಕರಿವರು! ಎಂದುಕೊಂಡ. ಯಾರಿಗೂ ಮೈ ಮುಚ್ಚಿಕೊಳ್ಳುವ ಪರಿಜ್ಞಾನವೂ ಇಲ್ಲ, ಶಕ್ತಿಯೂ ಇಲ್ಲ. ಅವರಲ್ಲಿ ಒಬ್ಬೊಬ್ಬರೂ ಒಂದೊಂದು ಬಗೆಯಾಗಿ ಮುಖಕ್ಕೆ, ಮೂಗಿಗೆ, ಮೈಗೆ ಬಿಳಿ, ಕೆಂಪು, ಕಪ್ಪು ಹೀಗೆ ಹೇಗೆ ಬೇಕೋ ಹಾಗೆ ಬಣ್ಣ ಬಳಿದಿಕೊಂಡಿದ್ದರು. ರೌದ್ರಾಕಾರವಾಗಿ ಕಂಡರೂ ಅವರ ಮಾತು, ನಡೆನುಡಿ ತುಂಬಾ ಸೌಮ್ಯ. ಅವರ ಆರೋಗ್ಯವಂತ ಶರೀರ, ಸದೃಢವಾದ ಮೈಕಟ್ಟು ಕೊಲಂಬಸ್‌ನ ಮನ ಸೆಳೆದವು. ಆದರೆ ಅವರ ಬುದ್ಧಿಮಟ್ಟ ಮಾತ್ರ ಶೂನ್ಯಕ್ಕೆ ಸಮ. ಅವರಿಗೆ ಕಬ್ಬಿಣ ಮತ್ತಿತರ ಲೋಹದ ಪರಿಚಯವೇ ಇರಲಿಲ್ಲ. ಕೊಲಂಬಸ್ ನೋಡನೋಡುತ್ತಿದ್ದಂತೆಯೇ ದ್ವೀಪವಾಸಿಯೊಬ್ಬ ನಾವಿಕನಿಂದ ಕತ್ತಿಯನ್ನು ತೆಗೆದುಕೊಂಡು ಸೋಜಿಗದಿಂದ ಪರೀಕ್ಷಿಸತೊಡಗಿದ. ಹರಿತವಾದ ಅಲುಗನ್ನು ತನ್ನ ಮುಷ್ಟಿಯಲ್ಲಿ ಹಿಡಿದುಕೊಂಡು ಬೀಸಿ ನೋಡಿದ. ಅವನ ಕೈಯಲ್ಲಿ ಆಳವಾದ ಗಾಯವಾಗಿ ರಕ್ತ ಹರಿದಾಗಲೇ ಅವನಿಗೆ ಜ್ಞಾನ ಮೂಡಿದ್ದು. ಆ ಜನರ ದಡ್ಡತನ, ಹುಂಬತನ ಮತ್ತು ದೇಹದಾರ್ಢ್ಯವನ್ನು ನೋಡಿ ಅವರೆಲ್ಲರನ್ನೂ ಕ್ರಿಸ್ತಧರ್ಮಕ್ಕೆ ಸೇರಿಸಿಕೊಂಡರೆ ಜೀತದಾಳುಗಳಾಗಿ ಮಾಡಿಕೊಳ್ಳಬಹುದು ಎಂದು ಕೊಲಂಬಸ್ ಒಂದು ತೀರ್ಮಾನಕ್ಕೆ ಬಂದ. ಹೀಗೆ ಅವರಲ್ಲಿ ಗಟ್ಟಿಮುಟ್ಟಾದ ಆರು ಜನರನ್ನು ತನ್ನ ಆಳುಗಳಾಗಿ ಆರಿಸಿಕೊಂಡ. ಆ ದ್ವೀಪದ ಬಣ್ಣಬಣ್ಣದ ಗಿಳಿಗಳನ್ನು ಜೊತೆಗೆ ತೆಗೆದುಕೊಂಡು ತನ್ನ ಚಕ್ರವರ್ತಿಗೆ ಒಪ್ಪಿಸಲೆಂದು ನಿರ್ಧರಿಸಿದ. ಕೊಲಂಬಸ್‌ನ ಸಾಗರಯಾನ ಒಂದು ಹೊಸ ಪ್ರಪಂಚವನ್ನೇ ಐರೋಪ್ಯರಿಗೆ ತೆರೆದಿರಿಸಿತು.

೨

ಕೊಲಂಬಸ್‌ನಂತೆಯೇ ಇತರ ಸಾಹಸಿಗಳೂ ಹೊಸ ಹೊಸ ದ್ವೀಪ, ಭೂಪ್ರದೇಶಗಳಿಗಾಗಿ ಶೋಧನೆ ನಡೆಸತೊಡಗಿದರು. ಅವರಿಗೆ ಒತ್ತಾಸೆಯಾಗಿ ಪಶ್ಚಿಮ ಯುರೋಪಿನ ಎಲ್ಲ

ರಾಜರಾಣಿಯರೂ ಸಹಾಯ, ಧನ, ಜನ ಬಲ ವನ್ನೊದಗಿಸಿದರು. ಸಾಗರಮಧ್ಯದಲ್ಲಿ ತಮ್ಮ ತಣಿಯದ ಭೂದಾಹಕ್ಕಾಗಿ ಆ ಸಾಹಸಿಗಳು ನೌಕೆ ನಡೆಸದ ಸಾಗರವಿಲ್ಲ, ಸಮುದ್ರವಿಲ್ಲ, ಜಲರಾಶಿಯಿಲ್ಲ. "ಸಿಕ್ಕಿದವನಿಗೆ ಸೀರುಂಡೆ" ಎಂಬ ಗಾದೆಯಿದೆಯಲ್ಲ, ನಮ್ಮಲ್ಲಿ? ಹಾಗೆಯೇ "ತಾವು ಕಣ್ಣಾರೆ ದೃಷ್ಟಿಸಿ ನೋಡಿದ ಭೂಭಾಗವೆಲ್ಲಾ ನಮ್ಮದು, ನಮ್ಮ ರಾಜನದು" ಎಂದು ಎಲ್ಲ ನಾವಿಕರೂ ಘೋಷಿಸಿಕೊಳ್ಳುವ ಪ್ರವೃತ್ತಿ, ದುಸ್ಸಾಹಸ ಬೆಳೆಯತೊಡಗಿತು. ಸ್ಪೇನ್, ಪೋರ್ಚುಗಲ್, ಇಟಲಿ, ಫ್ರಾನ್ಸ್, ಡೆನ್ಮಾರ್ಕ್ ದೇಶಗಳ ಹಾಗೂ ಇಂಗ್ಲಿಷ್ ನಾವಿಕರಲ್ಲಿ ಕಚ್ಚಾಟ, ಕಲಹ ಹೆಚ್ಚಾಯಿತು. ಆ "ನಾಗರಿಕ" ರಾಜ್ಯಗಳ ನಡುವೆ ಇದ್ದ ನೀತಿ ಮಾತ್ರ "ಬಲವಿದ್ದವರಿಗೇ ನ್ಯಾಯ" ಎಂಬ ಆರಣ್ಯ ನ್ಯಾಯ.

ಜೊತೆಗೆ ರೋಮನ್, ಕೆಥೋಲಿಕ್ ಮತ್ತು ಪ್ರಾಟೆಸ್ಟಂಟ್ ಎಂಬ ಧರ್ಮವಿರಸದ ಕಾರಣವೂ ಬಲವತ್ತರವಾಗಿತ್ತು. ಸ್ಪೇನ್ ಮತ್ತು ಪೋರ್ಚುಗಲ್ ರಾಜರುಗಳಿಬ್ಬರೂ ತಮ್ಮ ಧರ್ಮಗುರು ಪೋಪ್ ನೆಡೆಗೆ ತಮ್ಮ ಜಗಳವನ್ನು ಕೊಂಡೊಯ್ದರು. ಆವನಿಗಾದರೋ ಆವರಿಬ್ಬರೂ ಶಿಷ್ಯರೇ. ಹೀಗಾಗಿ ಆವನು ಒಂದು ಭೂಗೋಲವನ್ನು ತರಿಸಿ ಮೂರು ಮೂರು ಭಾಗವಾಗಿ ಕಠಾರಿಯಿಂದ ಗುರುತು ಮಾಡಿದ. ಗೊತ್ತಿದ್ದ ಭೂಭಾಗ ತನಗೆ, ಉಳಿದೆರಡು ಅಜ್ಞಾತ ಭಾಗಗಳಲ್ಲಿ ಒಂದೊಂದೂ ಸ್ಪೇನ್ ಮತ್ತು ಪೋರ್ಚುಗಲ್‌ಗೆ ಸೇರಬೇಕೆಂದು ತೀರ್ಪು ನೀಡಿದ. ಹೀಗೆ ರೋಂನಲ್ಲಿ ಅಧಿಕಾರ ಹಿಡಿದಿದ್ದ ಪೋಪ್ ತಾನು ಕಾಣದೇ ಇರುವ ಜಗತ್ತಿನ ಮೇಲೂ ತನ್ನ ಅಧಿಕಾರವನ್ನು ಸ್ಥಾಪಿಸಿದ. ಇನ್ನೇನು? ನ್ಯಾಯ-ನೀತಿ, ಕಾನೂನಿನ ಚಮತ್ಕಾರದ ಬಗ್ಗೆ ಯುರೋಪಿನ ಜನರಿಗೆ ಎಂದಿನಿಂದಲೂ ಆಳವಾದ ನಂಬಿಕೆಯಿದೆಯಲ್ಲ? ಸ್ಪೇನ್ ರಾಜನ ಆಸ್ಥಾನದಲ್ಲಿದ್ದ ಒಬ್ಬ ನ್ಯಾಯವಾದಿ ಕಾನೂನು ಪಂಡಿತ ಡಾಕ್ಟರ್

## ಹನಿಗವನ

*ಜೀವನ*
*ಸದಾ ಒಂದು*
*ಗಂಭೀರ ಕವನ*
*ಅಲ್ಲೊಂದು*
*ಇಲ್ಲೊಂದು*
*ಸ್ವಾರಸ್ಯದ ಕ್ಷಣಗಳೇ*
*ಹನಿಗವನಗಳು!*

✸ ಪ್ರೇಮಾ ಗೋರೋಜನ

ಪರಾಶಿಯೋಸ್ ರೂಬಿಯೋಸ್. ಆವನಿಗೆ ಸ್ಪೇನ್ ರಾಜ ಈ ಕೆಲಸವನ್ನು ಒಪ್ಪಿಸಿದ. ಸ್ಪೇನ್ ನಾವಿಕರು ಕಂಡುಹಿಡಿಯುವ ಯಾವುದೇ ಭೂಭಾಗ ಹಾಗೂ ಅಲ್ಲಿನಜನ, ಪ್ರಾಣಿ-ಪಕ್ಷಿ ಸಂಕುಲವೆಲ್ಲವೂ ಸ್ಪೇನ್ ರಾಜನಿಗೇ ಅಧೀನರಾಗಿರುವರು ಎಂದು ಅರ್ಥ ಬರುವಂತೆ ರೂಬಿಯೋಸ್ ಒಂದು ಉದ್ಘೋಷಣಾ ಪತ್ರವನ್ನು ತಯಾರಿಸಿದ.

ಸ್ಪೇನಿನ ನೌಕೆಯೊಂದು ಯಾವುದಾದರೂ ಹೊಸದಾದ ದ್ವೀಪ ಇಲ್ಲವೆ ಭೂಪ್ರದೇಶದ ಹತ್ತಿರ ಬಂದರೆ ಸಾಕು, ಹಡಗಿನ ಕ್ಯಾಪ್ಟನ್ ಮತ್ತು ಅವನ ಮುಖ್ಯ ಸಹಾಯಕ ಅಧಿಕಾರಿಗಳು ಸ್ಪೇನ್ ರಾಜಧ್ವಜವನ್ನು ಹಿಡಿದುಕೊಂಡು ತೀರದಲ್ಲಿ ಬಂದು ಅದನ್ನು ಸ್ಥಾಪಿಸಬೇಕು. ಅನಂತರ ಡಾಕ್ಟರ್ ರೂಬಿಯೋಸ್‌ನ ಉದ್ಘೋಷಣೆಯನ್ನು ಎತ್ತರದ ದನಿಯಲ್ಲಿ ತೀರದಲ್ಲಿ ಬಂದು ನೆರೆದಿರುವ ದೇಶವಾಸಿಗಳ ಮುಂದೆ- ಅವರಿಗೆ ತಿಳಿಯಲಿ, ಬಿಡಲಿ- ಘಂಟಾಘೋಷವಾಗಿ ಹೇಳಬೇಕು. ಆ ಉದ್ಘೋಷಣೆಯನ್ನು ಹೀಗೆ ದೇಶವಾಸಿಗಳೆದುರು ಮಾಡಲಾಯಿತೆಂದು ಹಡಗಿನ ಇತರ ಅಧಿಕಾರಿಗಳು ಸಾಕ್ಷ್ಯವಾಗಿ ರುಜು ಹಾಕಬೇಕು. ರೂಬಿಯೋಸ್‌ನ ಪ್ರಕಾರ ಆ ದ್ವೀಪದ ಜನರು ಸ್ನೇಹಿತರಾಗಲಿ,

ವೈರಿಗಳಾಗಲಿ, ಪ್ರಬಲರಾಗಿರಲಿ, ದುರ್ಬಲರಾಗಿ ರಲಿ, ಹಡಗಿನ ಕ್ಯಾಪ್ಟನ್ ಈ ಕಾರ್ಯಾಚರಣೆ ಯನ್ನು ಮಾಡಿಯೇ ತೀರಬೇಕು. ಹೀಗಾಗಿ ವಾಸ್ತವವಾಗಿ ಏನು ನಡೆಯುತ್ತಿತ್ತೆಂದರೆ, ಹಡಗು ಅಜ್ಞಾತ ಭೂಪ್ರದೇಶದಿಂದ ಸಾಕಷ್ಟು ದೂರವಾಗಿಯೇ ನಿಲ್ಲುತ್ತಿತ್ತು. ಹಡಗಿನ ಅಧಿಕಾ ರಿಗಳೆಲ್ಲರೂ ಡೆಕ್ಕಿನ ಮೇಲೆ ಭೂಮಿಯತ್ತ ನೋಡುತ್ತಾ ನಿಲ್ಲುತ್ತಿದ್ದರು. ಕ್ಯಾಪ್ಟನ್ ಧ್ವಜ ವನ್ನು ಎತ್ತಿ ಹಿಡಿದು ಆ ಉದ್ಘೋಷಣೆಯನ್ನು ದ್ವೀಪದತ್ತ ಮುಖ ಮಾಡಿ ಸಾರಿ ಹೇಳುತ್ತಿದ್ದ. ಅವನ ಯಾವ ಒಂದು ಶಬ್ದವೂ ತೀರದಲ್ಲಿದ್ದವ ರಿಗೆ ಕೇಳಿಸದಿದ್ದರೂ ತನ್ನ ದಿನಚರಿಯಲ್ಲಿ ಉದ್ಘೋಷಣೆಯನ್ನು ಮಾಡಿ, ಹೊಸ ಭೂಪ್ರ ದೇಶವನ್ನು, ಹೊಸ ಪ್ರಜೆಗಳನ್ನು ತನ್ನ ಚಕ್ರವ ರ್ತಿಯ ಅಧೀನಕ್ಕೆ ತಂದು ಕೊಟ್ಟೆನೆಂದು ಕ್ಯಾಪ್ಟನ್ ಬರೆಯುತ್ತಿದ್ದ. ಅದಕ್ಕೆ ಅಧಿಕಾರಿಗಳು ಸಹಿ ಹಾಕುತ್ತಿದ್ದರು. ಅಲ್ಲಿಗೆ ಸ್ಪೇನ್ ಮುಕುಟ ದಲ್ಲಿ ಮತ್ತೊಂದು 'ಮಣಿ' ಸೇರಿತೆಂದು ಲೆಕ್ಕವಾ ಗುತ್ತಿತ್ತು.

ಈ ಉದ್ಘೋಷಣೆಯನ್ನು ಮಾಡುವ ವಿಧಾನ ಎಷ್ಟು ಹಾಸ್ಯಾಸ್ಪದವಾಗಿತ್ತೋ ಆ ಉದ್ಘೋಷಣೆಯೂ ಅಷ್ಟೇ ಅಪಹಾಸ್ಯಕರವಾ ಗಿತ್ತು. ರೂಬಿಯೋಸ್ ಅದಕ್ಕೆ Re-querimiento (ದುರ್ನಿವಾರ್ಯ ರಾಜಾಜ್ಞೆ) ಎಂದು ನಾಮಕರಣ ಮಾಡಿದ್ದ. ಅದರಲ್ಲಿನ ಮುಖ್ಯವಾದ ತರ್ಕ ಹೀಗಿತ್ತು- "ಈ ಜಗತ್ತನ್ನು ಸೃಷ್ಟಿಸಿದ ದೇವರು ಎಲ್ಲರನ್ನೂ ಸಂತ ಪೀಟರನ ಅಧೀನವಾಗಿರಿಸಿದ. ಸಂತ ಪೀಟರನ ಧರ್ಮಪೀ ಠಕ್ಕೇರುವ ಪೋಪ್ ಗುರುವೇ ಎಲ್ಲ ಜನರಿಗೂ ಅಧಿಪತಿ, ಪ್ರಭು. ಅಂಥ ಪೋಪ್ ಗುರು ತನ್ನ ಭಕ್ತನಾದ ಸ್ಪೇನ್ ರಾಜನಿಗೆ ಹೊಸತಾಗಿ ಕಂಡು ಹಿಡಿಯುವ ಎಲ್ಲ ಭೂಪ್ರದೇಶಕ್ಕೂ ಅವನೇ ಸ್ವಾಮಿಯಾಗಿರಲೆಂದು ಅಧಿಕಾರ ನೀಡಿದ್ದಾನೆ. ಆದ್ದರಿಂದ ಈಗ ಕಂಡುಹಿಡಿದಿರುವ ಹೊಸ ಪ್ರದೇಶದ ದೇಶವಾಸಿಗಳೆಲ್ಲರೂ ತಮ್ಮ ನಿಜ ವಾದ ರಾಜ ಸ್ಪೇನ್ ರಾಜನೆಂದು ತಿಳಿದುಕೊಳ್ಳ ಬೇಕು; ಅವರು ಸ್ಪೇನ್ ರಾಜನ ಸೇವಕರಿಗೆ ಹಾಗೂ ಕ್ರೈಸ್ತ ಗುರುಗಳಿಗೆ ವಿಧೇಯರಾಗಿ, ರಾಜನಿಗೆ ಶಿರಬಾಗಿ ವಿನಯದಿಂದ ನಡೆದುಕೊ ಳ್ಳತಕ್ಕದ್ದು. ಹೀಗಾದಲ್ಲಿ ಮಾತ್ರ ಸ್ಪೇನ್ ರಾಜರು ಅವರ ಮೇಲಿನ ಪ್ರೀತಿ- ಕರುಣೆಯಿಂದ ತಮ್ಮ ಆಶ್ರಯವನ್ನು ಕರುಣಿಸಿ, ಅವರನ್ನು ಅನುಗ್ರಹಿ ಸುತ್ತಾರೆ. ಆಗ ಆ ಜನರು ತಮ್ಮ ಹೆಂಡತಿ-ಮಕ್ಕ ಳೊಂದಿಗೆ ತಮ್ಮ ಆಸ್ತಿ-ಪಾಸ್ತಿಯನ್ನು ನಿರಾತಂಕ ವಾಗಿ ಅನುಭವಿಸಿಕೊಂಡು ಹೋಗಬಹುದು. ಅವರನ್ನು ಕ್ರೈಸ್ತಧರ್ಮಕ್ಕೆ ಮತಾಂತರಗೊಳ್ಳು ವಂತೆ ಬಲವಂತ ಮಾಡುವುದಿಲ್ಲ. ಒಂದು ವೇಳೆ ನಮ್ಮ ರಾಜರ ಈ ಆದೇಶವನ್ನು ಒಪ್ಪದೆ ಅಜ್ಞಾನ, ಆಲಸ್ಯ, ಹಟಮಾರಿತನಗಳಿಂದ ಅವಜ್ಞೆ ಮಾಡಿದರೆ, ಆಗ ನಮ್ಮ ಸೈನ್ಯ ಬಲಪೂ ರ್ವಕವಾಗಿ ಮಧ್ಯ ಪ್ರವೇಶಿಸಿ ದೇಶವಾಸಿಗಳನ್ನು ಕ್ರಿಸ್ತಧರ್ಮಕ್ಕೆ ಸೇರಿಸಿಕೊಳ್ಳುತ್ತದೆ. ಆಗ ಅವರ ಹೆಂಡಿರುಮಕ್ಕಳನ್ನು ಗುಲಾಮರೆಂದು ಮಾರಬ ಹುದು; ಅವರ ಆಸ್ತಿಪಾಸ್ತಿಯನ್ನು ಮಟ್ಟು ಗೋಲು ಹಾಕಿಕೊಳ್ಳಲಾಗುತ್ತದೆ. ಏಕೆಂದರೆ ಅವಿಧೇಯರಾದ ದಂಗೆಕೋರ ಪ್ರಜೆಗಳನ್ನು ಶಿಕ್ಷಿಸಿ ದಮನ ಮಾಡುವ ಹಕ್ಕು ನಮ್ಮ ರಾಜರಿ ಗಿದೆ. ಅಂತೆಯೇ ಮುಂದೆ ಆಗಲಿರುವ ಎಲ್ಲ ಅನಾಹುತ, ನಷ್ಟಗಳಿಗೆ ದೇಶವಾಸಿಗಳೇ ಬಾಧ್ಯ ರಾಗಿರುತ್ತಾರೆ."

ಈ ಉದ್ಘೋಷಣೆ ಇತಿಹಾಸತಜ್ಞರಿಗೆ ಅಕ್ಷ ರಶಃ ಹಾಸ್ಯಾಸ್ಪದವೆನಿಸಿದೆ. ಆದರೂ ಅದರಿಂ ದಾದ ಪರಿಣಾಮದ ಭೀಕರತೆಯನ್ನು ಊಹಿಸಿ ಕೊಂಡಾಗ ಕಣ್ಣಲ್ಲಿ ನೀರೂರುತ್ತದೆ. ಈ ಘೋಷಣೆಯಲ್ಲಿ ಮೊದಲಿಂದ ಕೊನೆಯವ ರೆಗೂ ಎಲ್ಲವೂ ಕಪೋಲಕಲ್ಪಿತ; ಸುಳ್ಳಿನ ಕಂತೆ. ತಾನು ಹೀಗಿರಬಹುದೆಂದು ಊಹಿಸಲೂ ಶಕ್ತ ವಾಗಿರದ ಯಾವುದೋ ಒಂದು ಅಜ್ಞಾತ ಪ್ರದೇಶ ಹಾಗೂ ಅದರಲ್ಲಿ ವಾಸವಾಗಿರಬಹು ದಾದ ಜನಾಂಗದವರ ಮೇಲೆ, ಯುರೋಪಿನ ಲ್ಲಿಯೇ ಅಷ್ಟೇನೂ ಪ್ರಬಲನಲ್ಲದ ಅರಸನಾದ ಸ್ಪೇನ್ ದೇಶದ ರಾಜ ತನ್ನ ಅಧಿಕಾರವನ್ನು

ಹರಡಲು, ಸಾರ್ವಭೌಮತ್ವವನ್ನು ಸ್ಥಾಪಿಸಲು ಯತ್ನಿಸಿದ್ದು ಒಂದು ಹಾಸ್ಯಾಸ್ಪದವಾದ ಐತಿಹಾಸಿಕ ಸಂಗತಿ. ಈ ಮೋಸದ ಘೋಷಣೆಯೇ ಮೆಕ್ಸಿಕೋ ನಾಗರಿಕತೆಯನ್ನು ಧೂಳೀಪಟ ಮಾಡಿದ ಹರ್ನಾಂಡೋ ಕಾರ್ಟೆಜ್ ಮತ್ತು ಪೆರುವಿನ ಅದ್ಭುತ ಇಂಕಾ ಜನರ ನಾಗರಿಕತೆಯನ್ನು ನೆಲಸಮಮಾಡಿದ ಧೂರ್ತ ಫ್ರಾನ್ಸಿಸ್ಕೋ ಪಿಜಾರೋರಿಗೆ ಧಾರ್ಮಿಕ ಕಠೋರತೆಯನ್ನು ಹಾಗೂ ರಾಜಕೀಯ ಶಕ್ತಿಯನ್ನು ತುಂಬಿಕೊಟ್ಟ ಸೈತಾನನ ದಾಖಲೆಯಾಯಿತು.

೩

ಅತ್ತ ಇಟಲಿಯ ನಾವಿಕನ ಕತೆಯನ್ನು ನೋಡೋಣ. ಫ್ಲಾರೆನ್ಸ್ ನಗರದ ನಾವಿಕ ಅಮೆರಿಗೋ ವೆಸ್ಪುಚಿ- ಇವನೇ ಇಂದಿನ 'ಅಮೆರಿಕ' ನಾಮಕರಣದ ಕರ್ತೃನಾದವನು- ಕೇಡಿಜ್ ಬಂದರಿನಿಂದ ೧೪೯೭ರ ಮೇ ತಿಂಗಳಿನಲ್ಲಿ ಯಾನ ಮಾಡಿದ. ಅವನು ಈಗಿನ ದಕ್ಷಿಣ ಅಮೆರಿಕದ ಪೂರ್ವ ಹಾಗೂ ಉತ್ತರ ತೀರದುದ್ದಕ್ಕೂ ನಾಲ್ಕು ಬಾರಿ ಪ್ರವಾಸ ಮಾಡಿದ. ಆಗ ಅವನ ಕಣ್ಣಿಗೆ ಬಿದ್ದವರು ಅಸಹಾಯರಾದ ನಿರುಪದ್ರವಿ ಜನ. ಅವರಲ್ಲಿ ನಾಗರಿಕತೆಯ ಸೋಂಕು ಲವಲೇಶವೂ ಇರಲಿಲ್ಲ. ಎಲ್ಲರೂ ಬೆತ್ತಲಬಡುಕರೇ. ಅವರಿಗೆ ಹೆಚ್ಚಿನ ಆಸೆ ಆಮಿಷಗಳೂ ಇರಲಿಲ್ಲ. ತಿನ್ನಲೊಂದಿಷ್ಟು ಆಹಾರ, ಮಲಗಲು ಒಂದಿಷ್ಟು ನೆರಳು ಇದ್ದರೆ ಸಾಕಿತ್ತು. ಅವೆರಡೂ ಅವರಿಗೆ ಸಮೃದ್ಧವಾಗಿ ದೊರೆತಿದ್ದವು. ಪರಿಸ್ಥಿತಿ ಹೀಗಿದ್ದಾಗ ಅಮೆರಿಗೋ ಅವರೊಂದಿಗೆ ಏನುತಾನೆ ವ್ಯಾಪಾರ ನಡೆಸಿಯಾನು ? ಅಮೆರಿಗೋ ದಾಖಲಿಸಿಕೊಂಡಂತೆ: "ಅವರ ಸಕಲ ಸಂಪತ್ತೆಂದರೆ ಬಣ್ಣ ಬಣ್ಣದ ಹಕ್ಕಿಗಳ ಗರಿಗಳು, ತುಪ್ಪಳಗಳು; ಮೀನಿನ ಎಲುವಿನ ಚೂರುಗಳನ್ನು ಪೋಣಿಸಿ ಮಾಡಿದ ಸರಮಾಲೆ; ಬಣ್ಣ ಬಣ್ಣದ ಕಲ್ಲುಗಳು. ಅವನ್ನು ಹೇಗೆಂದರೆ ಹಾಗೆ ತಮ್ಮ ಕಿವಿ, ಮೂಗು, ತುಟಿ, ಕೆನ್ನೆಗೆ ಪೋಣಿಸಿಕೊಳ್ಳುತ್ತಾರೆ. ಅವರಿಗೆ ಕೊಳ್ಳಲು ಏನೂ ಬೇಕಿಲ್ಲ; ಮಾರಲು ಏನೂ ಇಲ್ಲ. ಹೀಗಾಗಿ ಅವರಿಗೆ ಪದಾರ್ಥ ವಿನಿಮಯವೂ ಗೊತ್ತಿಲ್ಲ. ಇನ್ನು ಚಿನ್ನ, ಬೆಳ್ಳಿ, ವಜ್ರ, ಒಡವೆಗಳ ಮಾತಂತೂ ದೂರವೇ ಉಳಿಯಿತು. ಅವರಿಗೆ ತಮ್ಮ ಸ್ವಂತದ್ದೆಂಬುದು ಏನೂ ಇಲ್ಲ. ತಮ್ಮ ಹತ್ತಿರ ಏನಿದೆಯೋ ಅದು ಎಲ್ಲರಿಗೂ ಸೇರಿದ್ದು ಎಂಬುದೇ ಅವರ ಜೀವನ ಕ್ರಮ. ಅದರಲ್ಲಿಯೂ ಅತಿಥಿ ಅಭ್ಯಾಗತರೊಂದಿಗೂ ಅವರು ಹಂಚಿಕೊಳ್ಳದ ವಸ್ತು ಯಾವವೂ ಇರಲಿಲ್ಲ."

ಉತ್ತರ ಅಮೆರಿಕ ಭೂಖಂಡದತ್ತ ತಿರುಗಿದ ಫ್ರೆಂಚ್, ಡಚ್ ಹಾಗೂ ಇಂಗ್ಲೀಷ್ ಜನರ ಅನುಭವ ಇನ್ನೊಂದು ಬಗೆಯದಾಯಿತು. ಯುರೋಪಿನ ಚಿಕ್ಕ ಪುಟ್ಟ ಪ್ರದೇಶಗಳಿಂದ ಬಂದಿದ್ದ ಈ ಜನರಿಗೆ ಅಮೆರಿಕಾ ಖಂಡದ ಆ ವಿಶಾಲ ಪ್ರದೇಶ ದಿಗ್ಭ್ರಮೆ ಮೂಡಿಸಿತು. ಅಷ್ಟೊಂದು ಮರಗಿಡಗಳು, ಕೊನೆಯಿಲ್ಲದಂತೆ ಹರಿದು ಬರುತ್ತಿರುವ ನೀರಿನ ರಾಶಿಯನ್ನು ಹೊತ್ತ ನದಿಗಳು, ದೂರದಲ್ಲಿ ಅಷ್ಟು ದೂರಕ್ಕೂ ಹರಡಿರುವ ಬೆಟ್ಟ, ಗುಡ್ಡ, ಕಣಿವೆಗಳು, ಫಲವತ್ತಾದ ಭೂಮಿ, ಅವುಗಳೆಲ್ಲದರ ಮಧ್ಯೆ ಆಗೊಮ್ಮೆ ಈಗೊಮ್ಮೆ ಕಾಣಿಸಿಕೊಂಡು ಮಾಯವಾಗುವ ಕೆಂಪು ಮೈಬಣ್ಣದ ಜನ-ಇವೆಲ್ಲವೂ ಭೂದಾಹದಿಂದ ಬಾಯಿಬಿಡುತ್ತಿದ್ದ ಈ ಬಿಳಿಯ ಜನರಿಗೆ ಬಾಯಿ ನೀರೂರುವಂತೆ ಮಾಡಿರಬೇಕು. ಮೊದಮೊದಲು ಆ ಕೆಂಪು ವರ್ಣೀಯರನ್ನು 'ಇಂಡಿಯನ್'ರೆಂದು ಒಟ್ಟಾರೆಯಾಗಿ ಕರೆಯುತ್ತಿದ್ದರು. ಕ್ರಮೇಣವಾಗಿ ಅಮೆರಿಕದಲ್ಲಿ ನೆಲೆಸಿದ ಬಳಿಕ ಅವರೆಲ್ಲರೂ ನೂರಾರು ಬಗೆಯ ಬೇರೆ ಬೇರೆಯ ಬಣದವರು, ಜನಾಂಗದವರು ಎಂದು ಗುರುತಿಸಲಾಯಿತು. ಆ ಕೆಂಪು ಜನರು ಕೃಷಿಕರಲ್ಲ; ಒಂದೇ ಜಾಗದಲ್ಲಿ ನೆಲೆಸುವವರಲ್ಲ. ಅವರೆಲ್ಲ ಬೇಟೆಗಾರರು, ಅಲೆಮಾರಿಗಳು. ಆ ಕೆಂಪು ಬೇಟೆಗಾರ ಮೂಲನಿವಾಸಿಗಳಿಗೂ ಕೃಷಿಕರಾಗಿ ನೆಲೆಸಲು ಬಂದು ನಿಂತ ಬಿಳಿಯ ಆಗಂತುಕರಿಗೂ ಉಂಟಾದ ಸಂಘರ್ಷ ಎರಡು ಜೀವನಕ್ರಮ

ಗಳ, ಎರಡು ವಿಭಿನ್ನ ಸಾಂಸ್ಕೃತಿಕ, ಸಾಮಾಜಿಕ ಪಾತಳಿಯಲ್ಲಿ ನಿಂತಿರುವ ಜನಾಂಗಗಳ ಘರ್ಷಣೆಯಾಯಿತು.

ಫ್ರೆಂಚ್ ಸಾಹಸಿಗಳು ಕೂಡ ಅಮೆರಿಕದ ಮೂಲ ನಿವಾಸಿಗಳನ್ನು ಧೂರ್ತತನದಿಂದಲೇ ಕೈವಶ ಮಾಡಿಕೊಂಡಿದ್ದುಂಟು. ೧೫೩೪ರಲ್ಲಿ ಜಾಕ್ವೆಸ್ ಕಾರ್ಟಿಯರ್ ಇಂದಿನ ಸೆಂಟ್ ಲಾರೆನ್ಸ್ ಗಲ್ಫ್‌ನ ತೀರ ಪ್ರದೇಶದಗುಂಟ ನೌಕೆಯನ್ನು ನಡೆಸಿಕೊಂಡು ಬಂದ. ಯೋಗ್ಯವಾದ ಜಾಗ ಕಣ್ಣಿಗೆ ಬಿದ್ದಾಗ ಅಲ್ಲಿಯೇ ತೀರವನ್ನು ಪ್ರವೇಶಿಸಿದ. ಅಲ್ಲೊಂದು ಮೂವತ್ತಡಿ ಎತ್ತರವಾದ ಶಿಲುಬೆಯನ್ನು ನೆಟ್ಟು ಹಡಗಿನವರೆಲ್ಲರೂ ಅದರ ಮುಂದೆ ಮಂಡಿಯೂರಿ ಅಭಿವಂದನೆ ಮಾಡಿದರು. ಆ ಶಿಲುಬೆಯ ಮೇಲೆ "ಫ್ರೆಂಚ್ ದೊರೆಗೆ ಜಯವಾಗಲಿ" ಎಂಬ ಘೋಷವಾಕ್ಯ ಮತ್ತು ರಾಜಚಿಹ್ನಗಳನ್ನು ಕೆತ್ತಿದ್ದರು. ಈ ಕೃತ್ಯವನ್ನು ನೋಡುತ್ತಿದ್ದ ಸ್ಥಳೀಯ ನಿವಾಸಿಗಳ ಮುಖಂಡ ದೋಣಿಯೊಂದನ್ನೇರಿ ಫ್ರೆಂಚರ ಹಡಗಿನತ್ತ ಬಂದ. 'ನನ್ನ ಅನುಮತಿಯಿಲ್ಲದೆ ಆ ಶಿಲುಬೆಯನ್ನು ಅಲ್ಲಿ ಹೇಗೆ ನೆಟ್ಟಿರಿ ?' ಎಂದು ಕೇಳುವವನಂತೆ ಅವನು ಕೈಸನ್ನೆಯ ಮಾತಿನಲ್ಲಿ ತನ್ನ ರೋಷವನ್ನು ವ್ಯಕ್ತಮಾಡಿದ. ನಾವಿಕರೆಲ್ಲರೂ ತಮಗೆ ಅವನ ರೋಷ, ಕೋಪ ಅರ್ಥವಾಗಿಲ್ಲ ಎಂಬಂತೆ ನಟಿಸುತ್ತಾ ಪ್ರೀತಿ, ಸ್ನೇಹಗಳಿಂದ ಯಜಮಾನನ ದೋಣಿಯನ್ನು ತಮ್ಮೆಡೆಗೆ ಆಕರ್ಷಿಸಿದರು. ಯಜಮಾನನ ದೋಣಿ ಹತ್ತಿರ ಬಂದಕೂಡಲೇ ನಾವಿಕರು ದೋಣಿಯೊಳಗೆ ಇಳಿದು ಅವನನ್ನು ಮತ್ತು ಅವನ ಮಕ್ಕಳನ್ನು ಹಡಗಿನ ಮೇಲಕ್ಕೆಳೆದುಕೊಂಡರು. ಆಗಲೂ ಕಪಟ ಸ್ನೇಹವನ್ನು ನಟಿಸುತ್ತಾ ಅವರಿಗೆಲ್ಲಾ ಟೊಪ್ಪಿಗೆ, ಕೋಟು ಮುಂತಾದವನ್ನು ಕೊಟ್ಟರು. ಕ್ಯಾಪ್ಟನ್ ಯಜಮಾನನಿಗೆ ಆ ಶಿಲುಬೆಯ ಬಗ್ಗೆ ಕೊಟ್ಟ ವಿವರಣೆ ಬೇರೆಯಾಗಿತ್ತು. ತಾವು ಮತ್ತೆ ಮತ್ತೆ ಆ ಸ್ಥಳಕ್ಕೆ ಬರಲೋಸುಗವಾಗಿ ದಾರಿಯ ಗುರುತಿಗೆಂದು ಅದನ್ನು ನೆಟ್ಟಿದೆ ಎಂದು ಕ್ಯಾಪ್ಟನ್‌ನ ವಿವರಣೆ ಇಷ್ಟೇ ಅಲ್ಲದೆ ಯಜಮಾನನ ಮಕ್ಕಳನ್ನು ಒತ್ತೆಯಾಗಿರಿಸಿಕೊಂಡು, ಅವನಿಗೆ ಚಾಕು, ಕೊಡಲಿಗಳನ್ನು ಸ್ನೇಹಸೂಚಕವಾಗಿ ಕೊಟ್ಟ. ಅವನ ಮಾತು ನಂಬದೆ ಆ ಭೋಳೆ ಜನರಿಗೆ ಬೇರೆ




ನಮ್ಮ ಹುಡುಗಾ ಮತ್ತ ಅವನ ದೋಸ್ತರದು....ಒಂದು ತಿಂಗಳ ಸಿಗರೇಟ್, ಗುಟಖಾದ ಖರ್ಚುಕೊಡ್ತೀವಿ ಅಂದ್ರ ವರದಕ್ಷಿಣೆ ಇಲ್ಲನss ನಿಮ್ಮ ಹುಡ್ಗಿ ತಗೋಳಾಕ ನಾವು ತಯಾರ ಆದೇವ್ರಿ.....!!

ಮಾರ್ಗವೇ ಇರಲಿಲ್ಲ.

ಇಂಗ್ಲೆಂಡಿನಿಂದ ಬಂದ ವಲಸೆಗಾರರೂ ಇದಕ್ಕಿಂತ ಭಿನ್ನರಾಗಿರಲಿಲ್ಲ. ಅವರಲ್ಲಿಯೂ ಮೋಸ, ವಂಚನೆ, ನಂಬಿಕೆ ದ್ರೋಹ ಕಾಪಟ್ಯಕ್ಕೆ ಕೊರತೆಯಿರಲಿಲ್ಲ. ಬೆಣ್ಣೆಯಿಂದ ಕೂದಲು ತೆಗೆಯುವಂತೆ ನಿಪುಣತೆಯಿಂದ ತಮ್ಮ ಸ್ವಾರ್ಥಸಾಧನೆಯನ್ನು ಮಾಡಿಕೊಳ್ಳುತ್ತಿದ್ದರು. ವರ್ಜಿನಿಯಾದ ಗವರ್ನರ್ ಆಗಿದ್ದ ಜಾನ್ ಸ್ಮಿತ್ ಎಂಬವನು ತನ್ನನ್ನು ನಂಬಿದ್ದ ಹತ್ತಿರದ ಹಳ್ಳಿಯ ಯಜಮಾನನ ಮೇಲೆ ಸ್ನೇಹದ ಕಪಟನಾಟಕ ವಾಡಿ, ತನ್ನ ಸೈನಿಕರೆಲ್ಲರಿಗೂ ವಸತಿ, ಆಹಾರಗಳನ್ನು ಕಡ್ಡಾಯವಾಗಿ ಒದಗಿಸುವಂತೆ ಏರ್ಪಾಟು ಮಾಡಿಕೊಂಡಿದ್ದ. ಸ್ಮಿತ್‌ನ ಗೆಳೆಯ ಜಾನ್ ರಾಲ್ಫ್ ನಿಜವಾದ ಪೋಕರಿ. ಆ ಮುಖಂಡನ ಮಗಳನ್ನು ಪ್ರೀತಿಸಿ ಮದುವೆಯಾದ ನಾಟಕವಾಡಿ, ಅವಳನ್ನು ಅಸಹಜವಾದ ಸಾವಿಗೆ ಗುರಿಮಾಡಿದ. ಪ್ಲಿಮತ್‌ನ ಕಡು ನಿಷ್ಠಾವಂತ ಗವರ್ನರ್ ಬ್ರಾಡ್‌ಫರ್ಡ್ ಮಾತ್ರ ಇಂಡಿಯನ್ ಜನರಿಗೆ ಯಥೇಚ್ಛವಾಗಿ ಮದ್ಯ ಪೂರೈಕೆಯಾಗುವುದನ್ನು ಬೆಂಬಲಿಸಿದ. ಆದರೆ ಅದೇ ಇಂಡಿಯನ್ ಜನರಿಗೆ ಕುಶಲ ಕಸುಬುಗಳನ್ನು ಕಲಿಸಿಕೊಡುವುದನ್ನು ವಿರೋಧಿಸಿದ. ಅವನ ಕೈಕೆಳಗಿನ ಅಧಿಕಾರಿಯಾದ ಮಾರ್ಟಿನ್ ಇಂಡಿಯನ್ ಜನರ ಮೇಲೆ ಸ್ನೇಹ, ಸಹಾನುಭೂತಿಯಿಂದ ಅವರಿಗೆ ಪ್ರಾಣಿಗಳನ್ನು ಬೇಟೆಯಾಡಲು ಅನುಕೂಲವಾಗುವಂತೆ ಮದ್ದುಗುಂಡು, ಬಂದೂಕುಗಳ ತಯಾರಿಕೆ ಹಾಗೂ ಪ್ರಯೋಗವನ್ನು ಕಲಿಸಿಕೊಟ್ಟಿದ್ದ. ಇದೇ ಆಪಾದನೆಗಾಗಿ ಗವರ್ನರ್ ಬ್ರಾಡ್‌ಫರ್ಡ್ ಮಾರ್ಟಿನ್ನನ್ನು ಇಂಗ್ಲೆಂಡಿಗೆ ಮರಳಿ ಕಳಿಸಿದ. ಇಂಗ್ಲೆಂಡಿನಲ್ಲಿದ್ದಾಗಲೂ ಮಾರ್ಟಿನ್ ಕೆಂಪು ಇಂಡಿಯನ್ನರ ಬಗ್ಗೆ ಸತ್ಪ್ರಚಾರವನ್ನೇ ಮುಂದುವರಿಸಿದ: "ಮನುಷ್ಯನಿಗೆ ಬೇಕಾದ ಆಹಾರ, ವಸನ ಎರಡೂ ಆ ದೇಶದಲ್ಲಿನ ಜನರಿಗೆ ಸಾಕಷ್ಟಿದೆ. ಇಂಗ್ಲೆಂಡಿನಲ್ಲಾದರೋ ಇಷ್ಟು ಸಿಗುವುದೂ ಕಷ್ಟಕರ. ಒಂದು ವೇಳೆ ನಮ್ಮಲ್ಲಿನ ಭಿಕ್ಷುಕರಿಗೆ ಇಷ್ಟಾದರೂ ಸಿಗುವಂತಿದ್ದರೆ ಅವರು ಈ ದೇಶದ ಜೇಲುಗಳಲ್ಲಿ ಕೊಳೆಯುತ್ತಿರಲಿಲ್ಲ; ನೇಣುಗಂಬವನ್ನೇರುತ್ತಿರಲಿಲ್ಲ.... ಆ ಇಂಡಿಯನ್ ಜನರಲ್ಲಿ ಪ್ಲೇಟೋನ ಕಾಮನ್‌ವೆಲ್ತ್ ಕಲ್ಪನೆ ಅಭ್ಯಾಸವಾಗಿ ವಾಸ್ತವ ರೂಪ ತಾಳಿದೆ," ಎಂದಾತ ಹೇಳಿದ. ಇಷ್ಟಾದರು, ಯುರೋಪಿನಿಂದ ಬಂದ ಬಿಳಿಯ ಜನ ನಡೆಸಿದ ಮೋಸ, ದ್ರೋಹದ ಈ ಬೇಟೆಯಲ್ಲಿ ಮಾರ್ಟಿನ್‌ರಂಥವರು ಅಪರೂಪದ ಅಪವಾದದಂತಿದ್ದಾರೆ.

೪

ಅಮೆರಿಕದ ಮೂಲ ನಿವಾಸಿಗಳು ನಿಜವಾಗಿಯೂ ಏಶಿಯದಿಂದ ಬಂದಿರಬೇಕೆಂದು ಮಾನವಶಾಸ್ತ್ರಜ್ಞರು ಊಹಿಸಿದ್ದಾರೆ. ಸೈಬೀರಿಯಾದಿಂದ ಸುಮಾರು ೨೦ ರಿಂದ ೩೫ ಸಾವಿರ ವರ್ಷಗಳ ಹಿಂದೆ ಅಮೆರಿಕದ ಉತ್ತರದ ನೆತ್ತಿಗೆ ಒಂದು ಭೂಮಾರ್ಗವಾಗಿದ್ದಿರಬೇಕು. ಆಗ ಬೇಟೆಗಾರರ ತಂಡಗಳು ತಮ್ಮ ಬೇಟೆಯ ಪ್ರಾಣಿಗಳ ಹಿಂದೆ ಹಿಂದೆ ಹೋಗುತ್ತಾ ಅಮೆರಿಕವನ್ನು ತಲುಪಿ ಅಲ್ಲಿಯೇ ನೆಲೆಸಿರಬೇಕು. ಅವರೆಲ್ಲರೂ ಅಲೆಮಾರಿಗಳು, ಬೇಟೆಗಾರರು. ಆಗ ಅಮೆರಿಕಾ ಖಂಡದಲ್ಲೆಲ್ಲ ಅಮೆರಿಕದ ಬಫೆಲೊ (ಎಮ್ಮೆ ಜಾತಿಯ ಪ್ರಾಣಿ) ಹರಡಿತ್ತು. ಮೈದಾನ ಪ್ರದೇಶದ ಇಂಡಿಯನ್ನರು ಅಮೆರಿಕದ ವಿಶಾಲವಾದ ಪ್ರಯರಿ ಮೈದಾನಗಳಲ್ಲಿ ಸಂಚರಿಸುತ್ತಿದ್ದರು. ಅಲ್ಲಿನ ಎಲ್ಲ ಜನಾಂಗಗಳೂ ತಮ್ಮ ತಮ್ಮ ಪ್ರದೇಶಗಳಲ್ಲಿ ಬರುವ ಎಮ್ಮೆಗಳನ್ನು ಬೇಟೆಯಾಡಿ ಬದುಕುತ್ತಿದ್ದವು.

ಗಂಡಸರೆಲ್ಲರೂ ಬೇಟೆಗಾರರೇ. ಹೆಂಗಸರು ಮಾತ್ರ ತಾವು ಉಳಿದುಕೊಂಡಿದ್ದ ಪಾಳೆಯದ ಸುತ್ತಲೂ ನೆಲವನ್ನು ಹಸನು ಮಾಡಿ, ಮುಸುಕಿನ ಜೋಳದಂಥ ಧಾನ್ಯವನ್ನು ಬೆಳೆಯುತ್ತಿದ್ದರು. ಹೀಗಾಗಿ ಅಲ್ಲಲ್ಲಿ ಸಣ್ಣ ಪುಟ್ಟ ಹಳ್ಳಿಗಳ ಜೀವನವನ್ನೂ ನೋಡಬಹುದಿತ್ತು. ಆಹಾರ ವಿಪುಲವಾಗಿ ಸಂಗ್ರಹವಾದಾಗ, ನೀರಿನ ಆಸರೆ ಇರುವ ಸ್ಥಳಗಳಲ್ಲಿ ಬೇಸಿಗೆಯ ದಿನಗ

ಳಲ್ಲಿ ಬುಡಕಟ್ಟಿನ ಜನರೆಲ್ಲರೂ ಒಟ್ಟಾಗಿ ಸೇರುತ್ತಿದ್ದರು. ಆಗಲೇ ಪ್ರಾಯಕ್ಕೆ ಬರುತ್ತಿದ್ದ ಗಂಡು ಹುಡುಗರಿಗೆ "ವೀರ ದೀಕ್ಷೆ" ಯನ್ನು ಕೊಡುವ ಸಮಾರಂಭ; ಬಿಸಿ ರಕ್ತದ ತರುಣರು ತಾವು ಹೇಗೆ ಶತ್ರುವನ್ನು ಪರಾಭವಗೊಳಿಸಿ, ಅವನ ಮಂದಲೆಯನ್ನು ತೊಗಲಿನ ಸಮೇತ ಗೆದ್ದು ಕೊಂಡು ಬರುತ್ತೇವೆಂದು ನಟಿಸಿ ತೋರಿಸುವುದು; ಬೇಟ-ಕೂಟಗಳ ಸಡಗರ, ಉತ್ಸಾಹ, ಉತ್ಸವಗಳು. ಬೇಸಿಗೆ ಕಳೆದು, ಬೇಟೆಯ ಪ್ರಾಣಿಗಳು ದೂರ ದೂರಕ್ಕೆ ಹೊರಟುಹೋದಾಗ ಜನಾಂಗದವರ ಸಾಮೂಹಿಕ ಜೀವನ ಕೊನೆಗೊಳ್ಳುತ್ತಿತ್ತು. ಪ್ರತಿಯೊಂದು ಪರಿವಾರವೂ ತಮ್ಮ ತಮ್ಮ ಮುಖಂಡನ ಹಿಂದೆ ಬೇರೆ ಬೇರೆಯಾಗಿ ಬೇಟೆಯನ್ನರಸುತ್ತಾ ಆ ಭೂಖಂಡದ ಉದ್ದಗಲಕ್ಕೂ ಚಳಿಗಾಲದಲ್ಲಿ ಅಲೆಯುತ್ತಿತ್ತು.

ಹೀಗೆ ಸಾವಿರಾರು ವರ್ಷಗಳಿಂದಲೂ ಕಾಲ್ನಡಿಗೆಯಲ್ಲಿಯೇ ಬೇಟೆಯನ್ನರಸಿಕೊಂಡು, ಬೇಟೆ ಮಾಡಿ ಬದುಕುತ್ತಿದ್ದ ಈ ಜನಾಂಗಗಳಿಗೆ ಮೊದಲ ಬದಲಾವಣೆಯನ್ನು ತಂದು ಕೊಟ್ಟವರು ಸ್ಪ್ಯಾನಿಶ್ ಜನರು. ಸ್ಪ್ಯಾನಿಶ್ ಸೈನಿಕರು ದಾಳಿಗಳಲ್ಲಿ ಸತ್ತಾಗ, ಅವರ ಕುದುರೆಗಳು ಇಂಡಿಯನ್ನರ ಕೈವಶವಾದವು. ಕುದುರೆ ಸವಾರಿಯಲ್ಲಿ ಪಳಗಿದ ಇಂಡಿಯನ್ ವೀರರು ಒಮ್ಮೆಗೇ ಪ್ರಬಲ ಯೋಧರಾದರು. ಹೊರಗಿನವರಿಗೆ ದುರ್ದಮ್ಯ ಶತ್ರುಗಳಾದರು.

ಬೇಟೆ, ಯುದ್ಧಗಳಲ್ಲಿ ನಿಷ್ಣಾತರಾದ ಇಂಡಿಯನ್ ಜನರು ಶಾಂತಿ ಸ್ಥಾಪನೆಯನ್ನೂ ಒಂದು ದೈವಿಕ ಆರಾಧನೆಯಂತೆ ಆಚರಿಸುತ್ತಿದ್ದರು. ಅದರಲ್ಲಿ ಪ್ರಮುಖ ಪಾತ್ರವಿದ್ದುದು ಅವರ "ಪೀಸ್ ಪೈಪ್" (ಶಾಂತಿಯ ಕೊಳವೆಗೆ)ಗೆ. ಅದೊಂದು ಸುಮಾರು ೭೫-೮೦ ಸೆಂಟಿಮೀಟರ್ ಉದ್ದದ ಬಿದಿರಿನ ನಳಿಗೆ. ಒಂದು ತುದಿಯಲ್ಲಿ ಕಿರಿದು ಬಾಯಿಯ ತಂಬಾಕು ತುಂಬುವ ಬಿಳಿಯ ಕಲ್ಲಿನಮರಿಗೆ ಜೋಡಿಸಿರುತ್ತಿತ್ತು. ಕೆಲವೊಮ್ಮೆ ಇದು ಕೆಂಪು, ಕಪ್ಪು ಬಣ್ಣದ್ದೂ ಆಗಿರುತ್ತಿತ್ತು. ಆ ಕೊಳವೆಯನ್ನು ಬಣ್ಣ ಬಣ್ಣದ ಗರಿಗಳಿಂದ, ನೀಳವಾದ ಕೂದಲುಗಳಿಂದ ಕುಚ್ಚುಕಟ್ಟಿ ಅಲಂಕರಿಸಲಾಗುತ್ತಿತ್ತು. ಶಾಂತಿಯ ಮಾತುಕತೆಗೆ ತೊಡಗುವ ಮೊದಲು ಆ ತಂಬಾಕು ತುಂಬುವ ಕಲ್ಲುಮರಗಿಯಲ್ಲಿ ನಿಧಾನವಾಗಿ, ಶಾಸ್ತ್ರೋಕ್ತವಾಗಿ ಎನ್ನುವಂತೆ, ಎಲ್ಲರೆದುರೂ ಎಚ್ಚರಿಕೆಯಿಂದ ತಂಬಾಕು ತುಂಬುತ್ತಿದ್ದರು. ಸಂಧಾನದ ಮಾತುಕತೆಯಾಗಿ, ಎಲ್ಲರಿಗೂ ಸಮಾಧಾನವೆನಿಸಿದಾಗ ಅದಕ್ಕೆ ಉರಿ ತಗುಲಿಸಿ, ಅದನ್ನು ಹಿರಿತನದ ಕ್ರಮದಲ್ಲಿ ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ವರ್ಗಾವಣೆ ಮಾಡುತ್ತಿದ್ದರು. ಆಗ ಪ್ರತಿಯೊಬ್ಬರೂ ತಮ್ಮೆಡೆಗೆ ಬಂದ ಕೊಳವೆಯನ್ನು ಗಂಭೀರವಾಗಿ ಕೈಗೆತ್ತಿಕೊಂಡು ಅದರ ಇನ್ನೊಂದು ತುದಿಗೆ ಬಾಯಿಹಚ್ಚಿ ಮೂರು ಬಾರಿ "ದಂ" ಎಳೆಯಬೇಕಾಗಿತ್ತು. ಉಳಿದವರೆಲ್ಲರೂ ಸಾವಧಾನವಾಗಿ, ಮೌನ-ಗಂಭೀರರಾಗಿ ಆ ಕ್ರಿಯೆಯನ್ನೇ ವೀಕ್ಷಿಸುತ್ತಿದ್ದರು. ಎಲ್ಲರ ಸರತಿಯೂ ಮುಗಿದ ಮೇಲೆ ಶಾಂತಿ-ಸಂಧಾನದ ಒಪ್ಪಂದಕ್ಕೆ ಅಧಿಕೃತ ಮುದ್ರೆ ಬಿದ್ದಂತಾಗುತ್ತಿತ್ತು. ಈ ಶಾಂತಿ-ಕೊಳವೆ ಆ ಇಂಡಿಯನ್ ಬಣಗಳ ನಡುವೆ ಒಂದು ತರಹ ಪಾಸ್‌ಪೋರ್ಟನಂತೆ ಇರುತ್ತಿತ್ತು. ಅದನ್ನು ತರುವವನು ನಿರಪಾಯಕರನಾದ ಶಾಂತಿದೂತ ಎಂದು ಎಲ್ಲರೂ ನಂಬಿದ್ದರಿಂದ ಯಾವುದೇ ಇಂಡಿಯನ್ ಪಾಳೆಯದೊಳಗೂ ಶಾಂತಿ-ನಳಿಗೆಯನ್ನು ಹಿಡಿದು ನಿರಾತಂಕವಾಗಿ ಪ್ರವೇಶಿಸಬಹುದಾಗಿತ್ತು.

ಅವರಲ್ಲಿ ಇನ್ನೂ ಒಂದು ಬಗೆಯ ಆಚರಣೆ ರೂಢಿಯಲ್ಲಿತ್ತು. ತಮ್ಮ ನಡುವಿನ ಶತ್ರುತ್ವ-ಮನಸ್ತಾಪವನ್ನು ಕೊನೆಗಾಣಿಸಿ ಅವುಗಳನ್ನು ಸಮಾಧಿ ಮಾಡಿದ್ದೇವೆ ಎನ್ನುವುದಕ್ಕೆ ಸಾಂಕೇತಿಕವಾಗಿ ಯುದ್ಧವೆಲ್ಲಾ ಮುಗಿದು, ಹಿಂದಿನ ವೈರ-ದ್ವೇಷಗಳೆಲ್ಲಾ ಅಳಿಸಿ ಹೋದನಂತರ, ಎರಡೂ ಪಕ್ಷದ ಮುಖಂಡರು ನೆಲದಲ್ಲಿ ಆಳವಾಗಿ ಗುಳಿತೋಡಿ ತಮ್ಮ ತಮ್ಮ ಕೈಗೊಡಲಿಗಳನ್ನು ಅದರಲ್ಲಿ ಹೂಳುತ್ತಿದ್ದರು. ಇದೇ ಈಗ ಇಂಗ್ಲೀಷ್

ಭಾಷೆಯಲ್ಲಿ "to bury the hatchet" ಎಂದು ನಾಣ್ಣುಡಿಯಾಗಿ ಬಳಕೆಗೆ ಬಂದಿದೆ.

ಅವರ ಜೀವನವೆಲ್ಲಾ ಪ್ರಕೃತಿಯು ಬದಲಾಗುತ್ತಿರುವ ಋತುಮಾನಗಳು, ಭೂಭೌತಿಕ ಪರಿಸರಗಳನ್ನು ಅವಲಂಬಿಸಿರುತ್ತವೆಯಾದ್ದರಿಂದ ಬೇಟೆಗಾರ ಆಯ್ದುಣ್ಣುವ ಜನಾಂಗಗಳು ನಿಸರ್ಗವನ್ನು ಅತ್ಯಂತ ಸೂಕ್ಷ್ಮವಾಗಿ ಅರಿತಿರಬೇಕು. ಅವರು ತಮ್ಮ ಪರಿಸರವನ್ನು ಬದಲಿಸುವ ಶಕ್ತಿಯನ್ನು ಹೊಂದಿರಲಾರರು. ಅಂತೆಯೇ ಅವರು ಪ್ರಕೃತಿಯ ವೈಪರೀತ್ಯಗಳಿಗೇ ಬೆಲೆ ಕೊಟ್ಟು ಅವಕ್ಕೆ ದೈವೀ ಶಕ್ತಿಯನ್ನು ಆರೋಪಿಸಿ, ತಮ್ಮ ಪರಿಸರದೊಂದಿಗೇ ಹೊಂದಿಕೊಂಡು ಹೋಗುತ್ತಾರೆ. ಇಂಡಿಯನ್ನರ ದೃಷ್ಟಿಯಲ್ಲಿಯೂ ನಿಸರ್ಗದ ಶಕ್ತಿಗಳೇ ದೈವಿಕವಾದವು. ಆಕಾಶದಲ್ಲಿರುವ "ಮಹಾಪಿತೃ"ವೇ ಅವರ ಜೀವನವನ್ನು ನಡೆಸುವವನು. ಒಂದು ದೃಷ್ಟಿಯಿಂದ ಇದು ಮೂಢನಂಬಿಕೆ ಎನ್ನಬಹುದಾದರೂ ಮತ್ತೊಂದು ದೃಷ್ಟಿಕೋನದಿಂದ ನೋಡಿದಾಗ ಅವರ ಬಾಳು ಎಷ್ಟು ಸರಳ, ಋಜು, ಸುಂದರ ಎನಿಸದಿರದು.

ಅವರು ಪ್ರಕೃತಿಯೊಡನೆ ಸ್ಪರ್ಧೆಗಿಳಿವ ಜನರಲ್ಲ; ಬದಲು ಪ್ರಕೃತಿಮಾತೆ ಕೊಟ್ಟುದನ್ನು ಪ್ರೀತಿಯಿಂದ, ಸಂತೋಷದಿಂದ ಸ್ವೀಕರಿಸಿ ಎಲ್ಲರೂ ಸಮಾನರಂತೆ ಹಂಚಿಕೊಂಡು ಅನುಭವಿಸುವವರು. ಹೀಗೆಂದೇ ಅವರಲ್ಲಿ ವೈಯಕ್ತಿಕವಾದ ಆಸೆ, ದುಷ್ಪ್ರೇರಣೆ, ಸ್ವಾರ್ಥ ಕಡಿಮೆ. "ಎಲ್ಲರಿಗಾಗಿ ತಾವು, ತಮ್ಮದೆನ್ನುವುದೆಲ್ಲಾ ಎಲ್ಲರದು" ಎಂಬ ಆಳವಾದ ನಂಬಿಕೆ ಅವರಲ್ಲಿತ್ತು. ಅವರ ಜೀವನ ವಿಧಾನದಲ್ಲಿ ಪ್ರಕೃತಿಯೊಡನೆ ಅವರು ರೂಢಿಸಿಕೊಂಡು ಬಂದ ಸಮನ್ವಯ ಎದ್ದು ಕಾಣುವಂತಿತ್ತು.

ಇಷ್ಟಾಗಿಯೂ ಅವರು ಒಂದು ವಿಷಯದಲ್ಲಿ ಹಿಂದುಳಿದಿದ್ದರು. ಅವರಲ್ಲಿ 'ಬರೆಹ' ಅಥವಾ ಲಿಪಿ ಹುಟ್ಟಿ ಬರಲಿಲ್ಲ. ಹೀಗಾಗಿ ಅವರ ಜನಾಂಗೀಯ ನೆನಪುಗಳು ತಲೆಮಾರಿನಿಂದ ತಲೆಮಾರಿಗೆ "ಶ್ರುತಿ-ಸ್ಮೃತಿ" ವಿಧಾನದಲ್ಲಿ



## ಹೇಗೆ ಬರೆಯುಲಿ?

ಹಕ್ಕಿಯೂ ಹಾರದ,
ವಿರಹಿ ನರಳದ ಕವಿತೆ,
ಉದ್ದುದ್ದ ಅಲೆದಾಡಿ
ದಾರಿಯಾಗದ ಕವಿತೆ
ನೀ ಬಳಿ ಇರುವಾಗ
ಹೇಗೆ ಬರೆಯಲಿ ನಾ
ಹಾಳೂರಿನ ಕವಿತೆ....?

✸ ಕನ್ನಿಕಾ ಹೆಗಡೆ

ವರ್ಗಾವಣೆಯಾಗಬೇಕಾಯಿತು. ಆದ್ದರಿಂದ ಅವರ ಜೀವನೋದ್ದೇಶಗಳು, ಆದರ್ಶಗಳು ಪ್ರಕೃತಿ-ಪರಿಸರದೊಂದಿಗೆ ಸರಿಸಮನಾಗಿ ಬೆರೆತು ಎಷ್ಟೇ ಉತ್ತಮವಾಗಿದ್ದರೂ ನಮಗೀಗ ಲಭ್ಯವಾಗದಾಗಿವೆ. ಅಷ್ಟೆ ಅಲ್ಲ, ಈ ಬೇಟೆಗಾರ ಜನ ಸಮುದಾಯಕ್ಕಿಂತಲೂ ತಾಂತ್ರಿಕವಾಗಿ ಮುಂದುವರೆದ ಶಸ್ತ್ರಸಜ್ಜಿತರಾದ ಐರೋಪ್ಯ ಆಗಂತುಕರೆದುರು ಇಂಡಿಯನ್ ಜನಾಂಗಗಳು ಆತ್ಮರಕ್ಷಣೆ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಅದೇ ಅವರ ಅವನತಿಯ, ವಿನಾಶದ ಕಾರಣವಾಯಿತು.

೫

ಇಬ್ಬರು ಅಪರಿಚಿತ ವ್ಯಕ್ತಿಗಳು ಪರಸ್ಪರ ಸಂಧಿಸಿದಾಗ, ಅವರ ವರ್ತನೆಯಲ್ಲಿ ಮೂರು ಸಾಧ್ಯತೆಗಳನ್ನು ಊಹಿಸಬಹುದು. ಸ್ನೇಹ-ವಿಶ್ವಾಸ-ನಂಬಿಕೆ, ಸಂಶಯ-ಭೀತಿ-ದ್ವೇಷ ಹಾಗೂ ಉದಾಸೀನ ಮತ್ತು ನಿರ್ಲಿಪ್ತತೆ. ಇದೇ

ರೀತಿಯಲ್ಲಿಯೇ ಎರಡು ಜನ ಸಮುದಾಯಗಳು ಪರಸ್ಪರ ಎದುರಾದಾಗಲೂ ವರ್ತನೆ ಹೆಚ್ಚು ಸಂಕೀರ್ಣವಾಗಿ ಪುನರಾವರ್ತನೆಯಾಗುತ್ತದೆ. ಅದರಲ್ಲಿಯೂ ಅವೆರಡು ಜನಸಮುದಾಯದಲ್ಲಿ ಸಾಮ್ಯತೆಗಿಂತಲೂ ವಿಷಮತೆಗೇ ಹೆಚ್ಚು ಅವಕಾಶವಿದ್ದರಂತೂ ಅವರ ಪ್ರತಿಕ್ರಿಯೆಗಳು ಇನ್ನಷ್ಟು ವಿಷಮವಾಗಿರುತ್ತವೆ.

ಭಾರತಕ್ಕೆ ಐರೋಪ್ಯ ನಾವಿಕ ಸಾಹಸಿಗಳು ಮೊದಲು ಬಂದಾಗ ಅವರು ಕಂಡಿದ್ದು ನಾಗರಿಕತೆಯಲ್ಲಿ, ರಾಜಕೀಯ ಸಂರಚನೆಯಲ್ಲಿ ತಮ್ಮಷ್ಟೇ ಅಥವಾ ತಮಗಿಂತಲೂ ಪ್ರಬಲರಾಗಿದ್ದ ರಾಜ ವ್ಯವಸ್ಥೆಯನ್ನು. ಅಂತೆಯೇ ಇಲ್ಲಿಗೆ ಅವರು ಸ್ನೇಹದ ಮುಖವಾಡದೊಂದಿಗೆ ವಾಣಿಜ್ಯ ವ್ಯಾಪಾರಗಳ ಸ್ನೇಹ ಸಂಬಂಧವನ್ನು ಕಟ್ಟಿಕೊಳ್ಳಲು ಅನುವಾದರು. ಅದೇ ಅಮೆರಿಕಕ್ಕೆ ಹೋದ ಬಿಳಿಯ ಜನರಿಗೆ ಎದುರಾದವರು ನಾಗರಿಕತೆಯ ಮೊದಲ ಹಂತದಲ್ಲಿದ್ದ ಮುಗ್ಧ ಇಂಡಿಯನ್ ಜನಾಂಗಗಳು. ಮೊದಲೇ ಹೇಳಿದಂತೆ, ಬೇಟೆಗಾರ ಆಯ್ದುಣ್ಣುವ ಅಲೆಮಾರಿ ಹಂತದಲ್ಲಿರುವ ಜನಾಂಗವನ್ನು ಅವರಿಗಿಂತಲೂ ನಾಗರಿಕತೆಯ ಮೇಲ್ಮಟ್ಟದಲ್ಲಿರುವ ಬೇಸಾಯಗಾರ-ವಸತಿಗಾರ ಜನಾಂಗಗಳು ತುಳಿದು ದಮನಮಾಡಿ ನಾಶಮಾಡುತ್ತವೆ. ಅದರಲ್ಲಿಯೂ ಅಮೆರಿಕದ ಆ ಹೊಚ್ಚ ಹೊಸ ನಾಡಿನಲ್ಲಿ, ವಿಸ್ತೃತವಾದ ಭೂಪ್ರದೇಶಕ್ಕಾಗಿ, ವಿಪುಲವಾದ ನೈಸರ್ಗಿಕ ಸಂಪತ್ತಿಗಾಗಿ ಬಿಳಿಯ ಆಗಂತುಕರು ಮೂಲ ನಿವಾಸಿಗಳಾದ ಕೆಂಪು ಇಂಡಿಯನ್ ಜನಗಳೊಂದಿಗೆ ಸ್ಪರ್ಧೆಗಿಳಿದದ್ದು ಆಶ್ಚರ್ಯವೇನಲ್ಲ.

ಅವರು ಉಪಯೋಗಿಸಿದ ತಂತ್ರಗಳು ಇಂಡಿಯನ್ ಜನರ ಕಲ್ಪನೆಗೂ ಮೀರಿದ್ದು ಸ್ನೇಹವೂ ತಂತ್ರವಾಗಿ ಯುದ್ಧತಂತ್ರದಷ್ಟೇ ಪರಿಣಾಮಕರವಾಗಿತ್ತು. ಧರ್ಮ ಹಾಗೂ ಧರ್ಮ ಪ್ರಚಾರಗಳೂ ತಮ್ಮ ಸಾಮ್ರಾಜ್ಯಾಕಾಂಕ್ಷೆಯ ಅಸಂಗ್ದಿದ್ಧ ತಂತ್ರಗಳಾಗಿದ್ದವು. ಇಂಡಿಯನ್ ಜನರ ಭಾಷೆ, ಸಂಸ್ಕೃತಿಗಳ ಮೇಲೆ ಅವರ ಆಕ್ರಮಣ ಮೊದಲ ತಂತ್ರವಾಯಿತು. ಯಾವುದಾದರೂ ಜನಸಮುದಾಯವನ್ನಾಗಲಿ, ಜನಾಂಗವನ್ನಾಗಲಿ ನಿರ್ವೀರ್ಯಗೊಳಿಸಬೇಕೆಂದರೆ ಮೊಟ್ಟ ಮೊದಲು ಅವರ ಭಾಷೆಯನ್ನು ನಿಃಸತ್ವಗೊಳಿಸಬೇಕು, ಅವರ ತಾಯ್ನುಡಿಯನ್ನು ನಿರ್ನಾಮ ಮಾಡಿ ಅದನ್ನು ಮರೆಯುವಂತೆ ಮಾಡಬೇಕು. ಇದೇ ಎಲ್ಲ ಸಾಮ್ರಾಜ್ಯಶಾಹಿ ಆಕ್ರಮಣಕಾರರು ಕಂಡುಕೊಂಡಿರುವ ತಥ್ಯ. (ನಮ್ಮ ಸ್ವಾತಂತ್ರ್ಯ ಸಂಗ್ರಾಮದ ಚರಿತ್ರೆಯನ್ನು ಗಮನಿಸಿದರೆ, ನಮ್ಮ ದೇಶಭಾಷೆಗಳಲ್ಲಿ ಪುನರುತ್ಥಾನವಾದಾಗ ಮಾತ್ರವೇ ನಮ್ಮ ಸ್ವಾತಂತ್ರ್ಯ ಹೋರಾಟಕ್ಕೆ ನಿಜವಾದ ತೀಕ್ಷ್ಣತೆ, ಧ್ಯೇಯೋದ್ದೇಶ ಸಾಧನೆಯ ಕ್ಷಮತೆ ಉಂಟಾಯಿತು ಎಂಬುದನ್ನು ಕಂಡುಕೊಳ್ಳಬಹುದು.) ತಮ್ಮ ಭಾಷೆಯನ್ನು, ಧರ್ಮವನ್ನು ಕಳೆದುಕೊಂಡ ದುರ್ಬಲರು ಯುದ್ಧದಲ್ಲಿ ಸೋತಾಗ ತಮ್ಮ ನೆಲವನ್ನಷ್ಟೇ ಕಳೆದುಕೊಳ್ಳುವುದಿಲ್ಲ, ಜೊತೆಗೆ ತಮ್ಮ ಸಾಂಸ್ಕೃತಿಕ ಸಾಧನೆಗಳನ್ನೂ ಕಳೆದುಕೊಳ್ಳುತ್ತಾರೆ, ಕೊನೆಗೆ ಜಗತ್ತಿನ ಇತಿಹಾಸದಿಂದ ತಮ್ಮ ಹೆಸರನ್ನೂ ಕಳೆದುಕೊಳ್ಳುತ್ತಾರೆ. ಇಂಡಿಯನ್ನರ ಅದೆಷ್ಟೋ ಬಣಗಳದು ಇದೇ ದುಃಸ್ಥಿತಿಯಾಗಿದೆ. ಮಧ್ಯ ಹಾಗೂ ದಕ್ಷಿಣ ಅಮೆರಿಕಗಳಲ್ಲಿ ವೈಭವೋಪೇತವಾಗಿ ಬಾಳಿ ಬೆಳಗಿದ ಅಜ್ಟೆಕ್, ಮಾಯಾ, ಇನ್‌ಕಾ ನಾಗರಿಕತೆಗಳು ಇಂದು ಹೇಳಹೆಸರಿಲ್ಲದಂತಾಗಿವೆ. ಬಾರ್ಥೋಲೋಮಿ ಡಿ ಲಾಸ್ ಕಾಸಾಸ್ (೧೫೫೨) ವರ್ಣಿಸಿದ್ದು ಹೀಗೆ: "ಹಿಸ್ಪಾನಿಯೋಲದಲ್ಲಿ (ಮೊಟ್ಟ ಮೊದಲು ಸ್ಪೇನ್ ಜನರು ಬಂದಾಗ) ಇದ್ದವರು ಮೂವತ್ತು ಲಕ್ಷಕ್ಕೂ ಹೆಚ್ಚು. ಈಗಿರುವುದು ಮುನ್ನೂರಕ್ಕೂ ಕಡಿಮೆ. 'ಐಲಂಡ್ ಆಫ್ ಜಯಂಟ್ಸ್'ನಲ್ಲಿ ಐವತ್ತು ಲಕ್ಷದಷ್ಟಿದ್ದರು. ಈಗ ಅಲ್ಲಿ ಹತ್ತು-ಹನ್ನೊಂದು ಜನರಿದ್ದಾರೆ. ಕ್ಯೂಬವಂತೂ ಜನನಾಶದಿಂದ ನಿರ್ಜನವಾಗಿದೆ." ಅವನ ಲೆಕ್ಕಾಚಾರದಂತೆ ಸ್ಪ್ಯಾನಿಷ್ ವಸಾಹತುಗಾರರು ಐದು ಕೋಟಿಗಿಂತಲೂ ಹೆಚ್ಚು ಜನರನ್ನು ನಾಶಗೊಳಿಸಿದ್ದಾರೆ. ಇದು ದಕ್ಷಿಣ

ಹಾಗೂ ಮಧ್ಯ ಅಮೆರಿಕಗಳ ಕತೆ. ಇಂಗ್ಲೀಷ್ ಮತ್ತು ಫ್ರೆಂಚ್ ವಸಾಹತುಗಾರರು ಉತ್ತರ ಅಮೆರಿಕದ ಭೂ ಪ್ರದೇಶದಲ್ಲಿ ಸುಮಾರು ಐದು ಲಕ್ಷ ಜನ ಇಂಡಿಯನ್ನರನ್ನು ಅಂದಾಜು ಮಾಡಿದ್ದರು. ಇಂದು ಅಳಿದುಳಿದ ಇಂಡಿಯನ್ ಜನಗಳ ಸಂಖ್ಯೆ ಅವರ ದುರಂತ ಇತಿಹಾಸಕ್ಕೆ ಸಾಕ್ಷಿಯಾಗಿದೆ.

ಅಮೆರಿಕದ ಹೊಸ ಜಗತ್ತನ್ನು ಪ್ರವೇಶಿಸಿದ ಐರೋಪ್ಯ ಜನಾಂಗಗಳು ಪೂರ್ವ ತೀರದಿಂದ ಪಶ್ಚಿಮ ತೀರದತ್ತ ಕ್ರಮೇಣವಾಗಿ ತಮ್ಮ ಪರಿಧಿಯನ್ನು ಒತ್ತರಿಸಿಕೊಂಡು ಸಾಗಿದವು. ಬಿಳಿಯರು ಇಂಡಿಯನ್ನರ ಮೇಲೆ ಈ ಮೊದಲು ಹೇಳಿದ ಮೂರೂ ಬಗೆಯ ತಂತ್ರಗಳನ್ನು ಪ್ರಯೋಗಿಸಿದರು. ವ್ಯಾಪಾರ ಮೊದಲ ವಿಧಾನವಾದರೆ, ಯುದ್ಧ ಹಾಗೂ ಧರ್ಮ ಪ್ರಸಾರಗಳು ಮಿಕ್ಕ ತಂತ್ರಗಳು. ೧೭ನೆಯ ಶತಮಾನದವರೆಗೂ ಇಂಡಿಯನ್ ಜನರು ಬೇಟೆಯಾಡಿ ತಂದುಕೊಡುತ್ತಿದ್ದ ಎಮ್ಮೆ-ಕಾಡೆಮ್ಮೆಗಳ ತೊಗಲು, ಮಿಂಕ್ ಮುಂತಾದ ವನ್ಯ ಪ್ರಾಣಿಗಳ ಚರ್ಮಗಳು ಯುರೋಪಿನ ಜನರಿಗೆ ಬಹಳ ಆಕರ್ಷಕವಾಗಿ ಕಂಡವು. ಅದಕ್ಕೆ ಬದಲಾಗಿ ಅವರು ಇಂಡಿಯನ್ನರಿಗೆ ಶಾಲುಗಳಂತಹ ವಸ್ತ್ರಗಳು, ಚಾಕು-ಚೂರಿ, ಕೈಗೊಡಲಿ, ಗಾಜಿನ ಮಣಿಗಳಂತಹ ಅಲ್ಪ ಬೆಲೆಯ ವಸ್ತುಗಳನ್ನು ಕೊಡುತ್ತಿದ್ದರು.

ಅವೆಲ್ಲಕ್ಕಿಂತಲೂ ಮಿಗಿಲಾಗಿ ಇಂಡಿಯನ್ ಜನರನ್ನು ಅವರು ತಮ್ಮ ಜಾಲದಲ್ಲಿ ಕೆಡವಿದ್ದು 'ರಮ್' ಎಂಬ ಪ್ರಬಲ ಮದ್ಯದಿಂದ. 'ರಮ್' ಕುಡಿತದ ಅಮಲಿನಲ್ಲಿ ಇಂಡಿಯನ್ ಬಣಗಳ ಮುಖಂಡರು ಸಾವಿರಾರು ಎಕರೆಯಷ್ಟು ಭೂಪ್ರದೇಶವನ್ನು ಅಮೆರಿಕನ್ ವ್ಯಾಪಾರಿಗಳಿಗೆ ಮಾರಿಬಿಡುತ್ತಿದ್ದರು. ಕುಡಿದ ಅಮಲಿನ ಮುಖಂಡ ಹೀಗೆ ವಾಗ್ದಾನ ಮಾಡಿದ್ದೇ ತಡ, ಅಮೆರಿಕನ್ ರೈತ-ವ್ಯಾಪಾರಿ ಮರುದಿನವಾಗುವ ಹೊತ್ತಿಗೆ ಅಷ್ಟೂ ಪ್ರದೇಶದ ಸುತ್ತ ಬೇಲಿ ಹಾಕಿ ಅದನ್ನು ಕೈವಶ ಮಾಡಿಕೊಳ್ಳುತ್ತಿದ್ದ ಹಾಗೂ ಆ ಪ್ರದೇಶದಿಂದಲೇ ಇಂಡಿಯನ್ ಜನರನ್ನು ಒಕ್ಕಲೆಬ್ಬಿಸುತ್ತಿದ್ದ.

ಈ ಭೂಮಿ ಹರಣದ ಬಗ್ಗೆ ಅಮೆರಿಕದ ವಸಾಹತುಗಾರರಲ್ಲೇ ಭಿನ್ನಾಭಿಪ್ರಾಯ ಉಂಟಾಗಿತ್ತು. ಅಮೆರಿಕದ ಸಂವಿಧಾನ ಕರ್ತೃವೂ ಸ್ವಾತಂತ್ರ್ಯ ಸೇನಾನಿಯೂ, ಆ ದೇಶದ ಮೂರನೆಯ ರಾಷ್ಟ್ರಾಧ್ಯಕ್ಷನೂ ಆಗಿದ್ದ ಥಾಮಸ್ ಜೆಫರ್‌ಸನ್ ಕೂಡ ಇಂಡಿಯನ್ನರಿಂದ ಜಮೀನು ಅಪಹರಿಸುವುದು ಬಿಳಿಯರ ಹಕ್ಕೆಂದು ಭಾವಿಸಿದ್ದ. ಎಲ್ಲಿಯವರೆಗೆ ಇಂಡಿಯನ್ ಜನರು ಬಿಳಿಯರನ್ನು ಅನುಕರಿಸಿ ಸಣ್ಣದಾಗಿ ಬೇಸಾಯ, ಹಂದಿ ಸಾಕಣೆ ಮಾಡಿಕೊಂಡು ಇರುತ್ತಾರೋ ಅಲ್ಲಿಯವರೆಗೆ ಅವರು ಹತ್ತಿರದಲ್ಲಿ ವಾಸಿಸಬಹುದು. ಆದರ ಬದಲು ತಮ್ಮ ಪೂರ್ವಿಕರ ಧರ್ಮಾಚರಣೆಯನ್ನು ನಡೆಸುತ್ತಾ, ಬೇಟೆ-ಅಲೆಮಾರಿ ಜೀವನಕ್ಕೆ ಹಿಂದಿರುಗಿದರೆ ಅವರನ್ನು ಕಾಡುಪ್ರಾಣಿಗಳಂತೆ ಬೇಟೆಯಾಡಿ ಹೊಡೆದೋಡಿಸಬೇಕು ಹಾಗೂ ಅವರ ಪ್ರದೇಶವನ್ನು ಬಿಳಿಯರು ಆಕ್ರಮಿಸಿಕೊಳ್ಳಬೇಕು. ಹೀಗೆ ಮಾಡುವುದು ಬಿಳಿಯ ಹೆಂಗಸರು ಮಕ್ಕಳ ಸುರಕ್ಷಿತತೆಗಾಗಿ ಎಂದು ಉಪದೇಶ ಮಾಡಿದ್ದ ಆತ. ಅವನು ಅಧ್ಯಕ್ಷನಾದ ನಂತರ ಸ್ಥಳಾಂತರಗೊಂಡ ಹಾಗೂ ನಶಿಸಿಹೋಗುತ್ತಿರುವ ಇಂಡಿಯನ್ ಬಣಗಳ ಜಮೀನೆಲ್ಲವೂ ಸರಕಾರಕ್ಕೆ ಸೇರಬೇಕೆಂದೂ ಅದು ಬಿಳಿಯ ವಸಾಹತುಗಾರರಿಗೆ ಮಾತ್ರ ಹಂಚಿಹೋಗಬೇಕೆಂದೂ ಕಾನೂನನ್ನಾತ ತಂದ. ಇಂಡಿಯನ್ ಜನಾಂಗಗಳ ಕ್ಷೇಮಾಭಿವೃದ್ಧಿಗಾಗಿ ನೇಮಕಗೊಂಡಿದ್ದ ಸರಕಾರೀ ಪ್ರತಿನಿಧಿಗಳು ಇಂಡಿಯನ್ ಮುಖಂಡರಿಗೆ ಮದ್ಯಪಾನದ ಚಟ ಹಚ್ಚಿ ಅವರ ಕಡೆಯಿಂದ ತಮ್ಮ ಭೂಪ್ರದೇಶದ ಸ್ವಾಮ್ಯವನ್ನು ಮೋಸದಿಂದಲಾದರೂ ಗಳಿಸಿಕೊಳ್ಳುವಂತೆ ಅವನು ಪ್ರೋತ್ಸಾಹಿಸಿದ. 'ರಮ್' ಮದ್ಯದ ಮಾರಾಟ ಅನಿರ್ಬಂಧಿತವಾಗಿ ಇಂಡಿಯನ್ ಬಣಗಳಲ್ಲಿ ನಡೆಯುವಂತೆ ಜೆಫರ್‌ಸನ್ನನ ಅನುಯಾಯಿಗಳು ನೋಡಿಕೊಂ

ಡರು. ಸೆನೆಕ ಇಂಡಿಯನ್ ಬಣದ ಮುಖಂಡ ಬೋಸ್ಸನ್ನಿನಲ್ಲಿ ಮಿಷನರಿಯೊಡನೆ ಹೇಳಿದ ಈ ಮಾತು ಎಷ್ಟು ಹೃದಯವಿದ್ರಾವಕವಾಗಿದೆ: "ನಿಮ್ಮ ಪೂರ್ವಿಕರು ಈ ಮಹಾಸಾಗರವನ್ನು ದಾಟಿ ಈ ವಿಶಾಲವಾದ ದ್ವೀಪಕ್ಕೆ ಬಂದು ಸೇರಿದರು. ಅವರು ಅಲ್ಪ ಸಂಖ್ಯಾತರಾಗಿದ್ದರು. 'ನಮ್ಮ ದೇಶದ ದುಷ್ಟ ಜನರ ಸಹವಾಸದಿಂದ ಪಾರಾಗಿ ನಿರ್ಭಯವಾಗಿ ನಮ್ಮ ಧರ್ಮಾಚರಣೆ ಯನ್ನು ಮಾಡಲೆಂದು ಇಲ್ಲಿಗೆ ಬಂದಿದ್ದೇವೆ. ನಮಗೊಂದಿಷ್ಟು ಸ್ಥಳ ಸಿಕ್ಕಿದರೆ ಸಾಕು, ಎಂದು ಅವರು ಹೇಳಿಕೊಂಡಿದ್ದರು. ನಾವು ಅವರಿಗೆ ಕನಿಕರ ತೋರಿಸಿದೆವು. ಅವರ ಪ್ರಾರ್ಥನೆಯನ್ನು ಮನ್ನಿಸಿದೆವು. ನಾವು ಅವರಿಗೆ ತಿನ್ನಲು ಕಾಳು, ಮಾಂಸ ಕೊಟ್ಟೆವು. ಅದಕ್ಕೆ ಬದಲಾಗಿ ಅವರು ನಮಗೆ ವಿಷವನ್ನು (ಎಂದರೆ ರಮ್ ಮದ್ಯ ವನ್ನು) ಕೊಟ್ಟರು."

ಅಮೆರಿಕನ್ನರಲ್ಲಿಯೂ ತಮ್ಮ ಇಂಡಿಯನ್ ನೀತಿಯ ಅನೈತಿಕತೆಯನ್ನು ಧೈರ್ಯವಾಗಿ ಪ್ರತಿ ಭಟಿಸಿದವರಿದ್ದರು. ಅವರಲ್ಲಿ ಜೆಫರ್‌ಸನ್ನನ ಮಿತ್ರ, ಸುಪ್ರೀಂ ಕೋರ್ಟಿನ ಮುಖ್ಯ ನ್ಯಾಯಾ ಧೀಶ ಜಾನ್ ಮಾರ್ಷಲ್ ಉಲ್ಲೇಖನಾರ್ಹ. ಅವನು ಚೆರಕೀ ಇಂಡಿಯನ್ ಜನಾಂಗದವರು ಜಾರ್ಜಿಯಾ ರಾಜ್ಯ ಸರ್ಕಾರವು ತಮ್ಮನ್ನು ತಮ್ಮ ಮೀಸಲು ಪ್ರದೇಶದಿಂದ ಉಚ್ಚಾಟಿಸುತ್ತಿ ರುವ ಬಗ್ಗೆ ತಂದ ವ್ಯಾಜ್ಯದಲ್ಲಿ (೧೮೩೧ರಲ್ಲಿ) ಹೀಗೆ ತೀರ್ಪು ಕೊಟ್ಟ: "ಒಂದು ಕಾಲಕ್ಕೆ ಈ ಜನರು ಬಹುಸಂಖ್ಯಾತರಾಗಿದ್ದರು, ಶಕ್ತಿಶಾಲಿಗ ಳಾಗಿದ್ದರು ಹಾಗೂ ನಿಜವಾಗಿಯೂ ಸ್ವತಂತ್ರರಾ ಗಿದ್ದರು. ನಮ್ಮ ಪೂರ್ವಜರು ಮೊಟ್ಟ ಮೊದಲು ಅವರನ್ನು ಸಂಧಿಸಿದಾಗ ಅವರೊಂದು ವಿಶಾಲ ವಾದ ಭೂಪ್ರದೇಶದ ಮೇಲೆ ಶಾಂತಿ-ಸ್ವಚ್ಛಂದ ದಿಂದ ಜೀವಿಸುತ್ತಿದ್ದರು. ಅನಂತರ ಕ್ರಮೇಣ ವಾಗಿ ನಮ್ಮವರ ಚಾಣಾಕ್ಷ ತಂತ್ರ, ನಮ್ಮ ಕುಶಲಕಲೆ ಹಾಗೂ ಶಸ್ತ್ರಾಸ್ತ್ರಗಳ ಬಲ್ಮೆಯಿಂದ ಕುಸಿದು ಕಂಗೆಟ್ಟು, ತಮ್ಮ ಭೂಸ್ವತ್ತುಗಳನ್ನು ಒಂದಾದ ಮೇಲೊಂದು ಸಂಧಿಯ ಕರಾರುಗ ಳಿಗೆ ಸಿಕ್ಕಿ ಒಪ್ಪಿಸುತ್ತಾ ಬಂದಿದ್ದಾರೆ. ಪ್ರತಿ ಯೊಂದು ಕರಾರಿನಲ್ಲಿಯೂ ಇನ್ನು ಮುಂದೆ ಅವರಿಗೆ ಉಳಿದಿರುವ ಭೂಪ್ರದೇಶದ ಬಗ್ಗೆ ನಮ್ಮವರು ಯಾವ ಕೋರಿಕೆಯನ್ನೂ ಮಾಡು ವುದಿಲ್ಲವೆಂಬ ಆಶ್ವಾಸನೆಗಳನ್ನು ಸೇರಿಸುತ್ತಲೇ ಬಂದಿದ್ದಾರೆ. ಹಿಂದಿನ ಅವರ ವಿಸ್ತಾರವಾದ ಭೂಸ್ವಾಮಿತ್ವಕ್ಕೆ ಹೋಲಿಸಿದರೆ ಈಗ ಅವರಿಗೆ ಉಳಿದಿರುವ ಪ್ರದೇಶ ಅವರಿಗೆ ತೀರ ಕನಿಷ್ಠಮ ಟ್ಟದ ಜೀವನಕ್ಕೆ ಸಾಲವಷ್ಟಿದೆ. ಈಗ ಕೊನೆಯ ದಾಗಿ ತಮಗೆ ಉಳಿದಷ್ಟು ಪ್ರದೇಶವನ್ನಾದರೂ ಉಳಿಸಿಕೊಡಬೇಕೆಂಬುದೇ ಅವರ ಪ್ರಾರ್ಥ ನೆಯ ವಿಷಯ." ಜಾನ್ ಮಾರ್ಷಲ್‌ನ ಮಾನ ವೀಯ ತೀರ್ಪನ್ನು ಅಮೆರಿಕದ ಫೆಡರಲ್ ಸರ ಕಾರ ತಳ್ಳಿ ಹಾಕಿತೆಂದು ಬೇರೆ ಹೇಳಬೇಕಾಗಿಲ್ಲ.

ಸ್ನೇಹವನ್ನು ತಂತ್ರವಾಗಿ ಪ್ರಯೋಗಿಸಿ ಅಮೆರಿಕನ್ ವಸಾಹತುಗಾರರು ವಿಶಾಲವಾದ ಭೂಸಂಪತ್ತನ್ನು ಕಬಳಿಸಿದರು. ಸ್ನೇಹಕ್ಕೆ ಮಣಿ ಯದ ಇಂಡಿಯನ್ ಬಣಗಳ ಮೇಲೆ ಯುದ್ಧ ಹೂಡುವುದಂತೂ ಕೊನೆಯ ಹಂತ. ಅದಕ್ಕೂ ಮೊದಲು ಇಂಡಿಯನ್ ಜನರನ್ನು ಸೈತಾನನ ಅನುಯಾಯಿಗಳು, ಬರ್ಬರ ಅನಾಗರಿಕ ಪಶು ಸಮಾನರು, ರಕ್ತ ಪಿಪಾಸುಗಳು, ಕೊಲೆಗಡು ಕರು, ಬಿಳಿಯ ಹೆಂಗಸರು ಮಕ್ಕಳನ್ನು ಅಮಾನು ಷವಾಗಿ ಚಿತ್ರಹಿಂಸೆಗೈದು ಕೊಲ್ಲುವ ನೀಚರು ಎಂದೆಲ್ಲಾ ಅಪಪ್ರಚಾರ ನಡೆದಿತ್ತು. "ನಮ್ಮ ಹೆಂಗಸರು ಮಕ್ಕಳನ್ನು ಇಂಡಿಯನ್ನರ ಟೊಮ ಹಾಕ್ (ಕತ್ತಿ) ಮತ್ತು ಮುಂದಲೆಯನ್ನು ಸೀಳಿ ತೆಗೆವ ಚೂರಿಯಿಂದ ಉಳಿಸಿಕೊಳ್ಳಬೇಕಾದರೆ ಈ ದೇಶವನ್ನು ನಾವು ಗೆದ್ದುಕೊಳ್ಳಲೇಬೇಕು" ಎಂದು ಜೆಫರ್‌ಸನ್ ಹೇಳುತ್ತಿದ್ದ. ಇಷ್ಟಕ್ಕೂ ಅಪಪ್ರಚಾರವೂ ಯುದ್ಧತಂತ್ರದ ಪೂರ್ವಭಾ ಗವೇ ಅಲ್ಲವೆ? ಇಂಡಿಯನ್ನರನ್ನು ಬರ್ಬರ, ಅನಾಗರಿಕ, ಹೇಡಿ, ಪಶುಗಳು ಎಂದು ಕರೆ ದರೂ ಅಮೆರಿಕನ್ ಸೇನೆಯ ಜನರಲ್‌ಗಳ ಮನಸ್ಸಿನಲ್ಲಿ ಅವರ ಬಗ್ಗೆ ಅಸಾಧಾರಣ ಗೌರವ, ಅಭಿಮಾನಗಳು ಇದ್ದೇ ಇದ್ದವು. ಇಂಡಿಯನ್

ಬಣಗಳಲ್ಲಿ “ಧರ್ಮಯುದ್ಧ”ದ ಕಲ್ಪನೆ ಆಳವಾಗಿ ಮೂಡಿತ್ತು. ಅವರು ಬೇಟೆಗಾರರು, ತಮ್ಮ ನಾಡಿನ ಸಕಲ ಭೂಭಾಗವನ್ನು ನೋಡಿ ತಿಳಿದವರು. ತಮ್ಮ ಜನರಿಗಾಗಿ, ತಮ್ಮ ಬಣದ ಉಳಿವಿಗಾಗಿ ಪ್ರತಿಯೊಬ್ಬರೂ ಸಮರದಲ್ಲಿ ಭಾಗವಹಿಸಿದ್ದವರು. ಅವರಲ್ಲಿನ ಶಿಸ್ತು ಜನಾಂಗೀಯ ಸ್ವಭಾವವಾಗಿ ರಕ್ತದಲ್ಲಿ ಬೆರೆತಿತ್ತು. ಅವರದು 'ಗೆರಿಲ್ಲಾ' ತಂತ್ರ. ಸಣ್ಣ ಸಣ್ಣ ಸ್ವಯಂ ಪ್ರೇರಿತ ತಂಡವಾಗಿ ಹೊರಟು, ಹೊಂಚು ಕಾಯ್ದು ಬಿಳಿಯ ಸೈನಿಕರು ವೈಮರೆತು ಮಲಗಿರುವಾಗ ಒಮ್ಮಿಂದೊಮ್ಮೆಗೇ ದಾಳಿ ಮಾಡಿ ಯೋಧರನ್ನಷ್ಟೇ ಕಡಿದು ಕೊಂದು ಅವರ ಮುಂದಲೆಯನ್ನು ಸೀಳಿ ತೆಗೆದುಕೊಂಡು ಹೋಗುತ್ತಿದ್ದರು. ಅಮೆರಿಕನ್ ಸೇನಾಧಿಕಾರಿ ಕರ್ನಲ್ ಜೇಮ್ಸ್ ಸ್ಮಿತ್ (೧೭೯೯) ಹೇಳುವಂತೆ ರಣರಂಗದಲ್ಲಿ ಒಬ್ಬ ಇಂಡಿಯನ್ ಸತ್ತರೆ ಅದಕ್ಕೆ ಪ್ರತಿಯಾಗಿ ಹತ್ತು ಜನ ಅಮೆರಿಕನ್ ಸೈನಿಕರು ಹತರಾಗುತ್ತಿದ್ದರು. ಇಷ್ಟೆಲ್ಲ ವೀರಾವೇಶದಿಂದ ಹೋರಾಡಿದರೂ ಇಂಡಿಯನ್ ಬಣಗಳು ಸಂಖ್ಯೆಯಲ್ಲಿ ಸೀಮಿತವಾಗಿದ್ದವು. ಅಲ್ಲದೆ ಯುದ್ಧದಲ್ಲಿ ಹತಾಹತರಾದಂತೆ ಇನ್ನಷ್ಟು ಇಳಿಮುಖವಾಗುತ್ತಿದ್ದವು. ಇದಕ್ಕೆ ಬದಲಾಗಿ ಅಮೆರಿಕದ ಹೊಸ ನಾಡಿಗೆ ಯುರೋಪಿನಿಂದ ತರಂಗೋಪಾದಿಯಲ್ಲಿ ಬಿಳಿಯ ವಲಸೆಗಾರರು ಬರುತ್ತಿದ್ದರು ಹಾಗೂ ಇಂಡಿಯನ್ನರ ಮೇಲಿನ ಸಮರದಲ್ಲಿ ಹೊಸದಾಗಿ ಸೇರಿಕೊಳ್ಳುತ್ತಿದ್ದರು. ಅವರೆಲ್ಲರೂ ಹೊಸನಾಡಿನಲ್ಲಿ ಬೇಸಾಯಮಾಡಲೆಂದು ಕಾಡು ಸವರಿ ಬಯಲು ಮಾಡುತ್ತಿದ್ದರು. ಇದರಿಂದಾಗಿ ಇಂಡಿಯನ್ನರಿಗೆ ತಲೆಮರೆಸಿಕೊಳ್ಳಲೂ ಜಾಗವಿರುತ್ತಿರಲಿಲ್ಲ. ಬೇಟೆಯ ಪ್ರಾಣಿಗಳು ದೊರಕದೆ ಅವರು ದೂರ ದೂರಕ್ಕೆ ಹೋಗಬೇಕಾಗಿತ್ತು. ಹೊಸದಾಗಿ ಬಂದ ಬಿಳಿಯರು ಇಂಡಿಯನ್ ಬಣಗಳಿಗೆ ಹೊಸದೆನಿಸುವ, ಅಪಾಯಕರವಾದ ರೋಗಾಣುಗಳನ್ನೂ, ಕಾಯಿಲೆಗಳನ್ನೂ ತಂದರು. ಸಿಡುಬು, ಕಾಲರಾ, ಮಲೇರಿಯಾ, ಸಿಫಿಲಿಸ್ ಮುಂತಾದ




ರೋಗಗಳು ರೋಗನಿರೋಧಕ ಶಕ್ತಿಯನ್ನು ಬೆಳೆಸಿಕೊಳ್ಳುತ್ತಿದ್ದ ಇಂಡಿಯನ್ ಜನರನ್ನು ಆಹುತಿ ತೆಗೆದುಕೊಂಡವು. ಅವರ ಸಂಖ್ಯೆ ಕಡಿಮೆಯಾದಂತೆ ಅಮೆರಿಕನ್ ವಸಾಹತುಗಾರರ ಭೂದಾಹ ಹೆಚ್ಚುತ್ತಾ ಹೋಯಿತು. ಅವರು ಇಂಡಿಯನ್ನರ ಪ್ರದೇಶಗಳ ಮೇಲೆ ತಾವಾಗಿಯೇ ದಂಡೆತ್ತಿ ಹೋಗಿ ದಾಳಿ ಮಾಡುವ ಪ್ರಸಂಗಗಳೂ ಹೆಚ್ಚಿದವು. ಉದಾಹರಣೆಗೆ ೧೭೫೫ರಲ್ಲಿ ಜನರಲ್ ಬ್ರಾಡಕ್‌ನ ದಾಳಿಯಿಂದ ಹಿಡಿದು ೧೭೯೧ರಲ್ಲಿ ಜನರಲ್ ಸೆಂಟ್ ಕ್ಲೇರ್‌ನ ದಾಳಿಯವರೆಗೆ ಇಪ್ಪತ್ತೆರಡು ಪ್ರಮುಖವಾದ ಸಮರಗಳು ಜೇಮ್ಸ್ ನದಿಯ ಸುಮಾರು ಮೂವತ್ತು ಮೈಲಿಯ ಪ್ರದೇಶದಲ್ಲಿ ನಡೆದವು. ಇದರ ಜೊತೆಗೆ ಆಗಿಂದಾಗ್ಗೆ ನಡೆಯುತ್ತಿದ್ದ ಸಣ್ಣಪುಟ್ಟ ಕದನಗಳು ಅವೆಷ್ಟೋ. ಇಂಡಿಯನ್ ಜನರು ನಿಶ್ಚಿಂತರಾಗಿ ಇರದಂತೆ ಅಮೆರಿಕದ ವಸಾಹತುಗಾರರು ನೋಡಿಕೊಂಡರು. ಪ್ರತಿ ಬಾರಿಯೂ ಕದನದ ಕೊನೆಗೊಂದು ಕರಾರು. ಆ ಕರಾರಿನಂತೆ ಇಂಡಿಯನ್ನರು ತಮ್ಮ ಪ್ರದೇಶವನ್ನು ಬಿಟ್ಟುಕೊಟ್ಟು ದೂರ ದೂರಕ್ಕೆ ನೀರು-ನೆರಳಿಲ್ಲದ ಪ್ರದೇಶಕ್ಕೆ ನಿರ್ವಸಿತರಾಗಿ ಹೋಗಿ ಸೇರಬೇಕು. ಕೆಲವೇ ದಿನಗಳಲ್ಲಿ ವಸಾಹತುಗಾ

ರರು ತಮ್ಮ ಪ್ರದೇಶದ ಪಶ್ಚಿಮದ ಗಡಿಯನ್ನು ಒತ್ತರಿಸಿಕೊಂಡು ಪುನಃ ಇಂಡಿಯನ್ ಜನರ ಸಂಪರ್ಕಕ್ಕೆ ಬರಬೇಕು. ಮತ್ತೊಮ್ಮೆ ಇವೆಲ್ಲಾ ಪ್ರಸಂಗಗಳೂ ಪುನರಾವರ್ತನೆಗೊಳ್ಳಬೇಕು. ೧೯೧೫ರಷ್ಟು ಇತ್ತೀಚೆಗೆ ನಡೆದ "ಉಟಾ ಸಮರ" ಇದಿಷ್ಟಕ್ಕೂ ತಕ್ಕ ಉದಾಹರಣೆಯಾಗಿದೆ. ಉಟಾ ಪರ್ವತದ ಮೀಸಲು ಪ್ರದೇಶದಲ್ಲಿದ್ದ ೪೮೦,೦೦೦ ಎಕರೆ ಪ್ರದೇಶದಲ್ಲಿ ೧೦,೦೦೦ ಎಕರೆಗಷ್ಟಾದರೂ ಮಳೆಯಾದರೆ ವಾಸಯೋಗ್ಯ. ಅದರ ಮೇಲೆಯೂ ಕಣ್ಣುಹಾಕಿದ ಅಮೆರಿಕನ್ ದನಗಾಹಿಗಳು ಕ್ಷುಲ್ಲಕವಾದ ನೆಪವೊಡ್ಡಿ ಅಲ್ಲಿದ್ದ ಉಟಾ ಇಂಡಿಯನ್‌ರನ್ನು ಹೊರಗೆ ಹಾಕಲು ಒಂದು ಯುದ್ಧವನ್ನೇ ಹೂಡಿಸಿದರು.

ಧರ್ಮ ಪ್ರಸಾರವೂ ಸಾಮ್ರಾಜ್ಯವಿಸ್ತರಣೆಯಲ್ಲಿ ಒಂದು ಪ್ರಮುಖ ತಂತ್ರವಾಗಬಲ್ಲದೆಂಬುದು ಎಲ್ಲರಿಗೂ ಗೊತ್ತು. ಹೊಸ ಭೂಪ್ರದೇಶಕ್ಕೆ ಬಂದು ಹೊಸ ಹೊಸ ಜನಾಂಗಗಳನ್ನು ತಮ್ಮ ದೇಶದ ಅಧೀನವಾಗಿ ಮಾಡಿಕೊಳ್ಳಬೇಕೆಂಬ ಉತ್ಸಾಹ ಸ್ಪೇನ್ ಮತ್ತು ಪೋರ್ಚುಗಲ್ ಧರ್ಮಪ್ರಸಾರಕರಿಗೆ ಇದ್ದಷ್ಟು ಇಂಗ್ಲಿಷ್ ಧರ್ಮ ಪ್ರಸಾರಕರಿಗಿರಲಿಲ್ಲ. ಇಂಗ್ಲೀಷ್ ವಸಾಹತುಗಾರರಾದರೋ ಕಠೋರವಾದ ಪ್ಯೂರಿಟನ್ ಸಂಪ್ರದಾಯಕ್ಕೆ ಸೇರಿದವರು. ತಮ್ಮಂತೆಯೇ ವಲಸೆ ಬಂದಿದ್ದ ಇಂಗ್ಲಿಷ್ ಜನರ "ಆತ್ಮೋದ್ಧಾರ"ವೊಂದೇ ಸಾಕು. ತಮಗೇನೂ ಸಂಬಂಧವಿಲ್ಲದ ಇಂಡಿಯನ್ ಬಣಗಳ ಬಗ್ಗೆ ತಾವು ಮಾಡಬೇಕಾದುದು ಏನೂ ಇಲ್ಲ ಎಂದು ಭಾವಿಸಿ ಅವರು ನಿರ್ಲಿಪ್ತರಾಗಿದ್ದರು. ಇಂಗ್ಲಿಷ್ ವ್ಯಾಪಾರಿಗಳು ಮುಂದೆ ಮುಂದೆ ಒತ್ತರಿಸಿ ಹೋಗಿ ಪ್ರದೇಶ ವಿಸ್ತಾರ ಮಾಡಿದ್ದಂತೆ ಅವರನ್ನು ಹಿಂಬಾಲಿಸಿ ಧರ್ಮಪ್ರಸಾರಕರು ಹೋಗುತ್ತಿದ್ದರು. ಅಲ್ಲದೆ ಇಂಡಿಯನ್ ಜನರ ದೇವರ ಮತ್ತು ದೈವಿಕತೆಯ ಕಲ್ಪನೆ ಇಂಗ್ಲಿಷ್ ಪಾದ್ರಿಗಳಿಗೆ ಅಸಹನೀಯವಾಗಿರುತ್ತಿತ್ತು. ಬೋಸ್ಟನ್ ಮಿಷನರಿಗೆ ಸೆನಕ ಇಂಡಿಯನ್ ಬಣದ ಮುಖಂಡ ೧೮೦೫ರಲ್ಲಿ ಹೇಳಿದಂತೆ "ನಿಮ್ಮ ಧರ್ಮವು ನಿಮ್ಮ ಜನರನ್ನು ಒಳ್ಳೆಯವರನ್ನಾಗಿ ಮಾಡುತ್ತದೆ, ಅವರು ಇಂಡಿಯನ್ ಜನರಿಗೆ ಸೇರಿದ ಭೂಮಿಯನ್ನು ಮೋಸ, ವಂಚನೆಯಿಂದ ಲಪಟಾಯಿಸದಂತೆ ಮಾಡುತ್ತದೆ ಎಂದು ನಮಗೆ ವಿಶ್ವಾಸ ಬಂದರೆ ನಾವು ನಿಮ್ಮ ಧರ್ಮವನ್ನು ಒಪ್ಪುತ್ತೇವೆ." ಆ ಮಿಷನರಿ ಅಂತಹ ಆಶ್ವಾಸನೆಯನ್ನೇನು ಕೊಟ್ಟಾನು ?

ಆದರೆ ಫ್ರೆಂಚ್, ಸ್ಪ್ಯಾನಿಷ್ ಹಾಗೂ ಪೋರ್ಚುಗೀಸ್ ಪಾದ್ರಿಗಳ ತಂತ್ರ ಭಿನ್ನವಾಗಿತ್ತು. ತಮ್ಮ ಕಠೋರ, ಸರಳ ಜೀವನಕ್ರಮಕ್ಕೆ ಹೆಸರಾದ ಸೇಂಟ್ ಫ್ರಾನ್ಸಿಸ್‌ನ ಅನುಯಾಯಿಗಳು ಮಧ್ಯ ಮತ್ತು ದಕ್ಷಿಣ ಅಮೆರಿಕಗಳಲ್ಲಿ ಧರ್ಮಪ್ರಸಾರಕ್ಕಾಗಿ ಹೋದರು. ಅವರಿಗೆ ಅಲ್ಲಿನ ಇಂಡಿಯನ್ನರನ್ನು ನೋಡಿ ಆತ್ಯಾಶ್ಚರ್ಯವಾಯಿತು. ತಮ್ಮ ಸರಳತೆ, ಸ್ವಯಂಸ್ವೀಕೃತ ದಾರಿದ್ರ್ಯದ ಬಗ್ಗೆ ಅವರಿಗಿದ್ದ ಅತ್ಯಧಿಕ ಹೆಗ್ಗಳಿಕೆ ಆ ಇಂಡಿಯನ್ನರ ಬರಿಗಾಲು, ಬರಿದಲೆ, ಅರೆಹೊಟ್ಟೆಯ ಜೀವನ, ಬಿಲದಂತಹ ಗುಡಿಸಲವಾಸವನ್ನು ನೋಡಿ ನುಚ್ಚು ನೂರಾಯಿತು. ತಮ್ಮ ಕಲ್ಪನೆಗೂ ಮೀರಿದ ದಾರಿದ್ರ್ಯ ಜೀವನವನ್ನು ನಡೆಸುತ್ತಿರುವ ಜನರಿಗೆ "ತ್ಯಾಗ, ಸರಳತೆ"ಯ ಉಪದೇಶವನ್ನು ಅದೆಂತು ಕೊಡುವುದು ? ಅಂತೆಯೇ ಆ ಇಂಡಿಯನ್ ಜನರ ಮನವನ್ನು ಗೆಲ್ಲಲು ಅವರು ತಮ್ಮ ದೇಶದ ಸೇನಾನಿಗಳ, ಅಧಿಕಾರಿಗಳ ದುರಾಚಾರವನ್ನು, ದುರಾಡಳಿತವನ್ನು ಖಂಡಿಸುತ್ತಿದ್ದರು. ಅವರಿಗೆ ನ್ಯಾಯ ಕೊಡಿಸುವ ಸಲುವಾಗಿ ತಮ್ಮ ಮೇಲಿನವರ ಮೇಲೆ ಒತ್ತಡ ತರುತ್ತಿದ್ದರು. ಇದನ್ನು ಖಂಡಿಸಿದ ಸೇನಾಧಿಕಾರಿಗಳಿಗೆ ಫ್ರಾನ್ಸಿಸ್ಕನ್ ಪಾದ್ರಿ ಟೋರಿಬಿಯೋ ಮೊಟಾಲಿನೋ ಬರೆದ ಉತ್ತರ ಹೀಗಿದೆ: "ನಾವು ಈ ಇಂಡಿಯನ್ ಬಣದವರನ್ನು ರಕ್ಷಿಸದಿದ್ದರೆ, ನಿಮ್ಮ ಕೈಕೆಳಗೆ ದುಡಿಯಲು ಯಾರೂ ಸಿಗುವುದಿಲ್ಲ. ನಾವು ಅವರ ಬಗ್ಗೆ ಪಕ್ಷಪಾತ ಮಾಡುತ್ತಿರುವುದಾದರೆ ಅದು ನಿಮ್ಮ ಸಲುವಾಗಿಯೇ.ಅವರನ್ನು ನಿಮ್ಮ

ಸೇವೆಗಾಗಿ, ನಿಮ್ಮ ಸೇವಕರಾಗಲೆಂದು ನಾವು ಕಾಪಾಡಿಕೊಂಡು ಬರುತ್ತಿದ್ದೇವೆ.... ಆವರಲ್ಲಿ ಏನೂ ಉಳಿದಿಲ್ಲ. ನೀವು ಆವರನ್ನೂ ಮುಗಿಸಿದರೆ, ನಿಮ್ಮ ಜೀತ ಮಾಡುವವರಾರು ?"

ವಾಣಿಜ್ಯ, ಸ್ನೇಹ, ಯುದ್ಧ, ವೈರ, ಧರ್ಮ ಹಾಗೂ ಸಹಾನುಭೂತಿ ಎಲ್ಲವನ್ನೂ ತಂತ್ರವನ್ನಾಗಿಸಿಕೊಂಡು ಅಮೆರಿಕನ್ ವಸಾಹತುಗಾರರು ಇಂಡಿಯನ್ ಜನಾಂಗಗಳನ್ನು ತಮ್ಮ ಉನ್ನತ ಬುದ್ಧಿಬಲ, ಕಾರ್ಯಕೌಶಲದಿಂದ ನಿರ್ನಾಮ ಮಾಡಿದರು ಇಲ್ಲವೆ ದೇಶಭ್ರಷ್ಟರನ್ನಾಗಿಸಿದರು. ಇಂದು ಬಹುಮಟ್ಟಿಗೆ ಇಂಡಿಯನ್ ಬಣಗಳು ಮೊಂಟಾನಾ, ಓಕ್ಲಾಹಾಮಾ, ನ್ಯೂ ಮೆಕ್ಸಿಕೋ, ನಾರ್ತ್ ಕೆರೊಲಿನಾ, ಆರಿಜೋನಾ ಮುಂತಾದ ರಾಜ್ಯಗಳಲ್ಲಿ ಮೀಸಲು ಪ್ರದೇಶಗಳಲ್ಲಿ ನೆಲೆಸಿವೆ.

೬

೧೯೬೧ರಲ್ಲಿ ಅಮೆರಿಕನ್ ಇಂಡಿಯನ್ ಷಿಕಾಗೋ ಸಮ್ಮೇಳನದಲ್ಲಿ ಎಲ್ಲ ಇಂಡಿಯನ್ ಬಣದ ಮುಖಂಡರೂ ಕೂಡಿ ಒಕ್ಕೊರಲಿನಿಂದ ತಮ್ಮ ಸರಕಾರಕ್ಕೆ ಮನವಿಯೊಂದನ್ನು ಅರ್ಪಿಸಿದರು. ಅದರಲ್ಲಿ ಮುಖ್ಯವಾದ ಅಂಶ ತಮ್ಮ ಭೂಮಿಯನ್ನು ತಮಗೇ ಹಿಂದೊಪ್ಪಿಸಿಕೊಡಬೇಕೆಂಬುದು. ಸರಕಾರವು ನಾನಾ ಕಾರಣಗಳಿಗಾಗಿ (ಅಣೆಕಟ್ಟು, ವಿದ್ಯುತ್ ಸ್ಥಾವರ, ರಸ್ತೆ ಇತ್ಯಾದಿ) ತಮ್ಮಿಂದ ಕಸಿದುಕೊಂಡ ಭೂಪ್ರದೇಶದಲ್ಲಿ ಉಪಯೋಗಿಸದಿದ್ದರೂ ತಾನೇ ಉಳಿಸಿಕೊಂಡಿರುವ ಭೂಮಿಯನ್ನು ತಮಗೆ ಹಿಂದಿರುಗಿಸಬೇಕು. ತಮ್ಮ ಬಣಗಳನ್ನು ಓಡಿಸಿ ಕಿತ್ತುಕೊಂಡ ಜಮೀನನ್ನು ಹಿಂದಿರುಗಿಸಬೇಕು. ಆದಾಯತೆರಿಗೆ ಮತ್ತಿತರ ಫೆಡರಲ್ ತೆರಿಗೆಯನ್ನು ಮೀಸಲು ಪ್ರದೇಶದಲ್ಲಿರುವ ಇಂಡಿಯನ್ ಜನರ ಮೇಲೆ ವಿಧಿಸಬಾರದು. ಇಂಡಿಯನ್ ಜನರು ಸ್ವಾಯತ್ತತೆಯಿಂದ ಅಭಿಮಾನ, ಗೌರವಗಳಿಂದ ಕೂಡಿ ಬಾಳುವಂತಾಗಬೇಕು. "ನಾವು ಬಿಟ್ಟುಕೊಟ್ಟ ಭೂಖಂಡದ ಬಗ್ಗೆ ಮಾತನಾಡುವಾಗ ನಾವು ಲಕ್ಷಾಂತರ ಎಕರೆ ಭೂಪ್ರದೇಶದ ಬಗ್ಗೆ ಮಾತನಾಡುತ್ತಿಲ್ಲ, ಯಾವ ಒಂದು ಭೂತಾಯಿ ನಾವು ಅರಿತಿದ್ದ, ಪ್ರೀತಿಸಿದ್ದ, ಗೌರವಿಸಿದ್ದ ಜೀವನಕ್ರಮವನ್ನು ಪೋಷಿಸಿದ್ದಳೋ ಅದರ ಬಗ್ಗೆ ನಾವು ಲಕ್ಷ್ಯವಿಟ್ಟಿದ್ದೇವೆ. ನಾವು ಅಮೆರಿಕದಿಂದ ಭಿಕ್ಷೆಯನ್ನು, ಔದಾರ್ಯವನ್ನು, ಧರ್ಮವನ್ನು ಬೇಡುತ್ತಿಲ್ಲ. ನಮ್ಮ ಪರಿಸ್ಥಿತಿಯನ್ನು ಸರಿಯಾಗಿ ಗುರುತಿಸಿ, ಮುಂದಿನ ಯೋಜನೆಯನ್ನು, ಕಾರ್ಯಕ್ರಮವನ್ನು ಮಾಡಿರೆಂದೇ ನಮ್ಮ ಬೇಡಿಕೆ." ಇಂಡಿಯನ್ನರ ಈ ಬೇಡಿಕೆ ಈಗ ಕಾರ್ಯಗತವಾಗುತ್ತಿದೆ ಎನ್ನುವುದು ಎರಡೂ ಜನಾಂಗಗಳಿಗೆ ನೆಮ್ಮದಿಯ ವಿಷಯ.

---

ಬಂದೀಖಾನೆಯಲ್ಲಿದ್ದ ಕೈದಿಯೊಬ್ಬನಿಗೆ ತಾನು ಮನೆಗೆ ಬರೆದ ಪತ್ರಗಳು ಜೈಲು ಅಧಿಕಾರಿಗಳಿಂದ ಸೆನ್ಸಾರ್ ಮಾಡಲ್ಪಟ್ಟು ಕಳುಹಿಸಲ್ಪಡುತ್ತವೆ ಎಂದು ತಿಳಿದಿತ್ತು.

ಒಂದುಸಾರಿ ತಮ್ಮ ಮನೆಯ ಕೈದೋಟದಲ್ಲಿ ಆಲೂಗಡ್ಡೆ ಬೆಳೆಯುವ ಬಗ್ಗೆ ಸಲಹೆ ಕೋರಿ ಕೈದಿಯ ಪತ್ನಿ ಪತ್ರ ಬರೆದಿದ್ದಳು.

ಅದಕ್ಕುತ್ತರವಾಗಿ ಆ ಕೈದಿ ಕೈದೋಟದ ಪ್ರದೇಶವನ್ನು ಯಾವ ಉದ್ದೇಶಕ್ಕಾಗಿಯೂ ಅಗೆಯಬಾರದು. ಅಲ್ಲಿ ತನ್ನ ಬಂದೂಕು ಮುಂತಾದ ಆಯುಧಗಳನ್ನು ಹೂತಿಟ್ಟಿರುವುದಾಗಿ ಪತ್ರಬರೆದ.

ಕೆಲವು ದಿನದ ನಂತರ ಸರ್ಕಾರಿ ಪತ್ತೇದಾರಿ ಅಧಿಕಾರಿಗಳು ಬಂದು ತಮ್ಮ ಕೈದೋಟದ ಪ್ರದೇಶವನ್ನೆಲ್ಲಾ ಅಗೆದಿರುವುದಾಗಿ ಅವನ ಪತ್ನಿ ಬರೆದಳು.

ಆಗ ಕೈದಿ ಆಲೂಗಡ್ಡೆ ನೆಟ್ಟು ಬೆಳೆಯಲು ಸೂಕ್ತ ಕಾಲವಾಗಿದೆ ಎಂದು ಉತ್ತರ ಬರೆದ.

• ಟಿ.ಆರ್. ವೆಂಕಟೇಶಮೂರ್ತಿ



# ಅರಬ್ಬಿಯುವಳ ಗುಲಾಮುಳು



★ ಮಲಯಾಳಂ ಮೂಲ: ವತ್ಸಲ
ಅನುವಾದ: ಕೆ.ಕೆ. ನಾಯರ್

"ನನ್ನ ಬಂಗಾರಾ...."

ತಂಗವೇಲು ಗಟ್ಟಿಯಾಗಿ ನಕ್ಕುಬಿಟ್ಟ.

ಬಂಗಾರ! ಎಣ್ಣೆಯ ದೇಶಕ್ಕೆ ಹೋಗಿದ್ದಕ್ಕೇ ನೀನು ಈ ಬೆಣ್ಣೆ ಮಾತನ್ನು ಬರೆದಿರುವೆಯ? ಏನು ಇದರ ಒಳಗುಟ್ಟು? ಇಲ್ಲಿದ್ದಾಗಲೆಲ್ಲ ನನ್ನ ಬಗ್ಗೆ ಬೇರೆ ರೀತಿಯ ಮಾತುಗಳನ್ನೇ ತಾನೆ ನೀನು ಬಳಸುತ್ತಾ ಇದ್ದದ್ದು?

"ನೋಡು ವಿಲಾಸಿನೀ, ಪತ್ರದ ವಿಳಾಸ ವನ್ನು ಚೆನ್ನಾಗಿ ಒಮ್ಮೆ ನೋಡಿಬಿಡು. ಕಳೆದ ಸಲ ಮದುವೆಯಾಗಿ ಹೊರಟುಹೋಗಿದ್ದ ಗೋಪುಗೋ ಇನ್ನಾರಿಗೋ ಬಂದಿದ್ದರಬ ಹುದೇ ಎಂದು."

"ನಿಮಗೇ ಹೌದು!"

ವಿಲಾಸಿನಿ ತಲೆದೂಗಿದಳು. ಒಂದು ಕಾಮಿಕ್ಸ್ ಪುಸ್ತಕವನ್ನು ಓದುವಾಗಿನ ಹಾವಭಾ ವಗಳೊಂದಿಗೆ ಅವಳು ಏರ್‌ಮೇಲ್ ಲೆಟರ್‌ನಲ್ಲಿ ಮುಖ ಹುದುಗಿಸಿದಳು.

ಅವಳ ತುರುಬು ಗಂಟಿನಲ್ಲಿ ಕುಳಿತು ಸಂಪಿ ಗೆ ಮೊಗ್ಗುಗಳು ಅರಳುತ್ತಿವೆ. ತಂಗವೇಲು ಪುನಃ ಪತ್ರದ ಕಡೆಗೇ ಗಮನ ಹರಿಸಿದ.

"ಮುರುಗನ ಮಗ ತಂಗವೇಲು ಎಂದೇ ಇದೆಯ ವಿಳಾಸ?"

"ಮಿಸ್ಟರ್.... ಹಾ... ಹೌದು. ಮಿಸ್ಟರ್ ಎಂ. ತಂಗವೇಲು."

"ಅದ್ ಹ್ಯಾಗ್ ಹೇಳ್ತಿ? ನಿನಗೆ ಇಂಗ್ಲೀಷ್ ಅಕ್ಷರ ಗೊತ್ತಾ?"

"ಟಪ್ಪಾಲು ಪೇದೆ ಹೇಳಿದ್ದ. ಮಿಸ್ಟರ್ ಎಂದಾಗಿನ ಅವನ ಒಂದುಗತ್ತು-"

"ಆ ಲಕೋಟೆಯೊಳಗೆ ಈ ಒಂದು ನೀಲಿ ಕಾಗ್ದ ಮಾತ್ರ ಇರೋದ?"

"ಇನ್ನೇನಿರುತ್ತೆ? ಬಿಸ್ಕತ್ ಇರ್ತದಾ? ಕೆಲ ವೊಮ್ಮೆ ನಿಮಗೆ ಗಡ್ಡ ಗೀಚೋಕೆ ಎರಡು ಫಾರಿನ್ ಬ್ಲೇಡ್ ಇಟ್ಟಿಲರ್ೂ ಬಹುದು!"

"ಡ್ರಾಫ್ಟ್! ಡ್ರಾಫ್ಟ್!"

"ಇಲ್ಲ ಮಾರಾಯ್ರೇ, ಬಂಗಾರದಂಥ ಮಾತುಗಳೇ ತುಂಬಿಕೊಂಡಿವೆಯಲ್ಲ ಸಾಲಾಗಿ."

"ಡ್ರಾಫ್ಟ್ ಇಲ್ಲದಿದ್ದರೂ ಆ ಬಗ್ಗೆ ಏನಾದ ರೊಂದು ಸೂಚನೆ ಸಾಲುಗಳೆಡೆಯಲ್ಲಿ ಮಿಂಚು ತ್ತಿರಬಹುದು. ಎಷ್ಟಾದರೂ ನನ್ನ ತಂಗಮಣಿ ಯಲ್ಲವೆ? ಅವಳು ನನ್ನ ಆಗತ್ಯವನ್ನು ಮರೀತಾ ಳೆಯೆ?"

"ಮರೆಯೋದಿಲ್ಲ. ಕೇಳಿರಲ್ಲ...."

"ನನ್ನ ಬಂಗಾರಾ-"

"ಸಾಕು. ಆಮೇಲೆ-"

"...ಇದು ಒಂದು ಪತ್ರವಲ್ಲ. ಅಕ್ಷರಗಳೂ ಅಲ್ಲ. ನನ್ನ ಅಳು, ನನ್ನ ಕಣ್ಣೀರು ಇದು. ಮರುಭೂಮಿಯ ಅಳು. ನಿಮಗೆ ಕೇಳಿಸೋ ದಿಲ್ವೆ?"

ಇದೆ. ಕೇಳಿಸ್ತಾ ಇದೆ. ಕೇಳಿದರೆ ಹೊಟ್ಟೆ ತುಂಬುವುದೆ? ಪತ್ರ ತೋರ್ಸಿದರೆ ಸಾರಾಯಿ ಸಿಕ್ಕೀತೆ? ಅವಳ ಬಿನ್ನಾಣ!

"ಓದು ವಿಲಾಸಿನಿ ಪುಟ್ಟೀ..."

"ನಾನು ಪುಟ್ಟಿಯಲ್ಲ. ನನಗಿಬ್ಬರು ಮಕ್ಕಳಿ ದ್ದಾರೆ ಮನೆಯಲ್ಲಿ-"

"ಅದಿರಲಿ. ಇಲ್ಲಿ ನೀನು ನನಗೆ ಪುಟ್ಟಿಯೇ."

"ನಾನು ಈ ಮರುಭೂಮಿಯ ಒಂದು ಮರಳ ಕಣವಾಗಿ ಬಿಟ್ಟೆ ಮಾರಾಯ್ರೇ. ನನ್ನನ್ನು ಮೆಟ್ಟಿ, ತುಳಿದು ಹೋಗುವ ಒಂಟೆಗಳಿಗೆ ಕೂಡ ತಮ್ಮ ಭಾಷೆಯಲ್ಲಿ ಕಿರಿಚಲು ಗೊತ್ತು. ಕೇಳಲು ಮಕ್ಕಳು ಇರುತ್ತವೆ. ನನ್ನ ಹಾಗೆ ಅವು ತಮ್ಮ ಮಕ್ಕಳನ್ನು ಹಾಸ್ಟೆಲ್‌ನಲ್ಲಿ ಬಿಡಲಿಲ್ಲವಲ್ಲ..."

"ಅವಳ ಒಂದು ಪಟ್ಟಾಂಗ! ಅದನ್ನಾಚೆಗಿರಿಸಿ ನೀನು ಕಡಕ್ಕಾಗಿ ಒಂದು ಚಾ ತಯಾರ್ಸಿ ಕೊಡೇ. ಹೆಣ್ಣೊಬ್ಬಳು ಅಷ್ಟು ಕಾಲ ಇಲ್ಲಿದ್ದೂ ಮಾಡಿದ್ದಾದರೂ ಏನು? ಹೊತ್ತು ಬೆಳಗಾಯ್ತೆಂದರೆ, ಇದ್ದದ್ರಲ್ಲೆ ಅಲಂಕರಿಸಿಕೊಂಡು ಕಾಡಿನಲ್ಲಿ ಮ್ಹೋಪಿನ ಕೆಲಸಕ್ಕಾಗಲಿ, ಜಾನುವಾರುಗಳಿಗೆ ಮೇವು ತರಲಿಕ್ಕಾಗಲಿ, ಕಟ್ಟಿಗೆ ತರಲಿಕ್ಕಾಗಲಿ ಹೋಗ್ತಾ ಇದ್ದದ್ದಲ್ಲವ? ಈ 'ಬಂಗಾರದ ಮನುಷ್ಯ'ನಿಗೆ ಬಾಯಾರಿದಾಗ ಒಂದು ಸಿಂಗಲ್ ಚಾ ತಯಾರಿಸಿ ಕೊಡಲು ಅವಳಿಗೆ ಪುರುಸೊತ್ತಿತ್ತ?"

"ನಿಮಗೆ ಚಾ ಬೇಕೊ? ಬಾಟಲಿ ಬೇಕೊ? ಪತ್ರ ಓದಿದ ನಂತರ ಸಾಕೊ, ಈಗಲೇ ಬೇಕೊ, ಹೇಳಿ ಅಂದ್ರೆ."

"ಹಾಗಾದ್ರೆ ಅದೇ ಆಗ್ಲಿ! ಬಾಟಲಿಯಲ್ಲ ಪ್ಲಾಸ್ಟಿಕ್ ತೊಟ್ಟೆ."

"ಇಡಿಯಾಗಿ?"

"ಇಡಿಯಾಗಿಯೇ. ಈಗೀಗ ಸಾಲ ಕೊಡುವವರೂ ಇದ್ದಾರೆ. ತಂಗಮಣಿ ಬಂಗಾರಿ ಅರೇಬಿಯಾದಲ್ಲಿ ಇರೋದಲ್ಲವ? ಈಗ ನನ್ನ ಅಂತಸ್ತೇನು ಗೊತ್ತಾ? ಹಿಂದೆ ನೀನು ಸಹ ಹೊರಳಿ ನೋಡ್ತಿರಲಿಲ್ಲಪಲ್ಲ?"

"ಏನ್ ಕಂಡು ತಂಗುಮಣಿಯಕ್ಕ ನಿಮ್ಮನ್ನು ಮದುವೆಯಾದಳೊ ಎಂದೇ ನಾನು ಯೋಚಿಸ್ತಾ ಇದ್ದೆ!"

ಮಡಿಕೆ ಬಿಡಿಸಲಾದ ಪತ್ರ ಇಸಿದುಕೊಂಡು ತಂಗವೇಲು ಅದರಲ್ಲಿ ಕಣ್ಣು ಹಾಯಿಸಿದ. ಚಿಕ್ಕಂದಿನಲ್ಲಿ ನಾಲ್ಕಕ್ಷರ ಕಲಿಯದ್ದಕ್ಕೆ ಅವಳು ನನ್ನನ್ನು ಆಕ್ಷೇಪಿಸುತ್ತಿದ್ದಳು. ಇನ್ನೀಗ ಅವಳ ಪತ್ರ ಓದಲಿಕ್ಕಾಗಿ ಸಾಕ್ಷರತಾ ಆಂದೋಲನದ ವರ ಹಿಂದೆ ಹೋಗಬೇಕೆ? ಬೇಡ. ವಿಲಾಸಿನಿ ಮೈಗೆ ಮೈ ಒತ್ತಿಕೊಂಡು ಪಕ್ಕದಲ್ಲೆ ಕುಳಿತಿರುವಳಲ್ಲ?

ಪತ್ರವನ್ನು ಅಲ್ಲೆ ಬಿದ್ದುಕೊಂಡಿದ್ದ ಕಡಗತ್ತಿಯ ಅಡಿಯಲ್ಲಿರಿಸಿ ತಂಗವೇಲು ವಿಲಾಸಿನಿಯ ಹಿಂದೆಯೇ ಒಳಗಡೆ ನಡೆದ. ನಡೆಯುತ್ತಲೆ ಹಿಂತಿರುಗಿ ನೋಡಿ ಪತ್ರಕ್ಕೆ ಹೇಳಿದ:

"ಬಿದ್ಕೋ ಅಲ್ಲಿ! ನೀನು ಒಬ್ಬೊಂಟಿಯಾಗಿಯೇ ಬಂದದ್ದಲ್ಲವಾ? ನಿನ್ನ ಜೊತೆ ಒಂದು ಡ್ರಾಫ್ಟ್ ಕೂಡ ಇರುತ್ತಿದ್ದರೆ ನಿನಗೆ ನಾನೊಂದು ಸಿಹಿ ಮುತ್ತು ಕೊಡುತ್ತಿದ್ದೆ. ಗೋಳಿಡುವುದು ಬೇಡ. ನೀನೊಂದು ದೊಡ್ಡ ಗೋಳಾಟವೆ ಎಂದು ನನಗೆ ಗೊತ್ತು. ಇಲ್ಲಿದ್ದಾಗ ನೀನೊಂದು ತುರಿಕೆಯಾಗಿದ್ದೆ. ಒಂದು ಕ್ಷಣವಾದರೂ ನನಗೆ ನೆಮ್ಮದಿ ನೀಡಿರುವೆಯಾ? ಬೆಳಗ್ಗೆ ಮತ್ತು ಸಂಜೆ ಒಂದೊಂದು ಗ್ಲಾಸ್ ಸಾರಾಯಿಗೆ ದುಡ್ಡಿಗಾಗಿ ನಾನು ಎಷ್ಟು ಹೊತ್ತು ನಿನ್ನ ಹಿಂದೆ ನಡೀಬೇಕಾಗಿತ್ತು! ದುಡ್ಡನ್ನು ನೀನು ನನ್ನ ಮುಖಕ್ಕೆ ಎಸೆದು ಕೊಡುತ್ತಾ ಇದ್ದದ್ದಲ್ಲವ? ಜರೆಯುತ್ತ, ಜಗಳವಾಡುತ್ತ ನೀನು ನನ್ನನ್ನು ಕೊಲ್ಲದೆಯೇ ಕೊಲ್ಲುತ್ತಿದ್ದೀಯಲ್ಲ? ನಾನು ಎರಡು ಸಾಲು ಜಾನಪದ ಹಾಡನ್ನಾಗಲೀ ಪೋಲಿಹಾಡನ್ನಾಗಲೀ ಹಾಡತೊಡಗುವಾಗಲೆ ನೀನು ಶುರು ಮಾಡ್ತಿದ್ದಿ ವೇದೋಪದೇಶ: ಕೆಲ್ಸಕ್ಕೆ ಹೋಗಿ, ಕೆಲ್ಸಕ್ಕೆ ಹೋಗಿರಿ ಅಂತ. ನೀನು ಪ್ರತಿದಿನವೂ ಕೆಲಸಕ್ಕೆ ಹೋಗುತ್ತಿರುವಾಗ ಈ ತಂಗವೇಲು ಯಾಕೆ ಮೈ ಸವೆಸಬೇಕು. ಅದನ್ನು ನಿನಗೋಸ್ಕರ ಒಪ್ಪವಾಗಿ, ದಪ್ಪವಾಗಿ ಇರಿಸಬೇಕಾದದ್ದು ನನ್ನ ಜವಾಬ್ದಾರಿ ತಾನೆ? ಆ ತಿಳುವಳಿಕೆ ಇದ್ದಿತ್ತ ನಿನಗೆ? ಈಗ ಹೇಗೆ....."

ಚಹ ಕುಡಿದಾದನಂತರ ಕಪ್‌ಅನ್ನು ಕೋಣೆಯ ಮೂಲೆಯಲ್ಲಿಟ್ಟು ವಿಲಾಸಿನಿ ಕೇಳಿ

ದಳು: "ಪತ್ರ ಪೂರ್ತಿ ಓದಬೇಡವೆ? ಹಣ ಖರ್ಚು ಮಾಡಿ ಬರೆದು ಕಳಿಸಿದ್ದಲ್ಲವ? ಓದಿ ಮುಗಿಸ್ತೇನೆ."

"ನಾಳೆ ಓದಿದ್ರೆ ಸಾಕು ಕಣೇ."

"ಸಾಲ್ದು, ತಂಗಮಣಿ ಅಕ್ಕನ ಮನಸ್ಸಿನಲ್ಲಿ ಏನಿದೆ ಅಂತ ನಾನೂ ಒಮ್ಮೆ ತಿಳೀಬಹುದಲ್ಲ."

ಮುಂದೆ ವಿಲಾಸಿನಿಯೂ ಬೆನ್ನ ಹಿಂದೆಯೇ ತಂಗಮುವೇಲುವೂ ಪುನಃ ಚಾವಡಿಗೆ ಬಂದರು. ಕಡಗತ್ತಿಯ ಭಾರ ಹೊತ್ತು ಬಿದ್ದುಕೊಂಡಿದ್ದ ಪತ್ರವನ್ನು ಎಳೆದು ತೆಗೆದು ತಂಗವೇಲು ಪ್ರೇಯಸಿಯತ್ತ ಎಸೆದ.

"ಓದು."

ವಿಲಾಸಿನಿ ಪತ್ರದಲ್ಲಿ ಸಾವಕಾಶವಾಗಿ ಕಣ್ಣು ಹಾಯಿಸಿದಳು. ಅಕ್ಷರಗಳನ್ನು ಒಂದೊಂದೇ ಆಗಿ ಹಕ್ಕಿ ಜೋಡಿಸಬೇಕಾಯಿತು ಅವಳು. ನಡು ನಡುವೆ ತಡೆ ಕೂಡ ಸಂಭವಿಸುತ್ತಿದೆ.

ತಂಗವೇಲು ಅಂದುಕೊಂಡ-

ಇವಳು ಅವಳ ಹಾಗೆ ಅಕ್ಷರ ಹೆಚ್ಚೇನೂ ಕಲಿತಿಲ್ಲ. ಆದರೂ ಏನಂತೆ! ಬಲು ಚಾಲಾಕಿನವಳು ಇವಳು. ಹೆಣ್ಣಿಗೇಕೆ ಅಕ್ಷರ! ಬೇಕಾದುದು ಕೈಚಳಕ!

ತಂಗವೇಲುವಿನ ಕಂಗಳು ಮೇಲಕ್ಕೆ ಮತ್ತು ಕೆಳಕ್ಕೆ ಓಡಾಡಿ ನಿನ್ನೆಯತನಕ ಅಂಗಳದ ಗಡಿ ದಾಟಿ ಬಾರದವಳಿವಳು. ಬೇಲಿ ಬದಿಯಲ್ಲಿ ನಿಂತು,

"ತಂಗುಮಣಿಯಕ್ಕಾ, ತುಟುಕು ಸೀಮೆಯೆಣ್ಣೆ","ಅಕ್ಕಾ ನಾಲ್ಕು ಮೆಣಸು"

"ಅಕ್ಕಾ ಒಂದಿಷ್ಟು ಉಪ್ಪು"

ದಾಸವಾಳದ ಬೇಲಿಯಲ್ಲಿ ತಾವರೆ ಅರಳುವುದನ್ನು ಕಂಡು ತಂಗಮೇಲು ಗುಯಿಗುಡುತ್ತ ಹಾರಾಡಿದ್ದ.

ಈಗ ಲೇ ತಂಗಮಣೀ, ಎಷ್ಟೊಂದು ಸೌಖ್ಯ ನನಗೆ ಇಲ್ಲಿ!

ಬೈಯುವ ಜನವೂ ಇಲ್ಲ. ಮರುಭೂಮಿಗೆ ನನಗೋಸ್ಕರ ಒಂದು ವೀಸಾ ದೊರಕಿಸಲು ಪ್ರಯತ್ನಿಸುತ್ತಿರಬಹುದು ನೀನು. ಅದು ಬಿಡು. ನಾನು ಇಲ್ಲೇ ಹಾಯಾಗಿರುತ್ತೇನೆ. ಈಗ ಎಂತಹ ಸುಖ! ಕಾಡಿನ ಬಂಡೆಗಳಿಗೆಲ್ಲ ಕೆಚ್ಚಲು ಬಂದುಬಿಟ್ಟಿದೆ! ಸಾರಾಯಿ ಸುರಿಸೋ ಕೆಚ್ಚಲು! ನಾನು ನಿನ್ನ ಚುಕ್ಕಿ ದನವನ್ನು ಮಾರಿದೆ. ಕರು ಹಾಕಿದ್ದರೂ ಏನು ಪ್ರಯೋಜನ? ಅದು ಕೊಡೋದು ಸಪ್ಪೆ ಹಾಲಲ್ಲವ? ದನಕ್ಕೆ ಬೆದೆ ಕೊಡಿಸಿ ಸಾಕಲು ನನಗೆ ಒಪ್ಪಿಸಿಯೇ ನೀನು ವಿಮಾನ ಹತ್ತಿದ್ದೀಯಲ್ಲ? ಅಲ್ಲಿ ಅರಬ್ಬಿಯವಳ ಅಡುಗೆ ಮನೆಯಲ್ಲಿ ನೀನು ಏಲಕ್ಕಿ ಬೆರೆಸಿದ್ದ ಚಾ ಕುಡ್ದು ಸುಖಪಟ್ಟುಕೋ. ಬೇಕಾದರೆ ಒಂಟೆ ಹಾಲನ್ನೂ ಕುಡೀಬಹುದು. ನಾನು ಚುಕ್ಕಿ ದನವನ್ನು ಮಾರಿದೆ. ಅದರ ಬದಲು ಸಾರಾಯಿ ಸುರಿಸೋ ಬಂಡೆಗಳನ್ನು ಕೊಂಡುಕೊಂಡೆ. ಕಾಡಿನಲ್ಲಿ ಕುಳಿತು ಕುಡಿಯುವಾಗ ಎಂಥ ಖುಷಿ! ಚಳಿ ಮಾತ್ರ ಜೋರು. ಬೆಚ್ಚಗಿರೋ ಯಾವುದನ್ನಾದರೂ ತಿನ್ನಲು ಆಸೆ. ಆದ್ದರಿಂದಲೆ ತಾನೆ ವಿಲಾಸಿನಿಯನ್ನು ನಾನು ಸದ್ಯ ಅಡುಗೆಯವಳನ್ನಾಗಿ ಮಾಡಿದ್ದು! ಅಡುಗೆ ಮನೆಯೊಂದಿಗೆ ನಾನು ಅವಳನ್ನೂ ಕಾಡಿಗೊಯ್ಯುತ್ತೇನೆ. ಕಟ್ಟಿಗೆ ಬೇಕಾದರೆ ಕಟ್ಟಿಗೆ, ನೀರು ಬೇಕಾದರೆ ನೀರು. ರಹಸ್ಯಕ್ಕೆ ರಹಸ್ಯ! ಅವಳು ಜಾಣೆ. ಮನೆಯನ್ನು ಮಾತ್ರವಲ್ಲ, ನನ್ನನ್ನೂ ನೋಡಿಕೊಳ್ಳುತ್ತಾಳೆ. ನೀನು ಮಕ್ಕಳನ್ನು ಆ ಹಾಳಾದ ಹಾಸ್ಟೆಲಿಗೆ ಒಯ್ದು ಸೇರಿಸದೆ ಹೋಗಿದ್ದರೆ ಅವರನ್ನೂ ನೋಡಿಕೊಳ್ಳುತ್ತಿದ್ದಳು...

ಒಂದು ದೊಡ್ಡ ಬೇಸಿಗೆ ಗಾಳಿ ಬೀಸಿ ಗುಡ್ಡದಷ್ಟು ತರಗೆಲೆಗಳನ್ನು ಅಂಗಳ, ಚಾವಡಿಗಳಲ್ಲೆಲ್ಲ ಸುರಿದು ಹಾದುಹೋಯಿತು. ಕಡಗತ್ತಿಯ ತುದಿಯಿಂದ ಬೆನ್ನು ಕೆರೆಸುತ್ತ ತಂಗವೇಲು ಹೇಳಿದ.

"ವಿಲಾಸಿನೀ, ಗಟ್ಟಿಯಾಗಿ ಓದೇ..."

ಪತ್ರ ಹೆದರಿ ಅವಳ ಎದೆಗೇ ಅಂಟಿಬಿಟ್ಟಿತು.

ವಿಲಾಸಿನಿ ಬಡಬಡಿಸತೊಡಗಿದಳು:

"ನನ್ನ ಬಂಗಾರಾ, ನಲವತ್ತೇಳು ದಿನ

ನಾನು ಇಲ್ಲಿ ಅಂಧಕಾರದಲ್ಲೆ ಇದ್ದೆ. ಅಂದರೆ ಅರಬ್ಬಿಯವಳ ಅಡುಗೆ ಮನೆಯೊಳಗೆ. ವಿದ್ಯುತ್ ಲೈಟ್‌ಗಳ ಕಣ್ಣು ಕೋರೈಸುವ ಬೆಳಕಿನಲ್ಲಿ ಕೆಲಸ, ಯಾವ ಹೊತ್ತಿನಲ್ಲೂ ಕೆಲಸವೇ. ದಪ್ಪಗಿದ್ದ ನನ್ನ ಮೈಯಲ್ಲಿ ಈಗ ಉಳಿದಿರುವುದು ಮೂಳೆಗಳಷ್ಟೇ. ಮಸಾಲೆ ಹಾಕದೆ ಬೇಯಿಸಲಾದ ಮಾಂಸ ತಿನ್ನಲು ಸಾಧ್ಯವಾಗುತಿಲ್ಲ. ತಣ್ಣೀರಷ್ಟೇ ಈಗಿನ ನನ್ನ ಆಹಾರ. ಅಲ್ಲಿದ್ದಾಗ ಒಂದಿಷ್ಟು ತೆಳ್ಳಗಾಗಲು ನಾನು ಎಷ್ಟೊಂದು ಆಶಿಸುತ್ತಿದ್ದೆ! ಒಂದು ದಿನ ಕನ್ನಡಿ ನೆಲದಲ್ಲಿ ಕಂಡಿದ್ದೆ ಒಂದು ಪ್ರೇತವನ್ನು!

"ತಣ್ಣೀರಷ್ಟೇ ಕುಡೀಬಹುದು. ಬರೆ ನೀರಿನಲ್ಲಿ ಬೇಯಿಸಿ ಮಾಂಸ ತಿನ್ನಬಹುದು. ಆದರೆ ಒಂದು ಮಾತೂ ಆಡಲಾಗದ ಬದುಕು....! ನಲ್ವತ್ತೋ ಇನ್ನೂ ಹೆಚ್ಚೋ ದಿನಗಳ ಕಾಲ ನಾನು ಯಾವ ಮಾತೂ ಆಡಲಿಲ್ಲ. ಮಾತುಗಳೆಲ್ಲ ಬೋನಿನೊಳಗೆ ಸಿಕ್ಕಿಬಿದ್ದಂತೆ ಭಾಸವಾಗಿತ್ತು. ಮಾತಾಡುವುದಾದರೂ ಯಾರೊಡನೆ? ನನಗೆ ಅಮ್ಮ, ಅಪ್ಪಂದಿರು ಕಲಿಸಿದ್ದ ಮಾತು ಇಲ್ಲಿ ಯಾರಿಗೂ ಅರ್ಥವಾಗದು. ಮೇಷ್ಟ್ರುಗಳು ಸ್ಕೂಲಿನಲ್ಲಿ ಕಲಿಸಿದ್ದ ಮಾತೂ ಗೊತ್ತಾಗದು. ಅರಬ್ಬಿಯವನೂ ಅರಬ್ಬಿಯವಳೂ ಹೇಳುವ ಮಾತುಗಳನ್ನು ಕೇಳುತ್ತ ನಾನು ಮಿಂಚುಳ್ಳಿಯ ಹಾಗೆ ಆಗಿಬಿಡುತ್ತೇನೆ. ಒಂದು ಮಾತಾದರೂ ಅರ್ಥವಾಗುತ್ತಿದ್ದರೆ! ಜಾಸೂಸುರುಗಳೇ ಇಲ್ಲದ ಈ ದೇಶದಲ್ಲಿ ನನಗೆ ಒಂದು ದನದ ಸ್ಥಾನಮಾನ ಕೂಡ ಇಲ್ಲ. ತಿಂಗಳು ಭರ್ತಿಯಾದ ನಂತರವೂ ಹೆರದ ಹಾಗೆ ಮಾತುಗಳ ಉಸಿರುಕಟ್ಟುವಿಕೆಯಿಂದಾಗಿ ನಾನು ಸತ್ತೇ ಹೋಗುವೆನೆಂದೆನ್ನಿಸಿತ್ತು. ನನ್ನ ಮಾತುಗಳನ್ನು ಗ್ರಹಿಸಬಲ್ಲ ಮನುಷ್ಯರನ್ನು ಕನಸಿನಲ್ಲಾದರೂ ಕಾಣಲು ಆಶಿಸಿದೆ. ನನ್ನ ಕನಸಿನಲ್ಲೂ ಅಂತಹ ಮನುಷ್ಯರಿಲ್ಲ. ನನ್ನ ಬಂಗಾರಾ, ನೀವೂ ಕೂಡ ಒಂದು ಸಲವೂ ನನ್ನ ಕನಸಿನಲ್ಲಿ ಕಾಣಿಸಿಕೊಳ್ಳಲಿಲ್ಲ. ಮಕ್ಕಳೂ ನನ್ನನ್ನು ತೊರೆದು ಬಿಟ್ಟವು.

ತಂಗವೇಲು ಮುಸಿ ಮುಸಿ ನಕ್ಕ. ವಿಲಾಸಿನಿಯ ತೊಡೆಯ ಮೇಲೆ ತಲೆಯಿರಿಸಿ ಮಲಗಿರುವ ಅವನಿಗೆ ಮಾತುಗಳು ತಲೆಕೆಳಗಾಗಿ ಬೀಳುವುದು ಕಾಣಿಸಿತು.

"ಮಕ್ಕಳನ್ನು ಜೈಲಿಗೆ ಸೇರಿಸಿಯೆ ಅಲ್ಲವ ಅವಳು ಮಜಾ ಮಾಡಲು ಹೋದದ್ದು?"

ಇಲ್ಲಿ ವಿಲಾಸಿನಿ ಪತ್ರವಾಚನ ನಿಲ್ಲಿಸಿದಳು.

"ಮಾರಾಯ್ರೆ, ಮಹಾಪಾಪ ತಟ್ಟೀತು ಹಾಗಂದ್ರೆ. ಒಂದು ಮಂಗನ ಹಾಗಿದ್ದ ನಿಮಗೆ ತಿನ್ನಲೂ, ಕುಡಿಯಲೂ, ಮಜಾಮಾಡಲು- ಎಲ್ಲವನ್ನೂ ಕೊಟ್ಟು ಹತ್ತು, ಹದಿನೈದು ವರ್ಷಗಳ ಕಾಲ ನಿಮ್ಮನ್ನು ಸಾಕಲಿಲ್ಲವಾ ಆಕೆ?"

"ಲೇ, ನಾನು ಮಂಗನೇನು? ನಿನಗೆ ಒಂದು ಮಂಗನನ್ನು ಕೂಡ ಇಟ್ಟುಕೊಳ್ಳಲು ಸಾಧ್ಯವಾಗಲಿಲ್ಲವಲ್ಲ. ನಿನ್ನ ಮಕ್ಕಳ ಅಪ್ಪಂದಿರು ಯಾಕೆ ಓಡಿ ಹೋದದ್ದು?"

ವಿಲಾಸಿನಿ ಒಂದು ಕೈಯಿಂದ ತಂಗವೇಲುವಿನ ಬಾಯಿ ಮುಚ್ಚಿದಳು. ಇನ್ನೊಂದು ಕೈಯಲ್ಲಿ ಪತ್ರ ಹಿಡಿದುಕೊಂಡಿದ್ದಳು.

"ಉಂ, ಪೂರ್ತಿ ಓದಿ ತೊಲಗಿಸು."

".......ಕನಸಿನ ಕುರಿತಲ್ಲವೆ ಹೇಳಿದ್ದು? ನನ್ನ ಕನಸಿನಲ್ಲಿ ಯಾವತ್ತೂ ಮುಳ್ಳಿನ ಮರಗಳೇ ಕಂಡು ಬಂದವು. ಮರಗಳ ಮೇಲೆ ಗಿಳಿಗಳು, ಚಿಟ್ಟೆಗಳು ಕೂಡ ಇಲ್ಲ. ಅವು ಇರುತ್ತಿದ್ದರೆ ಮಲಯಾಳಂ ಹೇಳಿದರೆ ಅರ್ಥ ಮಾಡಿಕೊಳ್ಳುತ್ತಿದ್ದವು....

"ಎರಡು ಅಮಾವಾಸ್ಯೆಗಳು ಹಾಗೇ ದಾಟಿ ಹೋದವು. ಇದ್ದ ಒಂದೇ ಕಿಟಕಿ ತೆರೆದಿಟ್ಟುಕೊಂಡು ನಾನು ಹೊರಕ್ಕೆ ದಿಟ್ಟಿಸಿದೆ. ಮೂಳೆ ಹುಡಿಯ ಹಾಗಿರುವ ಮರಳ ಹರವು. ನನ್ನ ಹಾಗೆಯೇ ಮಾತಾಡಲಾಗದೆ ತೂಕಡಿಸಿ ಸತ್ತ ಹೆಣ್ಣುಗಳ ಮೂಳೆ ಹುಡಿಗಳು. ನಾನು ಹೊರಗೆ ದಿಟ್ಟಿಸುತ್ತ ಕೂಗಿ ಕರೆದೆ,

"ನನ್ನ ಜತೆಯಲ್ಲೇ ವಿಮಾನವಿಳಿದು, ಎತ್ತಲೋ ಹೋದ ಸೈನಬಾ, ಮೈಮುನಾ, ತ್ರೇಸ್ಸಾಮ್ಮಾ- ನೀವೆಲ್ಲರೂ ನನಗೂ ಮುನ್ನವೇ

ಸತ್ತು ಹುಡಿಯಾಗಿ ಮಾರ್ಪಟ್ಟಿರುವಿರಾ ?"

ಆಗ ನನ್ನ ಕಿಟಕಿಯ ಹೊರಗೆ ಒಂದು ನೆರಳು ಚಲಿಸಿತು. ಎತ್ತಿದ ಕೈಯಲ್ಲಿ ನನ್ನತ್ತ ಗುರಿಹಿಡಿದ ಪಿಸ್ತೂಲ್. ನಾನು ಆಗಲೇ ಸತ್ತು ಬೀಳಬೇಕಿತ್ತು. ನನ್ನೊಳಗಿನ ಮಾತುಗಳನ್ನು ಹೊರಗೆ ಹಾಕದೆ ಸಾಯಲಾರೆ ಎಂಬ ಹಟ ಹುಟ್ಟಿತು ನನ್ನಲ್ಲಿ. ತಾಯಿ ಮತ್ತು ಮಗು ಬೇರ್ಪಡದೆ ಸಾಯುವುದೂ ಘೋರ ಪಾಪವಲ್ಲವೆ ?...."

"ಹ.....ಹ...." ತಂಗವೇಲು ಗೊಳ್ಳನೆ ನಕ್ಕ.

"ಬೈದೂ ಬೈದೂ ನೀನು ನನ್ನ ಕಿವಿಯ ತಮಟೆಗಳನ್ನು ಪುಡಿಮಾಡುತ್ತಿರಲಿಲ್ಲವ ? ಅರಬ್ಬಿಯವನ ಮತ್ತು ಅರಬ್ಬಿಯವಳ ಕಿವಿಗಳನ್ನು ಹಾಗೆ ಪುಡಿಮಾಡಲು ಸಾಧ್ಯವಾ ? ಹೊನ್ನಿನಲ್ಲಿ ತೂತು ಕೊರೆಯುವುದು ಸುಲಭವಾದೀತೆ ?

"ಮಾತಾಡದೆ ಮಲಗಿ ಕೇಳಿರಲ್ಲ" ಎಲಾಸಿನಿ ಹೇಳಿದಳು.

"ನಾನು ಹೊಳೆಗೆ ಹೋಗಿ ಮಿಂದು ಬರಬೇಕು."

"ಬೇಡ ಕಣೇ, ನಿನ್ನ ಮೀಯದ ಮೈಯ ವಾಸನೆಯೆ ನನಗೆ ಖುಷಿ ಕೊಡುತ್ತದೆ. ಹೂಂ... ಓದು."

"ಆಮೇಲೆ ಪ್ರತಿರಾತ್ರಿಯೂ ನನ್ನ ಕಿಟಕಿಯ ಹೊರಗೆ ಅರಬ್ಬಿಯವನೂ ಬಾಗಿಲ ಮುಂದೆ ಅರಬ್ಬಿಯವಳೂ ಕಾವಲು ನಿಲ್ಲುತ್ತಿದ್ದರು.

"ಇನ್ನು ನಾನು ಯಾರೊಡನೆ ಮಾತನಾಡುವುದು !

"ಅರಬ್ಬಿ ಮತ್ತು ಹೆಂಡತಿ ಬಂಗಲೆಗೆ ಹತ್ತಿ ಹೋದ ಬಳಿಕ ನಾನು ನನ್ನ ಕಿಟಕಿಯನ್ನು ತೆರೆದಿಡುತ್ತೇನೆ. ರಾತ್ರಿಗಳು ನಿದ್ರಿಸಲಿಕ್ಕಿರುವುದಿಲ್ಲ, ಮಾತುಗಳನ್ನು ಪಂಜರದಿಂದ ತೆರೆದು ಬಿಟ್ಟು ಅವುಗಳ ರೆಕ್ಕೆಬಡಿತಗಳನ್ನಾಲಿಸುತ್ತ ಜೀವವನ್ನು ಹಿಡಿದು ನಿಲ್ಲಿಸಲಿಕ್ಕಿರುವುದೆಂದು ನನಗೆ ವೇದ್ಯವಾಯ್ತು.

## ಭಿನ್ನತೆ

ಆ ನೀರೆ
ಉಟ್ಟ ಸೀರೆ
ಆಕರ್ಷಕ
ಎಂದರೆ ಹೆಂಡತಿ ?
ಆ ಸೀರೆ
ಉಟ್ಟ ನೀರೆ
ಆಕರ್ಷಕ ಎಂದರು
ಗುಂಡಣ್ಣನವರು !

• - ರಮೇಶಚಂದ್ರ

"ಹಾಗೆ ಹೇಗೋ ಹೇಗೊ ದಿನಗಳೆಯುತ್ತಿರಲು ಹುಡಿಗಾಳಿ ಮತ್ತು ಮುಸುಕು ಮಂಜುಗಳಿಲ್ಲದ ಒಂದು ರಾತ್ರಿ ಅಗೋ ಅಲ್ಲೊಬ್ಬ ಎತ್ತರದ ಆಳು ರಸ್ತೆ ಬದಿಯಲ್ಲಿ ನಿಂತಿದ್ದ. ಒಬ್ಬನಷ್ಟೇ ಅಲ್ಲ, ಅವನ ಆಚೆ ಇನ್ನೊಬ್ಬ. ಹೀಗೆ ಅನೇಕ ಮಂದಿ ಆಕಾಶಕ್ಕೆ ತಾಗುವಷ್ಟು ಎತ್ತರ, ಸಿಕ್ಕುಗಟ್ಟಿದ್ದ ತಲೆಗೂದಲು.... ನಾನು ನನ್ನ ಕೆನ್ನೆ ಚಿವುಟಿ ನೋಡಿದೆ. ಕನಸಲ್ಲ. ಹೊರಗೆ ನಿಂತಿರುವವರು ಎತ್ತರದ ಮೈಯವರು. ಅವರಲ್ಲಿ ಒಬ್ಬನಿಗಾದರೂ ನನ್ನ ಭಾಷೆ ಗೊತ್ತಾಗಲಾರದೆ ?"

"ಯಾಕಲೇ ಭಾಷೆ ? ಹಾಗಾದ್ರೆ ಅದಾಗಿತ್ತೇನೇ ನಿನ್ನ...."

"ನನ್ನ ಬಂಗಾರಾ, ನಾನು ಒಂದು ಉಪಾಯ ಕಂಡುಕೊಂಡೆ. ಅವರತ್ತ ನೋಡುತ್ತ ಗಟ್ಟಿಯಾಗಿ ಒಂದು ಹಾಡು ಹೇಳಿದೆ. ಹಿಂದೆ ಕಲಿತದ್ದು, ನಿಮ್ಮನ್ನು ಕಟ್ಟಿಕೊಂಡ ಬಳಿಕ. ಒಳಗೇ ಮುಚ್ಚಿಟ್ಟದ್ದು...."

"ನಿನಗೆ ಹಾಡಲೂ ಬರುತ್ತೇನೆ ?"

"ಅವರು ಹತ್ತಿರ ಬರುತ್ತಿಲ್ಲವಾದರೂ, ಹಿಂತಿರುಗಿ ನೋಡುತ್ತಿಲ್ಲವಾದರೂ ನನ್ನ ಧ್ವನಿಗಳು ರೆಕ್ಕೆ ಬಡಿಯುತ್ತ ಹೋಗಿ ಅವರಲ್ಲಿ

ಗೂಡುಗಟ್ಟುತ್ತಿರುವುದನ್ನು ಕಂಡು ನನಗೆ ಹಾಯೆನಿಸಿತು. ಅವಳಿ ಮಕ್ಕಳನ್ನೇ ಅಲ್ಲ, ನಾಲ್ಕು ಮಕ್ಕಳನ್ನು ಹೆತ್ತಂಥ ಸುಖ..."

"ಸಾಕು ಮಾಡು ಪುರಾಣ. ಒಮ್ಮೆ ಮೇಲಿಂದ ಮೇಲೆ ಪೂರ್ತಿ ನೋಡು! ಡ್ರಾಫ್ಟ್ ಕಳುಹಿಸುವ ಬಗ್ಗೆ ಅವಳು ಏನಾದ್ರರೂ ಬರೆದಿರುವಳೆ ? ಅಂತ ನೋಡೇ ವಿಲಾಸಿನಿ ಪುಟ್ಟಿ."

"ಒಂದೇ ಒಂದು ಶಬ್ದವೂ ತಪ್ಪಿ ಹೋಗದ ಹಾಗೆ ನಾನು ನೋಡುತ್ತಾ ಇದ್ದೇನೆ."

"ಹೊರಗೆ ದಿಟ್ಟಿಸುತ್ತಾ ಹಿಂದೆ ನಾನು ಅನುಭವಿಸಿದ್ದ ಬವಣೆಗಳನ್ನೆಲ್ಲ ಒಮ್ಮೊಮ್ಮೆ ಎತ್ತಿ ಎತ್ತಿ ಹೇಳುತ್ತೇನೆ. ಗಾಜಿನ ಪಾತ್ರೆಗಳನ್ನು ತೊಳೆಯುವಾಗ ಕೈಗೆ ಗಾಯವಾದದ್ದು, ಗ್ಯಾಸ್ ಸ್ಟೌವ್‌ನಿಂದ ಕೈ ಸುಟ್ಟುಕೊಂಡದ್ದು, ತಲೆ ಗೋಡೆಗೆ ಚಚ್ಚಿಬಿಟ್ಟದ್ದು, ಮಕ್ಕಳನ್ನೂ ನನ್ನ ಬಂಗಾರನನ್ನೂ ನೆನೆದು ಅತ್ತದ್ದು- ಆ ಮೂಲಕ ನನ್ನ ಬಿಗಿದುಕೊಂಡಿದ್ದ ಉಸಿರಾಟ ತುಸು ಸಡಿಲಾಗತೊಡಗಿತ್ತು."

"ಒಂದು ದಿನ ಬೆಳಿಗ್ಗೆ ಬಾಗಿಲ ಮುಂದೆ ಆಸ್ಪತ್ರೆ ಗಾಡಿ ಕಾಣಿಸಿತು. ನಾನು ಯೋಚಿಸಿದೆ- ಯಾರಿಗೆ ಕಾಯಿಲೆ? ಡ್ರೈವರ್‌ಗೋ ಆಯಾಗೋ? ನಾನು ಪಾತ್ರೆ ತೊಳೆಯುತ್ತಾ ಇದ್ದೆ. ಅರಬ್ಬಿಯವಳು ಹತ್ತಿರ ಬಂದು ಸನ್ನೆ ಮಾಡಿ ಕರೆದಳು.

ನಾನು ಹೋದೆ.

"ಗಾಡಿಯೊಳಗೆ ಹತ್ತು!"

"ಎಲ್ಲಿಗೆ?" ನಾನೂ ಸನ್ನೆ ಭಾಷೆಯನ್ನು ಹೊರ ತೆಗೆದೆ.

ಬಳಿಕ ಪ್ರಶ್ನೆ, ಉತ್ತರ ಒಂದೂ ಇಲ್ಲ. ಗಾಡಿ ಡಾಂಬರು ಬಳಿದು ನುಣುಪಾಗಿರುವ ಮಾರ್ಗವನ್ನು ಸ್ಪರ್ಶಿಸದೆಯೇ ಹಾರತೊಡಗಿತು.

ಈಗ, ನನ್ನ ಬಂಗಾರಾ, ನನಗೆ ಸೌಖ್ಯ. ನಾನಿರುವುದು ಆಸ್ಪತ್ರೆಯಲ್ಲಿ. ಇಲ್ಲಿ ಏನನ್ನೂ ಗಟ್ಟಿಯಾಗಿ ಕೂಗಿ ಹೇಳಬಹುದು. ಹಾಡಬಹುದು. ನನ್ನ ಹಾಗೆಯೇ ಅನೇಕ ಮಂದಿ ಇದ್ದಾರೆ ಇಲ್ಲಿ! ಸೈನಬ, ಮೈಮುನಾ, ತ್ರೇಸಾಮ್ಮ ಮುಂತಾದವರೂ ಗುಂಪಿನಲ್ಲಿ ಇದ್ದಾರೋ ಏನೋ. ಒಬ್ಬಳು ಸಿಸ್ಟರ್ ಇದ್ದಾಳೆ. ಮೇರಿ ಕುಟ್ಟಿ ಅಂತ. ಒಂದು ದಿನ ಪಾಯಿಖಾನೆಯ ಬಾಗಿಲಲ್ಲಿ ಬಂದು ಆಕೆ ನನ್ನೊಡನೆ ಕೇಳಿದಳು,

"ಊರಿಗೆ ಹೋಗಬೇಡವ ?"

"ಬೇಡ. ದುಡಿದು ನಾಲ್ಕು ಕಾಸು ಸಂಪಾದನೆ ಮಾಡಲು ಬಂದವಳು ನಾನು. ಹೆಣ್ಣುಮಕ್ಕಳನ್ನು ಮದುವೆ ಮಾಡಿ ಕಳುಹಿಸಿಕೊಡಬೇಕಲ್ಲ ?"

"ಆಮೇಲೆ ಆಕೆ ಯಾವ ಮಾತೂ ಆಡಲಿಲ್ಲ. ಮಾತಾಡಿಸಲು ನಾನು ಅನೇಕ ಸಲ ಯತ್ನಿಸಿದೆ. ಆಕೆ ಕಂಡೂ ಕಾಣದಂತೆಯೇ ಇದ್ದುಬಿಡುತ್ತಾಳೆ. ನನ್ನ ಬಂಗಾರಾ, ಯಾವತ್ತು ಆಕೆ ನನ್ನನ್ನು ಸಾಗಹಾಕುತ್ತಾಳೋ ಗೊತ್ತಿಲ್ಲ. ನನಗೆ ಕಾಯಿಲೆಯೇನೂ ಇಲ್ಲವೆಂದು ಹೇಳಿ ನಾನು ಮನದಟ್ಟು ಮಾಡಿಸುವುದಾದರೂ ಯಾರನ್ನು ?"

ತಂಗವೇಲು ದಿಗ್ಗನೆ ಎದ್ದುಬಿಟ್ಟ.

"ಹಾಗಾದರೆ ನಿನಗೆ ವಾಪಾಸ್ ಬರೊ ಯೋಚನೆ ಇದೆ ಅಲ್ಲವ ? ಲೇ, ಆ ಆಸೆ ಬಿಟ್ಟುಬಿಡು."

ವಿಲಾಸಿನಿ ತಂಗವೇಲುವನ್ನು ಸಾಂತ್ವನಗೊಳಿಸಲು ಯತ್ನಿಸಿದಳು.

"ಆಕೆ ಬರೋಲ್ಲ ಮಾರಾಯ್ರೆ, ಐದು ವರ್ಷ ದುಡಿದು ನಾಲ್ಕು ಕಾಸು ಸಂಪಾದನೆ ಮಾಡಿದ ನಂತರವೇ ಅವಳು ಬಂದಾಳು."

ತಂಗವೇಲುಗೆ ತಲೆ ಸುತ್ತುಬಂದಂತೆ ಭಾಸವಾಯಿತು ಕೋಣೆಯೊಳಗೆ ಗುಯಿಂಗುಡುತ್ತ ಬಂದು ಸುತ್ತು ಹೊಡೆಯುತ್ತಿರುವ ಒಂದು ದುಂಬಿಯತ್ತ ಅವನು ದುರುಗುಟ್ಟಿ ನೋಡಿದ.



## ಅಚ್ಚಳಿಯದ ಸ್ಮೃತಿಗಳು

# ನನ್ನ ಸತ್ಯಾನ್ವೇಷಣೆ

ಲೇಖಕರು: ಮೋಹನ ಕರಮ್‌ಚಂದ್ ಗಾಂಧೀ: ಭಾಷಾಂತರ-ಗೊರೂರು ರಾಮಸ್ವಾಮಿ ಅಯ್ಯಂಗಾರ್, ಪ್ರಕಾಶಕರು: ನವಜೀವನ ಪ್ರಕಾಶನ ಮಂದಿರ ಅಹಮದಾಬಾದ್-೩೮೦೦೧೪.

ಒಬ್ಬ ಕೆಟ್ಟ ಮಿತ್ರನ ಸಹವಾಸ ನನ್ನನ್ನು ವ್ಯಭಿಚಾರಕ್ಕೂ ಎಳೆಯುವುದರಲ್ಲಿತ್ತು. ಕೊನೆಯ ಗಳಿಗೆಯಲ್ಲಿ ಹೇಗೋ ತಪ್ಪಿಸಿಕೊಂಡೆ. ಒಂದು ಸಲ ಈ ಮಹಾಶಯ ನನ್ನನ್ನು ವ್ಯಭಿಚಾರಕ್ಕೆ ಕರೆದುಕೊಂಡು ಹೋದ. ಮಾಡಬೇಕಾದುದನ್ನೆಲ್ಲ ಹೇಳಿಕೊಟ್ಟು ಒಳಕ್ಕೆ ಕಳುಹಿಸಿದ. ಮೊದಲೇ ಎಲ್ಲವೂ ಏರ್ಪಾಡಾಗಿತ್ತು. ಹಣವನ್ನೂ ಕೊಟ್ಟಾಗಿತ್ತು. ನನ್ನ ಕೆಲಸ, ಪಾಪಕಾರ್ಯವನ್ನು ಮಾಡುವುದೊಂದೇ ಆಗಿತ್ತು. ನಾನು ಪಾಪದ ದವಡೆಗೇ ನುಗ್ಗಿದ್ದೆ. ಆದರೆ ನಾನು ಜಾರಿ ಬೀಳಬೇಕೆಂದರೂ ಈಶ್ವರ ನನ್ನನ್ನು ಕಾಪಾಡಿದ. ಆ ಪಾಪಕೂಪದಲ್ಲಿ ನಾನು ದಿಗ್ಭ್ರಾಂತನಾಗಿ ಮೂಕನಾದೆ. ನನ್ನ ಬಾಯಿಂದ ಮಾತೇ ಹೊರಡಲಿಲ್ಲ. ಲಜ್ಜೆಯಿಂದ ಸ್ತಬ್ಧನಾಗಿ ಆಕೆಯ ಬಳಿ ಮಂಚದ ಮೇಲೆ ಕುಳಿತುಬಿಟ್ಟೆ. ಬಾಯಿಂದ ಶಬ್ದವೂ ಹೊರಡಲಿಲ್ಲ. ಆಕೆಗೆ ಬಹಳ ಸಿಟ್ಟು ಬಂತು. ನನ್ನನ್ನು ನಾಲ್ಕಾರು ಬೈಗುಳ ಬೈದು ಬಾಗಿಲು ತೋರಿಸಿದಳು.

ನನ್ನ ಗಂಡಸುತನಕ್ಕೆ ಅವಮಾನವಾದಂತೆ ತೋರಿತು. ಭೂಮಿ ಬಾಯಿಬಿಟ್ಟರೆ ಮಾಯವಾದೇನು ಎನಿಸಿತು. ಆದರೆ ಹಾಗೆ ನನ್ನನ್ನು ಉದ್ಧಾರ ಮಾಡಿದುದಕ್ಕೆ ಎಂದೆಂದಿಗೂ ದೇವರ ಉಪಕಾರವನ್ನು ಸ್ಮರಿಸುತ್ತೇನೆ. ನನ್ನ ಜೀವನದಲ್ಲಿ ಇಂತಹ ಇನ್ನೂ ಮೂರು ನಾಲ್ಕು ಪ್ರಸಂಗಗಳು ಜ್ಞಾಪಕವಿವೆ. ಇವುಗಳಲ್ಲೆಲ್ಲ ಬಹುಪಾಲು ನನ್ನ ಪ್ರಯತ್ನಕ್ಕಿಂತ ಹೆಚ್ಚಾಗಿ ದೈವಕೃಪೆಯೇ ನನ್ನನ್ನು ಪಾಪದಿಂದ ಪಾರುಮಾಡಿತು. ಸರಿಯಾಗಿ ಸೂಕ್ಷ್ಮದೃಷ್ಟಿಯಿಂದ ನೋಡಿದರೆ ನಾನು ನೀತಿ ಮಾರ್ಗಚ್ಯುತನಾದೆನೆಂದೇ ಹೇಳಬೇಕು. ಏಕೆಂದರೆ ನನ್ನಲ್ಲಿ ವಿಷಯೇಚ್ಛೆ ಇದ್ದುದರಿಂದ ನಾನು ವಿಷಯವನ್ನು ಭೋಗಿಸಿದಂತೆಯೇ ಆಯಿತು. ಆದರೆ ಲೌಕಿಕ ದೃಷ್ಟಿಯಿಂದ ನೋಡಿದರೆ ಇಚ್ಛೆಯಿದ್ದರೂ ಇಚ್ಛೆಗನುಸಾರವಾದ ಕೆಲಸ ಆಗದಿದ್ದರೆ ಆ ಮನುಷ್ಯ ಪ್ರತ್ಯಕ್ಷ ಕರ್ಮದೋಷವನ್ನು ಹೊಂದುವುದಿಲ್ಲ. ಈ ಅರ್ಥದಲ್ಲಿ ಮಾತ್ರ ನಾನು ದೋಷರಹಿತ.

ಕೆಲವು ಕಾರ್ಯಗಳಿಂದ ತಪ್ಪಿಸಿಕೊಳ್ಳುವುದು ಪರಮಾತ್ಮನ ಅನುಗ್ರಹ. ಆದರಿಂದ ಅವನಿಗೂ ಅವನ ಸಂಪರ್ಕದಲ್ಲಿರುವ ವ್ಯಕ್ತಿಗಳಿಗೂ ಒಳ್ಳೆಯದು. ಅನಂತರ ಅವನಲ್ಲಿ ವಿಚಾರ ಶುದ್ಧಿಯುಂಟಾದಾಗ ಹೀಗೆ ತಾನು ತಪ್ಪಿಸಿಕೊಂಡುದು ಈಶ್ವರನ ಅನುಗ್ರಹದಿಂದಲೇ ಎಂದು ಅವನು ತಿಳಿಯುತ್ತಾನೆ. ಎಷ್ಟೇ ಪ್ರಯತ್ನಪಟ್ಟರೂ, ಮನುಷ್ಯ ಕೆಳಕ್ಕೆ ಬೀಳುವುದುಂಟು. ಹಾಗೆಯೇ ದುರ್ಮಾರ್ಗದಲ್ಲಿ ಹೋಗಬೇಕೆಂದು ಎಷ್ಟೇ ಇಚ್ಛೆ ಇದ್ದರೂ ಅವನ ಪ್ರಯತ್ನವೇ ಇಲ್ಲದೆ ಅವನು ಉದ್ಧಾರವಾಗುವುದೂ ಸಂಭವ.

ಇದರಲ್ಲಿ ಮನುಷ್ಯನ ಸ್ವಾತಂತ್ರ್ಯವೆಷ್ಟು ? ದೈವ ಅಥವಾ ಪರಿಸ್ಥಿತಿಯ ಪಾತ್ರವೇನು ? ಯಾವುದಕ್ಕೆ ವಶನಾಗಿ ಮನುಷ್ಯ ಬೀಳುತ್ತಾನೆ ಅಥವಾ ಪಾರಾಗುತ್ತಾನೆ ? ಇವೆಲ್ಲ ಗೂಢವಾದ ಪ್ರಶ್ನೆಗಳು. ಇವಕ್ಕೆ ಈವರೆಗೆ ಸಮರ್ಪಕವಾದ ಉತ್ತರ ದೊರೆತಿಲ್ಲ. ಮುಂದೆಯೂ ದೊರೆಯುವುದಿಲ್ಲ.

★ ಸಂಗ್ರಹ: ಟಿ.ಎಸ್. ಕುಪ್ಪಣ್ಣ

# "ರಾಕ್ಷಸ ಸಂಹಾರ"

ರಾಕ್ಷಸ ಸಂಹಾರ (ಭಾಗ-೧), ಮೂಲ: ಮಲ್ಲಾದಿ ವೆಂಕಟಕೃಷ್ಣಮೂರ್ತಿ, ಅನು: ಸರಿತಾ ಜ್ಞಾನಾನಂದ, ಸಾಗರ ಪ್ರಕಾಶನ: ೧೬೭೯, ೧೫ನೇ ಮುಖ್ಯ ರಸ್ತೆ, ೫ನೇ 'ಎ' ಅಡ್ಡರಸ್ತೆ, ಬನಶಂಕರಿ I ಹಂತ, ೨ನೇ ಬ್ಲಾಕ್, ಬೆಂಗಳೂರು. ಪುಟಗಳು: ೧೫೫ ರಿಂದ ೧೫೭೭ರವರೆಗೆ.

"ಶಿಕ್ಷೆಯಾಗುವಂತೆ ಮಾಡಬೇಕು ಎಂದು ನೀನು ಹೇಗೆ ಬಯಸುತ್ತೀಯೋ ಹಾಗೆಯೆ ಅವರು ಶಿಕ್ಷೆಯಿಂದ ತಪ್ಪಿಸಿಕೊಳ್ಳಬೇಕೆನ್ನುತ್ತಾರೆ. ಅದಕ್ಕಾಗಿ ಎಲ್ಲ ರೀತಿಯ ಪ್ರಯತ್ನಗಳನ್ನೂ ಮಾಡುತ್ತಾರೆ. ನಮ್ಮ ದೇಶದಲ್ಲಿ ಇಂತಹ ಜನರು ಸಾವಿರಾರು ಮಂದಿ ಇದ್ದಾರೆ. ಅವರು ಮಾಡದೇ ಇರುವ ಘೋರ ಕಾರ್ಯವೇ ಇಲ್ಲ. ಅವರಿಗೆ ಗೊತ್ತಿಲ್ಲದಿರುವ ಅಪರಾಧವಿಲ್ಲ. ಅವರು ಕೆಲಸಗಳನ್ನು ಮಾಡುತ್ತಿದ್ದಾರೆ ಎಂಬುದು ಅತ್ತ ಪೋಲಿಸರಿಗೂ ಇತ್ತ ನ್ಯಾಯಾಲಯಕ್ಕೂ ಗೊತ್ತು. ಜನರಿಗೂ ಗೊತ್ತು. ಆದರೂ ಅವರ ಕೂದಲೂ ಕೊಂಕದಂತೆ ಅವರನ್ನು ರಕ್ಷಿಸಿಕೊಂಡೇ ಬರುತ್ತಾರೆ. ಅವರನ್ನು ಯಾರೂ ಹಿಡಿಯಲು, ಮುಟ್ಟರು. ಯಾವುದೇ ನ್ಯಾಯಾಲಯ ಅವರನ್ನು ಶಿಕ್ಷಿಸದು. ಅವರಿಗೆ ಸಂಬಂಧಿಸಿದ ಯಾವುದೇ ಮೊಕದ್ದಮೆ ನ್ಯಾಯಾಲಯದ ಮೆಟ್ಟಲನ್ನೇ ಏರುವುದಿಲ್ಲ. ಅಪ್ಪಿತಪ್ಪಿ ಅಲ್ಲಿಗೆ ಬಂದರೂ ಅಲ್ಲಿ ಡಿಸ್‌ಮಿಸ್ ಆಗುತ್ತದೆ. ಅಥವಾ ಹಲವು ಯುಗಗಳ ಕಾಲ ಹಾಗೇ ಸಾಗುತ್ತದೆ.....

ಈ ನ್ಯಾಯ, ಪೊಲೀಸರು ಎಲ್ಲ ನಿನ್ನಂತಹವರನ್ನು ಶಿಕ್ಷಿಸಲೆಂದೇ ಇವೆ. ಮುಗ್ಧರನ್ನು ಮಾತ್ರವೇ ಅವು ಪೀಡಿಸುತ್ತವೆ. ಅಧಿಕಾರಿಗಳನ್ನು ಐಶ್ವರ್ಯವಂತರನ್ನು ಅವು ದೂರದಿಂದ ಮಾತ್ರವೇ ದರ್ಶನ ಪಡೆಯುತ್ತವೆ ವಿನಾ ಬೇರೇನೂ ಮಾಡುವುದಿಲ್ಲ. ಆದರೆ ಸರ್ಕಾರಕ್ಕಿಂತಲೂ ನ್ಯಾಯಾಲಯುಗಳಿಗಿಂತಲೂ ಶಕ್ತಿವಂತರಾದವರು ಕೆಲವರು ಇದ್ದಾರೆ ಎಂಬುದನ್ನು ನಾನು ಬಲ್ಲೆ. ಸಿಮೆಂಟ್ ಅವ್ಯವಹಾರದ ಬಗ್ಗೆ ಇದುವರೆಗೂ ಎಷ್ಟು ಸಾರಿ ಪತ್ರಿಕೆಗಳಲ್ಲಿ ಓದಿಲ್ಲ? ಸರ್ಕಾರದ ಭೂಮಿಯನ್ನು ಆಕ್ರಮಿಸಿ ಸಾಗುವಳಿ ಮಾಡುತ್ತಿರುವವರ ಬಗ್ಗೆ ಎಷ್ಟು ಸಾರಿ ನಾವು ಕೇಳಿಲ್ಲ? ಕುಸಿದಿರುವ ಬ್ರಿಡ್ಜ್‌ಗಳೆಷ್ಟು? ಒಂದೇ ಮಳೆಗೆ ಕೊಚ್ಚಿ ಹೋಗುವಂತೆ ರಸ್ತೆ ರಿಪೇರಿ ಮಾಡಿರುವ ಕಂಟ್ರಾಕ್ಟರುಗಳೆಷ್ಟು ಮಂದಿ? ರಸ್ತೆ ಬದಿಗಳಲ್ಲಿರುವ ಅಂಗಡಿಗಳಲ್ಲಿ ವ್ಯಾಪಾರವಾಗದಂತೆ 'ಒನ್‌ವೆ' ಜಾರಿಗೆ ತಂದು, ಅಲ್ಲಿ ವ್ಯಾಪಾರಕ್ಕೆ ಬಲವಾದ ಪೆಟ್ಟು ನೀಡಿ, ಲಕ್ಷಾಂತರ ರೂಪಾಯಿ ಲಂಚವಾಗಿ ಪಡೆದು ನಂತರ ಮಾಮೂಲಿ ಸ್ಥಿತಿಯನ್ನು ಜಾರಿಗೆ ತಂದಿರುವ ಎಷ್ಟು ಮಂದಿ ಮಂತ್ರಿಗಳ ಬಗ್ಗೆ ನೀನು ಕೇಳಿಲ್ಲ? ನ್ಯಾಯಸಮ್ಮತವಾಗಿ ನಮ್ಮ ರಾಜ್ಯದಲ್ಲಿ ಸ್ಥಾಪಿತವಾಗಬೇಕಾಗಿರುವ ಕೇಂದ್ರ ಸರ್ಕಾರದ ಕಾರ್ಖಾನೆಗಳು ಸ್ಥಾಪಿತವಾಗಿರುವ ಕೆಲವು ರಾಜಕೀಯ ನಾಯಕರಿಂದಾಗಿ ಇತರ ರಾಜ್ಯಗಳಿಗೆ ದಕ್ಕಿರುವುದನ್ನು ನೀನು ಗಮನಿಸಿಲ್ಲವೆ? ನಮ್ಮಲ್ಲಿ ಇಂತಹ ಅನ್ಯಾಯಗಳನ್ನು ಪತ್ರಿಕೆಗಳಲ್ಲಿ ನಿತ್ಯವೂ ಸಂಕ್ಷಿಪ್ತವಾಗಿ ಓದುತ್ತಿದ್ದರೂ ಇವೆಲ್ಲ ಸಾಗುತ್ತಲೇ ಇರುತ್ತವೆ. ಅವರಲ್ಲಿ ಯಾರಾದರೂ ಒಬ್ಬರೇ ಒಬ್ಬರಾದರೂ ಕಾನೂನಿನ ಕೈಗೆ ಸಿಗುತ್ತಾರೆಯೆ? ಖಂಡಿತವಾಗಿಯೂ ಇಲ್ಲ. ಅವರು ರಾಕ್ಷಸರೆಂದು, ನೆತ್ತರು ಹೀರುವ ಪಿಶಾಚಿಗಳೆಂದು ಗೊತ್ತಿದ್ದು ಅವರನ್ನು ಶಿಕ್ಷೆಗೆ ಗುರಿ ಮಾಡಬೇಕೆಂದು ಜನರು ಬಯಸಿದರೂ ಯಾವುದೇ ಪ್ರಯೋಜನವಾಗದು. ಇವೆಲ್ಲ ಪ್ರಸ್ತುತ ಜೀವನದ ಆಟದಲ್ಲಿ ಒಂದು ಭಾಗ.

★ ಉಷಾ ಕಾರಂತ್

ಪತ್ತೇದಾರಿ ಕಾದಂಬರಿಪ್ರಿಯರಿಗೆ ಮತ್ತು ಪತ್ತೇದಾರಿ ಚಿತ್ರರಸಿಕರಿಗೆ ಚಿರಪರಿಚಿತವಾದ ಹೆಸರು ಇಯಾನ್ ಫ್ಲೆಮಿಂಗ್‌ನದು.

ಆತ ಜನಿಸಿದ್ದು ೧೯೦೮ರಲ್ಲಿ. ಆತನ ತಂದೆ ಮೇಜರ್ ವಾಲೆಂಟನ್ ಫ್ಲೆಮಿಂಗ್ ಬ್ರಿಟಿಷ್ ಪಾರ್ಲಿಮೆಂಟಿನ ಸದಸ್ಯನಾಗಿದ್ದ. ಮೊದಲನೆ ಮಹಾಯುದ್ಧದಲ್ಲಿ ಆತ ಭಾಗವಹಿಸಿದ್ದ ಮತ್ತು ಫ್ರಾನ್ಸಿನ ಯುದ್ಧರಂಗದಲ್ಲಿ ಕೊಲ್ಲಲ್ಪಟ್ಟಿದ್ದ. ತಂದೆಯ ಮರಣಾನಂತರ ತಾಯಿ ಎವಲಿನ್ ಫ್ಲೆಮಿಂಗ್ ಕುಟುಂಬದ ಭಾರವನ್ನು

# ಜೇಮ್ಸ್‌ಬಾಂಡ್‌ನ ಜನಕ-ಇಯಾನ್ ಫ್ಲೆಮಿಂಗ್

ಹೊರಬೇಕಾಯಿತು. ಪೀಟರ್, ಇಯಾನ್, ಮೈಕೇಲ್, ರಿಚರ್ಡ್ ಆಕೆಗೆ ನಾಲ್ವರು ಪುತ್ರರು. ರಾಜರು ಕಲಿಯುವ ಶಾಲೆಯಲ್ಲೇ ಇವರಿಗೆಲ್ಲ ಶಿಕ್ಷಣದ ವ್ಯವಸ್ಥೆಯಾಯಿತು.

ಕ್ರೀಡೆಯಲ್ಲಿ ಮುಂದಿದ್ದರೂ ಕಲಿಯುವುದರಲ್ಲಿ ಇಯಾನ್ ಹಿಂದೆ ಇದ್ದ. ಆದರೂ ವಿದ್ಯಾಭ್ಯಾಸದನಂತರ ತಂದೆಯಂತೆಯೇ ಸೇನೆಯಲ್ಲಿ ಉದ್ಯೋಗಸ್ಥನಾಗಲು ಇಚ್ಛಿಸಿದ. ಸೈನಿಕ ಶಾಲೆ ಪ್ರವೇಶಿಸಿದ. ಸೆಕೆಂಡ್ ಲೆಫ್ಟಿನೆಂಟ್ ಆಗಿ ಉದ್ಯೋಗವೂ ದೊರೆಯಿತು. ಆದರೆ ವಿಧಿ ಬೇರೆ ಇತ್ತು! ಆ ಉದ್ಯೋಗದಿಂದ ತೃಪ್ತಿ ದೊರೆಯದೆ ರಾಜೀನಾಮೆ ನೀಡಿ ಎರಡು ವರ್ಷಗಳ ಕಾಲ ಜರ್ಮನ್ ಭಾಷೆಯನ್ನೂ ಫ್ರೆಂಚ್ ಭಾಷೆಯನ್ನೂ ಕಲಿತ. ಆದರಲ್ಲಿ ಪ್ರವೀಣನೂ ಆದ. ಬ್ರಿಟಿಷ್ ವಿದೇಶ ಇಲಾಖೆಯ ಪರೀಕ್ಷೆಯೊಂದರಲ್ಲಿ ಅನುತ್ತೀರ್ಣನಾದದ್ದೂ ಆಯಿತು. ಇಷ್ಟಾಗುವಾಗ ಆತನ ಇತರ ಮೂವರು ಸಹೋದರರು ತಮ್ಮ ಜೀವನದ, ಮಾರ್ಗವನ್ನು ಕಂಡುಕೊಂಡಿದ್ದರು. ರಿಚರ್ಡ್ ಬ್ಯಾಂಕರ್ ಆಗಿದ್ದ. ಪೀಟರ್ ಸಂಚಾರಿ ಸಾಹಿತಿಯಾದ. ಮೈಕೇಲ್ ಸೈನ್ಯದಲ್ಲಿ ಸೇರಿದ್ದ. ಪೀಟರ್, ರಿಚರ್ಡ್ ಪ್ರಶಸ್ತಿ ಪುರಸ್ಕಾರದೊಂದಿಗೆ ಬಡ್ತಿಯನ್ನು ಪಡೆದರು. ಮೈಕೇಲ್ ತಂದೆಯಂತೆ ಸೈನ್ಯದಲ್ಲಿ ಸಾವನ್ನಪ್ಪಿದ.

ಇಯಾನ್‌ನ ತಾಯಿಗೆ ಚಿಂತೆಯಾಯಿತು. ತಾನೇನು ಮಾಡಬೇಕೆಂಬುದರ ಬಗ್ಗೆ ಆತ ಯಾವ ತೀರ್ಮಾನವನ್ನೂ ತಳೆದಿರಲಿಲ್ಲ. ಆಸಕ್ತಿಯಿಂದ ಕೆಲವು ಲೇಖನಗಳನ್ನಷ್ಟೇ ಬರೆದಿದ್ದ. ಪತ್ರಿಕಾ ರಂಗದಲ್ಲಿ ದುಡಿಯುವ ಇಚ್ಛೆಯನ್ನು ವ್ಯಕ್ತಪಡಿಸಿದ. ತಾಯಿಯೇ ಆತನಿಗೆ ರಾಯ್ಟರ್ ಸಂಸ್ಥೆಯ ವಾರ್ತಾ ಸಂಸ್ಥೆಯಲ್ಲಿ ಸೇರಿಸಿದಳು. ಅಂದು ಆ ಸಂಸ್ಥೆಯ ಅಧ್ಯಕ್ಷನಾಗಿದ್ದ ಸರ್ ರೊಡ್ರಿಗ್ಸ್ ಜೋನ್ಸ್ ಎವಲಿನ್‌ಳ ಮಿತ್ರನಾಗಿದ್ದ.

ಪತ್ರಿಕಾ ರಂಗದ ಉದ್ಯೋಗ ಇಯಾನ್‌ನಿಗೆ ತುಂಬಾ ಇಷ್ಟವಾಯಿತು. ರಾಯ್ಟರ್ ಪ್ರತಿನಿಧಿಯಾಗಿ ಯುರೋಪನ್ನೆಲ್ಲ ಸಂಚರಿಸುವ ಅವ

★ ಎಂ.ವಿ. ಶರ್ಮಾ ತದ್ದಲಸೆ

ಕಾಶ ಅವನಿಗೆ ಲಭಿಸಿತು. ರಾಯ್ಟರ್ ಸಂಸ್ಥೆಯ ವಿದೇಶ ಪ್ರಮುಖ ಪ್ರತಿನಿಧಿಯೊಬ್ಬರು ಇಯಾನ್‌ನಿಗೆ ಹೇಳಿದರು: "ನೀನು ರಷಿಯನ್ ಭಾಷೆ ಕಲಿತುಕೋ. ಅಂದರೆ ನಿನ್ನನ್ನು ಮಾಸ್ಕೋಗೆ ಕಳಿಸುತ್ತೇನೆ, ಎಂದು" ಇಯಾನ್ ಒಪ್ಪಿದ.

೧೯೩೩ರಲ್ಲಿ ಇಯಾನ್ ಫ್ಲೆಮಿಂಗ್ ರಾಯ್ಟರ್ ವಾರ್ತಾಸಂಸ್ಥೆಯ ಮಾಸ್ಕೋದ ಮುಖ್ಯಸ್ಥನಾದ. ಮಾಸ್ಕೋದಲ್ಲಿ ತನ್ನ ಉದ್ಯೋಗವನ್ನು ತುಂಬ ಉತ್ಸಾಹದಿಂದ ಮಾಡಿದ. ಅನಂತರ ಸ್ವದೇಶಕ್ಕೆ ಹಿಂತಿರುಗಿದ ಇಯಾನ್‌ನನ್ನು ಇನ್ನೂ ದೂರದ ದೇಶಗಳಿಗೆ ಕಳಿಸಲು ರಾಯ್ಟರ್ ಸಂಸ್ಥೆ ನಿಶ್ಚಯಿಸಿತು. ಆದರೆ ಇಯಾನ್ ಇದಕ್ಕೊಪ್ಪದೆ ಉದ್ಯೋಗಕ್ಕೆ ರಾಜೀನಾಮೆ ನೀಡಿದ. ಅನಂತರ ಹಲವಾರು ವರ್ಷ ಶೇರು ದಲ್ಲಾಳಿಯಾಗಿ ದುಡಿದ.

೧೯೩೯ರಲ್ಲಿ ಇಂಗ್ಲೆಂಡಿನ ಟೈಮ್ಸ್ ಪತ್ರಿಕೆ ಇಯಾನ್‌ನನ್ನು ವಿಶೇಷ ಪ್ರತಿನಿಧಿಯಾಗಿ ಮಾಸ್ಕೋಗೆ ಕಳಿಸಿತು. ಆದರೆ ಈ ಬಾರಿ ಆತ ಮಾಸ್ಕೋಗೆ ತೆರಳಿದ್ದು ಬ್ರಿಟಿಷ್ ಗುಪ್ತಚಾರನಾಗಿ! ಅದೂ ಪತ್ರಿಕಾ ಪ್ರತಿನಿಧಿಯ ಪಾತ್ರದಲ್ಲಿ!

೧೯೪೧ರಲ್ಲಿ ಇಯಾನ್ ಫ್ಲೆಮಿಂಗ್ ಬ್ರಿಟಿಷ್ ನೌಕಾಸೇನೆಯಲ್ಲಿ ಗೂಢಚಾರನಾಗಿ ನೇಮಿಸಲ್ಪಟ್ಟ. ಪ್ರಮುಖ ಗೂಢಚಾರನಾದ ಆಡ್ಮಿರಲ್ ಜೋನ್ ಗಾಡ್‌ಫ್ರೀಯ ಸಹಾಯಕನಾಗಿ ದುಡಿದ. ಇವರಿಬ್ಬರೂ ಗೂಢಚಾರರಾಗಿ ಹಲವಾರು ಕಡೆ ಸಂಚರಿಸಿದರು. ೧೯೪೨ರಲ್ಲಿ ಫ್ಲೆಮಿಂಗ್ ಒಂದು ಸಮ್ಮೇಳನದಲ್ಲಿ ಪಾಲ್ಗೊಳ್ಳಲು ವೆಸ್ಟ್‌ಇಂಡೀಸಿನ ಜಮೈಕಾಕ್ಕೆ ತೆರಳಿದ. ಆ ನಗರ ಆತನ ಮನಸ್ಸನ್ನು ಸೂರೆಗೊಂಡಿತು. ೧೯೪೬ರಲ್ಲಿ ನಾವಿಕ ಸೇವೆಯಿಂದ ನಿವೃತ್ತನಾಗಿ ಆತ ಮತ್ತೆ ಜಮೈಕಾಕ್ಕೆ ಆಗಮಿಸಿ. ಒಂದು ಸುಸಜ್ಜಿತವಾದ ಬಂಗಲೆಯನ್ನು ಕಟ್ಟಿಕೊಂಡ. ಅದಕ್ಕೆ 'ಗೋಲ್ಡನ್ ಐ' ಎಂದು ಹೆಸರಿಟ್ಟ. ಶಿಶಿರಕಾಲವನ್ನು ಇಲ್ಲಿ ಕಳೆದು ಇಂಗ್ಲೆಂಡಿಗೆ ಹಿಂತಿರುಗಿದ. ಆಗ 'ಸಂಡೆ ಟಾಯಿಮ್ಸ್' ಗುಂಪಿನ ಅಧಿಕಾರಿಯಾದವರು ಆತನನ್ನು ಉದ್ಯೋಗಕ್ಕೆ ಸೇರಿಸಿಕೊಂಡರು. ಆದರೆ ತನಗೆ ಶಿಶಿರಕಾಲದ ಎರಡು ತಿಂಗಳು ಮಾತ್ರ ಜಮೈಕಾಕ್ಕೆ ತೆರಳಿ ವಾಸಮಾಡಲು ಪ್ರತಿ ವರ್ಷವೂ ಅವಕಾಶವಿರಬೇಕೆಂದು ಷರತ್ತು ಹಾಕಿದ. ಅದಕ್ಕೂ ಒಪ್ಪಿಗೆ ದೊರೆಯಿತು.

೧೯೫೧ರಲ್ಲಿ ಪತ್ರಿಕಾ ವ್ಯವಸಾಯಿಯಾದ ರೊಥರ್ ಮೀರ್‌ನ ಪತ್ನಿಯಾದ ಆ್ಯನ್‌ಳನ್ನು ಇಯಾನ್ ನೋಡಿದ. ಇಯಾನ್ ಮತ್ತು ಆ್ಯನ್ ಪರಸ್ಪರ ಅನುರಕ್ತರಾದರು. ಇಯಾನ್‌ನಿಗೆ ಜೀವನದಲ್ಲೇ ಪ್ರಥಮ ಬಾರಿಗೆ ವಿವಾಹದ ಬಯಕೆಯುಂಟಾಯಿತು. ಇತ್ತ ಆ್ಯನ್ ವಿವಾಹ ವಿಚ್ಛೇದನಕ್ಕೋಸ್ಕರ ಅರ್ಜಿ ಸಲ್ಲಿಸಿದಳು. ೧೯೫೨ರಲ್ಲಿ ಫೆಬ್ರುವರಿ ತಿಂಗಳಲ್ಲಿ ವಿವಾಹ ವಿಚ್ಛೇದನ ದೊರೆಯಿತು. ಮಾರ್ಚ ತಿಂಗಳಲ್ಲಿಯೇ ಜಮೈಕಾದಲ್ಲಿ ಇಯಾನ್‌ನೊಡನೆ ಆ್ಯನಳ ವಿವಾಹ ನಡೆಯಿತು.

ಆ್ಯನ್‌ಳಿಗೆ ಇದು ಮೂರನೇ ವಿವಾಹ. ಪ್ರಥಮ ವಿವಾಹದಿಂದ ಅವಳಿಗೆ ಒಂದು ಹೆಣ್ಣು ಮಗುವಿತ್ತು. ವಿವಾಹವಾಗುವ ಇಚ್ಛೆ ಅಂಕುರಿಸಿದಂದಿನಿಂದ ವಿವಾಹವಾಗುವವರೆಗೆ ಇಯಾನ್‌ನ ಮನಃಸ್ಥಿತಿ ಅನಿಶ್ಚಿತವಾಗಿತ್ತು. ಆಗಲೇ ಅದನ್ನು ಹತ್ತಿಕ್ಕಲು ಆತ ಕಾದಂಬರಿ ಬರೆಯಲು ಯತ್ನಿಸಿದ್ದು!

ಜಮೈಕಾದ ತನ್ನ ಸ್ವಂತ ಬಂಗಲೆಯಲ್ಲಿಯೇ ಶಿಶಿರ ಕಾಲದಲ್ಲಿ ಬರೆಯಲು ಕುಳಿತ. ಎರಡನೇ ಮಹಾಯುದ್ಧದ ಕಾಲದಲ್ಲಿ ಬ್ರಿಟಿಷ್ ನಾವಿಕ ಸೇನೆಯಲ್ಲಿ ಗುಪ್ತಚಾರನಾಗಿ ದುಡಿದ ಅನುಭವವನ್ನೇ ಆತ ಅಭಿವ್ಯಕ್ತಿಸಿದ. ತನ್ನ ಕಾದಂಬರಿಯ ಕಥಾನಾಯಕನಿಗೆ ಹೆಸರಿಡುವ ಬಗ್ಗೆ ಆತನಲ್ಲಿ ಗೊಂದಲವುಂಟಾಯಿತು. ಕಪಾಟಿನಲ್ಲಿಯ ಪುಸ್ತಕವನ್ನು ಓದುತ್ತಿದ್ದಾಗ ಫಕ್ಕನೆ ಹೊಳೆಯಿತು. ಆ ಪುಸ್ತಕ ಅಮೆರಿಕನ್ ಪಕ್ಷಿ ಶಾಸ್ತ್ರಜ್ಞನೊಬ್ಬನು ಬರೆದ 'ವೆಸ್ಟಿಂಡೀಸಿನ ಹಕ್ಕಿಗಳು'. ಆ

ಗ್ರಂಥದ ಲೇಖಕನ ಹೆಸರು ಜೇಮ್ಸ್ ಬಾಂಡ್! ಈ ಹೆಸರನ್ನೇ ಇಯಾನ್ ತನ್ನ ಕಥಾನಾಯಕನಿಗೆ ನೀಡಿದ. ಕೊನೆಗೂ ಆ ಕಾದಂಬರಿ ಪೂರ್ತಿಯಾಯಿತು. ಅದೇ 'ಕ್ಯಾಸಿನೋ ರಾಯಲ್'.

ತಾನು ಬರೆದ ಕಾದಂಬರಿ ಬಹಳ ತುಚ್ಛವೆಂದೇ ಇಯಾನ್ ಭಾವಿಸಿದ್ದ. ಮಿತ್ರರು ಅದನ್ನು ನೋಡಿದರೆ ತಾನು ನಗೆಗೀಡಾಗಬಹುದೆಂದು ತಿಳಿದಿದ್ದ. ಅದಕ್ಕಾಗಿ ಹಸ್ತಪ್ರತಿಯನ್ನು ತುಂಬಾ ಸಮಯದವರೆಗೆ ಪೆಟ್ಟಿಗೆಯೊಂದರಲ್ಲಿ ಭದ್ರವಾಗಿರಿಸಿದ್ದ. ಆದರೆ ಒಂದು ದಿನ ಮಿತ್ರನೊಡನೆ ಸಲ್ಲಾಪದಲ್ಲಿ ತೊಡಗಿದ್ದಾಗ ಆತ ತಾನು ಬರೆದ ಕಾದಂಬರಿಯ ಪ್ರಸ್ತಾಪ ಮಾಡಿದ. ಲಂಡನ್ನಿನ ಒಂದು ಪ್ರಕಾಶನ ಸಂಸ್ಥೆಯಲ್ಲಿ ಆ ಮಿತ್ರ ದುಡಿಯುತ್ತಿದ್ದ. ಕುತೂಹಲಿಯಾಗಿ ಆತ ಹಸ್ತಪ್ರತಿಯನ್ನು ಓದಿದ.

'ಕ್ಯಾಸಿನೋ ರಾಯಲ್' ಪ್ರಕಟಿಸಿದ ವರ್ಷವೇ ಅದರ ಏಳು ಸಾವಿರ ಪ್ರತಿಗಳು ಮಾರಾಟವಾದವು. ಇದು ಇಯಾನನಿಗೆ ಹೊಸ ಸ್ಫೂರ್ತಿ ನೀಡಿತು. ನಂತರ ಪ್ರತಿ ವರ್ಷವೂ ಶಿಶಿರಕಾಲದಲ್ಲಿ ಆತ ಒಂದೊಂದಾಗಿ ಕಾದಂಬರಿಗಳನ್ನು ಬರೆದ. ೧೯೬೪ರಲ್ಲಿ ಆತ ನಿಧನನಾಗುವವರೆಗೂ ಬರೆದೇ ಬರೆದ. ಹೀಗೆ ಆತ ಬರೆದ ಪುಸ್ತಕಗಳು ಒಟ್ಟು ಹದಿಮೂರು.

'ಕ್ಯಾಸಿನೋ ರಾಯಲ್'ನ ನಾಯಕ ಜೇಮ್ಸ್‌ಬಾಂಡನೇ ಎಲ್ಲಾ ಕಾದಂಬರಿಗಳಲ್ಲೂ ಪ್ರಮುಖ ವ್ಯಕ್ತಿ. 'ಸ್ವತಂತ್ರ ವಿಶ್ವ' ವೆಂದು ಕರೆಯಲ್ಪಡುವ ಆಂಗ್ಲೋ ಅಮೆರಿಕನ್ ಕೂಟದ ಸಂರಕ್ಷಕನಾಗಿ ಇಯಾನ್ ಫ್ಲೆಮಿಂಗ್ ಜೇಮ್ಸ್‌ಬಾಂಡ್‌ನ ವ್ಯಕ್ತಿತ್ವವನ್ನು ಚಿತ್ರಿಸಿದ್ದಾನೆ. ಆದಕ್ಕಾಗಿಯೇ ಅಮೆರಿಕ ಇಂಗ್ಲೆಂಡ್‌ಗಳಲ್ಲಿ ಅವನ ಕಾದಂಬರಿಗಳು ಲಕ್ಷ ಸಂಖ್ಯೆಯಲ್ಲಿ ಮಾರಾಟವಾದವು.

ಇಯಾನ್ ಫ್ಲೆಮಿಂಗ್‌ನ ಕಾದಂಬರಿಗಳು ಸೆಲ್ಯೂಲಾಯ್ಡ್ ಪ್ರಪಂಚದಲ್ಲಿ ಬೇರೆಯಾಗಿಯೆ ಚಿತ್ರಿತವಾದವು. ೦೦೭ ಎಂಬ ಗುಪ್ತ ಸಂಖ್ಯೆ ಹೊಂದಿ ಜೇಮ್ಸ್ ಬಾಂಡ್ ಜನಿಸಿದ. ಈ ಜೇಮ್ಸ್ ಬಾಂಡ್ ಕಾದಂಬರಿಗಳು ಚಿತ್ರಗಳಾದಂತೆ ಪ್ರಪಂಚದಾದ್ಯಂತ ಒಂದು ಸಾಂಸ್ಕೃತಿಕ ಕ್ರಾಂತಿಯೇ ಆಯಿತು.

ಬೇಹುಗಾರಿಕೆಯ ಅನುಭವ ಹಾಗೂ ಶಕ್ತಿ ಬಣಗಳ ನಡುವೆ ನಡೆದ ಸ್ಪರ್ಧೆಯ ಹಿನ್ನೆಲೆಯಲ್ಲಿ ಇಯಾನ್ ರಚಿಸಿದ ರಮ್ಯಕೃತಿಗಳ ನಾಯಕ ಬಾಂಡ್. ತೆರೆಯ ಮೇಲೆ ಅವನು ಅಜೇಯ. ಅವನೇ ಒಂದು ದಂತಕಥೆಯಾದ. ವಿಶ್ವದಾದ್ಯಂತ ಜೇಮ್ಸ್‌ಬಾಂಡ್ ಎಬ್ಬಿಸಿದ ಕೋಲಾಹಲವನ್ನು ನೋಡುವ ಭಾಗ್ಯ ಇಯಾನ್ ಫ್ಲೆಮಿಂಗ್‌ನಿಗೆ ಇರಲಿಲ್ಲ. ೧೯೬೪ರ ಆಗಸ್ಟ್ ೧೨ ರಂದು ಆತ ಕೊನೆಯುಸಿರೆಳೆದ.

ಇಯಾನ್ ಫ್ಲೆಮಿಂಗ್‌ನ ಕಾದಂಬರಿಗಳು ಸಾಲು ಸಾಲಾಗಿ ಚಲನಚಿತ್ರಗಳಾದವು. 'ಗೋಲ್ಡ್ ಫಿಂಗರ್', 'ಥಂಡರ್ ಬಾಲ್', 'ಯು ಓನ್ಲಿ ಲಿವ್ ಟ್ವೈಸ್' ಮುಂತಾದವು ಯಶಸ್ವಿ ಚಿತ್ರಗಳಾದವು.

'ಕ್ಯಾಸಿನೋ ರಾಯಲ್'ದಿಂದ ಬಂದ ಜೇಮ್ಸ್ ಬಾಂಡ್‌ನ ಸಾಹಸಗಳು, ಉಸಿರುಗಟ್ಟಿಸುವ ಚೇಸ್ ದೃಶ್ಯಗಳು, ಶತ್ರುವಿನ ಗುಪ್ತ ನೆಲೆಯನ್ನು ಸ್ಫೋಟಗೊಳಿಸುವ ಕ್ಲೈಮಾಕ್ಸ್ ಇವೆಲ್ಲ ಪ್ರೇಕ್ಷಕನಿಗೆ ಹೊಸ ಹೊಸ ಅನುಭವ ನೀಡಿದವು. ಬಾಂಡಿಸಮ್ ಬಲವಾಗಿ ಬೇರುಬಿಡಲು ಕಾರಣವಾಯಿತು.

ಇಷ್ಟೊಂದು ಜನಪ್ರಿಯನಾದ ಜೇಮ್ಸ್‌ಬಾಂಡ್‌ನ ಜನಕ ಇಯಾನ್ ಫ್ಲೆಮಿಂಗ್‌ನ ಸ್ಮಾರಕ ಫಲಕವನ್ನು ಕೆಲಕಾಲದ ಹಿಂದೆ ಲಂಡನ್ನಿನಲ್ಲಿ ಅನಾವರಣಗೊಳಿಸಲಾಯಿತು. ಈ ಫಲಕವನ್ನು ಇಯಾನ್ ಫ್ಲೆಮಿಂಗ್ ಕೆಲ ಕಾಲ ವಾಸಿಸಿದ್ದ ಪಿಮ್ಲಿಕೊ ಜಿಲ್ಲೆಯಲ್ಲಿ ನಿಲ್ಲಿಸಲಾಗಿದೆ.



✷ ವಿಜಯ ಹೆಮ್ಮಿಗೆ

# ಅಬ್ಬಾ! ಆ ಸೈಕಲ್ ಪ್ರವಾಸ!

೧೯೭೭ನೆಯ ಇಸವಿ. ನಾನು ಎರಡನೇ ಬಿ. ಕಾಂನಲ್ಲಿ ಓದುತ್ತಿದ್ದೆ. ನನ್ನ ನಿಕಟವರ್ತಿ ಸಹಪಾಠಿಗಳಾದ ಗುರುರಾಜ (ಆಚಾರಿ), ಸುಬ್ಬಯ್ಯ, ವೆಂಕ, ಸುರೇಶ, ವೆಂಕಟಾದ್ರಿ ಎಲ್ಲರೂ ಕಾಲೇಜಿಗೆ ಸೈಕಲ್ಲನ್ನೇ ತರುತ್ತಿದ್ದರು. ನಮ್ಮ ತಂಡದಲ್ಲಿ ನನ್ನನ್ನೂ ಸೇರಿಸಿ ಮೂವರೂ ಎನ್. ಸಿ. ಸಿ. ಅಂಡರ್ ಆಫೀಸರ್ ಆಗಿದ್ದೆವು. ಈಗಿನಹಾಗೆ ಆಗೆಲ್ಲಾ ವಿದ್ಯಾರ್ಥಿಗಳಿಗೆ ಸ್ಕೂಟರ್, ಬೈಕ್‌ಗಳು ಅಷ್ಟು ಸಲೀಸಾಗಿರಲಿಲ್ಲ. ನಾವು ಆಗಾಗ ಸಣ್ಣ ಪುಟ್ಟ ಪಿಕನಿಕ್‌ಗಳಿಗೆ, ಬಲಮುರಿ, ಕರಿಘಟ್ಟ, ರಂಗನತಿಟ್ಟು, ಮೇಲುಕೋಟೆ ಹೀಗೆ ಬೇರೆ ಬೇರೆ ಸ್ಥಳಗಳಿಗೆ ಹೋಗಿ ಬರುತ್ತಿದ್ದೆವು.

ಒಮ್ಮೆ ಬೆಳಿಗ್ಗೆ ಕಾಲೇಜಿಗೆ ಬಂದಾಗ ಮೊದಲನೆಯ ಪಿರಿಯಡ್ದು ಇರಲಿಲ್ಲ. ಹೀಗಾಗಿ ಎಲ್ಲರೂ ಕಾಲೇಜಿನ ಮುಂಭಾಗದ ಮರದ ಕೆಳಗೆ ಕೂತು ಮಾತಾಡುತ್ತಿದ್ದೆವು. ನಾನು ಮಾತಿಗೆ, "ಲೋ, ಎಲ್ರೂ ಒಂದು ಸಾರಿ ಬಿಳಿಗಿರಿ ರಂಗನ ಬೆಟ್ಟಕ್ಕೆ ಸೈಕಲ್‌ನಲ್ಲಿ ಹೋಗಿ ಬಂದ್ರೆ ಹೇಗೆ?" ಎಂದೆ. ಕೂಡಲೇ ಎಲ್ಲರಿಗೂ ಒಂದು ರೀತಿಯ ಖುಷಿಯಾಯಿತು. ಗುರುರಾಜನಂತೂ, "ನಾನೇ ಹೇಳೋಣ ಅಂತಿದ್ದೆ, ಈಗ ನೀನೇ ಹೇಳಿದೆಯಲ್ಲಾ, ಯಾವಾಗ, ಎಲ್ಲಿ, ಎಲ್ಲಾ ಪ್ಲಾನ್ ಮಾಡ್ರಯ್ಯ," ಎಂದ. ಸುಬ್ಬ, "ಇಂತಹದಕ್ಕೆಲ್ಲಾ ಪ್ಲಾನೂ ಗೀನೂ ಬೇಡಾ, ಹೀಗೆಯೇ ಹೋಗೋಣ, ಎಂದಾಗ ನಾನು,"ಮನೇಲಿ ಹೇಳಿಲ್ಲ. ಬಂದರೆ ಬೆಂಡೆತ್ತಿ ಶೇಪ್ ನಿಕಾಲ್ ಮಾಡ್ತಾರೆ ಅಷ್ಟೆ," ಎಂದೆ. ಕೊನೆಗೆ ಮಾರನೆಯ ದಿನವೇ ಹೋಗುವುದೆಂದು ತೀರ್ಮಾನವಾಯಿತು. ಅಷ್ಟರಲ್ಲಿ ನಮ್ಮ ತಂಡಕ್ಕೆ ಇನ್ನೂ ಇಬ್ಬರು ಬಂದು ಸೇರಿ, ಒಟ್ಟು ಎಂಟು ಮಂದಿ ಆದೆವು.

ಬೆಳಿಗ್ಗೆಯೇ ಆಚಾರಿ, ಚಪಾತಿ ಪಲ್ಯ ಮಾಡಿಸಿಕೊಂಡು ತಂದಿದ್ದ. ಸುಬ್ಬಯ್ಯ ಕೂರ್ಗಿಯಾದ್ದರಿಂದ, ಬೇಯಿಸಿದ ಮೊಟ್ಟೆಗಳು, ಆಮ್ಲೆಟ್, ಹಸಿ ತರಕಾರಿಗಳನ್ನು, ತಂದಿದ್ದ. ನಾನು ಮನೆಯಲ್ಲಿ ಹೇಳಿರಲಿಲ್ಲ. ಅದೂ ಅಲ್ಲದೆ ನನ್ನ ಸೈಕಲ್ ಸರಿಯಿರಲಿಲ್ಲ. ಆದರೆ ಬೆಳಿಗ್ಗೆ ಅವರು ಹೇಳಿದ ಜಾಗಕ್ಕೆ ಬಂದು, "ನಾನು ಬರೋದಕ್ಕೆ ಆಗೊಲ್ಲ," ಎಂದಿದ್ದೇ ತಡ, ಎಲ್ಲರೂ ನನ್ನ ಮೇಲೆಯೇ ಎಗರಿ ಬಿದ್ದರು. "ಏನು ಆಗುತ್ತೆ ನೋಡೇ ಬಿಡೋಣ. ಎಲ್ಲದಕ್ಕೂ ನಾವಿಲ್ಲವಾ?" ಎಂದು ನನ್ನನ್ನು ಹೊರಡಿಸಿಬಿಟ್ಟರು.

ಮೈಸೂರು ಬಿಟ್ಟಾಗ ಎಲ್ಲರಿಗೂ ಅದೇನೋ ವಿಶೇಷ ಹುರುಪು. ಆಗೆಲ್ಲಾ ಸೈಕಲ್ ಮೇಲೆ ಪ್ರಯಾಣಿಸುವುದೆಂದರೆ

ಏನೋ ಒಂದು ರೀತಿಯ ಉತ್ಸಾಹ. ಅದರಲ್ಲಂತೂ ರಸ್ತೆಯ ಬದಿಯ ಜನರು ನಮ್ಮನ್ನು ನೋಡಿದಾಗ ನಮ್ಮ ಉತ್ಸಾಹ ಇಮ್ಮಡಿ ಯಾಗುತ್ತಿತ್ತು. ಒಬ್ಬೊಬ್ಬರು ಪಕ್ಕದವರೊಂದಿಗೆ, ನಿಧಾನವಾಗಿ ಅದೂ ಇದೂ ಎಂದು ಮಾತಾಡಿಕೊಂಡು ಹೋಗುತ್ತಿದ್ದೆವು. ನಮ್ಮ ತಂಡವನ್ನು ಮೂರು ಭಾಗಗಳಾಗಿ ವಿಭಜಿಸಿದ್ದೆವು. ಮುಂಚೂಣಿಯಲ್ಲಿ ನಾನು ಮತ್ತು ವೆಂಕ. ಮಧ್ಯದಲ್ಲಿ ಆಚಾರಿ, ವೆಂಕಟಾದ್ರಿ, ಸುಬ್ಬ, ಸುರೇಶ ಹಾಗೂ ಹಿಂದುಗಡೆಯಲ್ಲಿ ಗುರುನಾಥ ಮತ್ತು ರಘು ಎಂಬುವರು ಬರುತ್ತಿದ್ದೆವು.

ನಂಜನಗೂಡು ತಲುಪಿದಾಗ ಹಿಂದಿನ ಗುರು ಮತ್ತು ರಘು ಎಂಬುವರು ಯಾಕೋ ಹಿಂದೆ ಹಿಂದೆ ಬೀಳುತ್ತಿದ್ದರು. ಕೊನೆಗೆ ಅವರು ನಾವು ಮುಂದುವರಿಯಲು ಸಾಧ್ಯವಿಲ್ಲವೆಂದಾಗ ಅವರನ್ನು ಕೈಬಿಡುವ ಪರಿಸ್ಥಿತಿ ಎದುರಾಯಿತು. ಅಲ್ಲಿ ಕಾಫಿ, ತಿಂಡಿ ಮುಗಿಸಿ ನಾವು ನಂಜನಗೂಡು ಬಿಟ್ಟಾಗ ಬೆಳಿಗ್ಗೆ ೯-೩೦ ಆಗಿತ್ತು.

ನಂಜನಗೂಡು ಬಿಟ್ಟನಂತರ ನಾವು ಚಾಮರಾಜನಗರಕ್ಕೆ ಮಧ್ಯಾಹ್ನ ೪ ಗಂಟೆಗೆ ತಲುಪಿದೆವು. ಅಲ್ಲಿ ಹೋಟೆಲಿನಲ್ಲಿ ಊಟ ಮಾಡಿ ಕಾಫಿ ಕುಡಿದೆವು. ದಾರಿಯಲ್ಲಿ ಸಿಗುವ ಗದ್ದೆ, ಕಬ್ಬಿನ ತೋಟಗಳು, ಹೀಗೆ ಕಣ್ಣಿಗೆ ಹಬ್ಬ ಉಂಟುಮಾಡುವ ಪ್ರಕೃತಿಯನ್ನು ಸವಿಯುತ್ತಾ, ಅಲ್ಲಲ್ಲಿ ಕಬ್ಬಿನ ತೋಟದಲ್ಲಿ ಕೆಲಸ ಮಾಡುವ ಕೆಲಸದವರನ್ನು ಕೇಳಿ ಕಬ್ಬಿನ ಜಲ್ಲೆ ಪಡೆದು ಅದನ್ನು ಕಚ್ಚುತ್ತಾ, ಸ್ವಾದವನ್ನು ಅನುಭವಿಸುತ್ತಾ, ಮುಂದೆ ಮುಂದೆ ಹೋಗುತ್ತಿದ್ದೆವು. ದಾರಿಯಲ್ಲಿ ಹಳ್ಳ- ತೊರೆ, ಕಾಲುವೆ ಸಿಕ್ಕಾಗ, ನಮಗೆ ತೀರಾ ಸುಸ್ತು ಅನಿಸಿ ಸೈಕಲನ್ನು ನಿಲ್ಲಿಸಿ ಮುಖ ತೊಳೆದು ನೀರು ಕುಡಿದು ಹೊರಡುತ್ತಿದ್ದೆವು.

ಸಂಜೆ ಐದು ಗಂಟೆಯಾಗುತ್ತಾ ಬಂದಿತ್ತು. ಸೂರ್ಯ ಮುಳುಗುತ್ತಾ ಕೆಂಪಗಾಗುವುದನ್ನು ನೋಡಿದ ಸುಬ್ಬ, "ಲೋ, ಸಂಜೆ ಹೊತ್ತು ಆನೆಗಳ ಕಾಟ, ಬೇಗನೆ ತಲುಪಬೇಕು ಕಣ್ರೋ," ಎಂದಿದ್ದ. ಹೀಗಾಗಿ ನಾವು ಪೆಡಲ್ ತುಳಿಯುವುದನ್ನು ಹೆಚ್ಚು ಮಾಡಿದೆವು. ಬೆಟ್ಟದ ಬುಡದ ಬಳಿಯ ಹೊಂಡರಬಾಳು ಕಾಲೊನಿ ಎಂಬ ಹಳ್ಳಿಗೆ ಬಂದಾಗ ಸಂಜೆ ೫-೩೦ ಆಗಿತ್ತು. ಹಸು ಕರುಗಳನ್ನು ಮೇಯಿಸುವುದಕ್ಕೆ ಕರೆದುಕೊಂಡು ಹೋಗಿದ್ದವರು ನಮ್ಮನ್ನು ಪ್ರಶ್ನಾರ್ಥಕವಾಗಿ ನೋಡುತ್ತಿದ್ದರು. ಹೊಂಡರಬಾಳುವಿನ ಮುಂದಿನ ರಸ್ತೆಯಲ್ಲಿ ಸಾಗುತ್ತಿದ್ದಾಗ, ಒಮ್ಮೆಲೆ ನಾಲ್ವರು ಹಳ್ಳಿಯವರು ನಮ್ಮನ್ನು ಅಡ್ಡಗಟ್ಟಿದರು. ನಾನು ಸೈಕಲಿನಿಂದ ಇಳಿದು "ಏನು?" ಎಂದೆ. ಅವನು, ನಿಮ್ಮ ಸವಾರಿ ಎತ್ತ ಕಡೆಗೆ?" ಎಂದು ಕೇಳಿದಾಗ ಪ್ರವಾಸದ ಉದ್ದೇಶ ವಿವರಿಸಿ, "ಬೇಗನೆ ಹೋಗಬೇಕು," ಎಂದೆ. ಅದಕ್ಕೆ ಆತ, "ಇದು ನಿಮಗೆ ಹೊಸತು, ದಯಮಾಡಿ ಹೋಗಬೇಡಿ," ಎಂದ. ನಮಗೆ ಇನ್ನೂ ಹುರುಪು ಮಾಸಿರಲಿಲ್ಲ. ಎದುರಿನ ಹಚ್ಚ ಹಸುರಿನ ಬೆಟ್ಟವನ್ನು ಏರಿ ಸಾಗುವ ಬಯಕೆ ನಮ್ಮಲ್ಲಿ ಆದಮ್ಯವಾಗಿತ್ತು. "ಏನಾದ್ರೂ ಸರಿ, ನಾವು ಹೋಗಲೇ ಬೇಕು," ಎಂದು ಆಚಾರಿ ದೃಢವಾಗಿ ಹೇಳಿದ. "ಏ, ಸುಮ್ಕಿರಿ ಸಾಮಿ, ಇನ್ನೂ ಮೂರು ದಿನ ಆಗಿಲ್ಲ, ಜೀಪು ಮುಂದಿನ ತಿರುವಿನಲ್ಲಿ ಆನೆಯ ಮರಿಗೆ ಗುದ್ದಿಹೋಗಿ, ಅದರ ತಾಯಿ ಅಲ್ಲೆ ಕಾಯ್ತಾ ಅದೆ, ಅದ್ಹೇಂಗೆ ಒಯ್ತೀರಂತೆ" ಎಂದ ಮಗದೊಬ್ಬ. ಅಷ್ಟರಲ್ಲಿ ಹಳ್ಳಿಯ ಸುಮಾರು ೧೫ ಜನ ಸೇರಿದರು. ಎಲ್ಲರೂ ಸೇರಿ, "ದಯಮಾಡಿ ಹೋಗಬೇಡಿ," ಎನ್ನುವವರೆ.

ಕೊನೆಗೆ ಅವರ ಹಟವೇ ಗೆದ್ದು ಹೊಂಡರಬಾಳಿನಲ್ಲಿ ಆ ಸಂಜೆ ತಂಗಬೇಕಾಯಿತು. ಅದೂ ಆಗಲಿ ಎಂದು ನಿಧಾನವಾಗಿ ಸೈಕಲ್ಲನ್ನು ಹಳ್ಳಿಯ ಮುಂಭಾಗದ ಶಾಲೆಯ ಚಾವಡಿಯ ಬಳಿ ನಿಲ್ಲಿಸಿದೆವು. ಅಲ್ಲೇ ಬಾವಿಯಲ್ಲಿ ನೀರು ಸೇದುತ್ತಿದ್ದವನನ್ನು ಕೋರಿ ಮುಖ ತೊಳೆದುಕೊಂಡೆವು. "ರಾತ್ರಿ ಎಲ್ಲಿ ಮಲಗುವುದು ಯಜಮಾನರೆ ?" ಎಂದಾಗ, ಗ್ರಾಮಸ್ಥರು ಶಾಲೆಯ ಬೀಗವನ್ನು ಅದು ಹೇಗೋ ತೆರೆದು ಕೊಟ್ಟರು. ಒಳಗೆ ಗಾಢಾಂಧಕಾರ, ವಿದ್ಯಾರ್ಥಿಗಳು ಕೂರಲು



ಹಾಸುಮಣೆಗಳು ಇದ್ದವು. ಪರವಾಗಿಲ್ಲ ಎಂದುಕೊಂಡೆವು. ಅಷ್ಟರಲ್ಲಿ ಆಚೆಯಿಂದ ಆಚಾರಿ, "ಬನ್ರೋ ಇಲ್ಲಿ," ಎಂದು ಕೂಗಿದ್ದನ್ನು ನೋಡಿ ನಾವೆಲ್ಲರೂ ಬಂದೆವು. ಸುಬ್ಬನದು, ನನ್ನದು, ವೆಂಕನದು ಸೈಕಲ್ಲಿನ ಟೈರಿಗೆ ಪಂಕ್ಚರ್ ಆಗಿತ್ತು. ಆ ಹಳ್ಳಿಗೆ ಇನ್ನೂ ಸರಿಯಾಗಿ ವಿದ್ಯುತ್ ದೀಪಗಳು ಇರಲಿಲ್ಲ. ಅಲ್ಲಿಯೇ ಇದ್ದ ಗೂಡಂಗಡಿಯಿಂದ ಸುಬ್ಬ ಮೇಣದ ಬತ್ತಿ ತಂದು ಹೊತ್ತಿಸಿದ. ಕತ್ತಲೆಯಲ್ಲಿಯೇ ಎಲ್ಲ ಪಂಕ್ಚರ್‌ಗಳನ್ನು ಸರಿಮಾಡಿ ಮುಗಿಸಿದ. ಆಚಾರಿ ಕೈಗಡಿಯಾರ ನೋಡಿಕೊಂಡ. ಸಮಯ ರಾತ್ರಿ ೮ ಆಗಿತ್ತು. ಎಲ್ಲರ ಹೊಟ್ಟೆ ಚುರುಗುಟ್ಟುತ್ತಿತ್ತು. ಸ್ಕೂಲಿನ ಒಳಗಡೆಯಲ್ಲಿ ಐದು ಮೇಣದ ಬತ್ತಿಗಳನ್ನು ಹಚ್ಚಿಟ್ಟೆವು. ಬಾವಿಯಿಂದ ಒಂದು ತಂಬಿಗೆ ನೀರು ತಂದೆವು. ಆಚಾರಿಯ ಚಪಾತಿ ಪಲ್ಯ, ಸುಬ್ಬನ ಮೊಟ್ಟೆಯ ತಿಂಡಿಗಳು, ವೆಂಕನ ಪುಳಿಯೊಗರೆ, ಮೊಸರನ್ನ ಎಲ್ಲ ನಮ್ಮ ಕಾರ್ಯಕ್ಕೆ ಬಂದಿತ್ತು. ಹೀಗೆ ಎಲ್ಲರೂ ಮಾತನಾಡುತ್ತಾ, ಶಾಲೆಯ ಮಣೆಗಳನ್ನು ಹಾಸಿ ಮಲಗಿದ್ದು ಗೊತ್ತೇ ಆಗಿರಲಿಲ್ಲ. ಬೆಳಿಗ್ಗೆ ನಾನೇ ಮೊದಲು ಎದ್ದೆ. ೭ ಗಂಟೆ ಆಗಿತ್ತು. "ಏಳ್ರೊ," ಎಂದು ಲಗುಬಗೆಯಿಂದ ಎಲ್ಲರನ್ನೂ ಎಬ್ಬಿಸಿದೆ. ಮೈಕೈ ನೋವಿನ ಹೊಡೆತ ಸಖತ್ತಾಗಿತ್ತು. ಎದ್ದು ಅಲ್ಲಿಯೇ ಹರಿಯುತ್ತಿದ್ದ ತೊರೆಯಲ್ಲಿ ಮುಖ, ಕೈ ಕಾಲು ತೊಳೆದುಕೊಂಡೆವು. ರಾತ್ರಿ ಗೂಡಂಗಡಿಯಲ್ಲಿ ಖರೀದಿಸಿ ಉಳಿದಿದ್ದ ಕೆಲವು ಚಕ್ಕುಲಿ ಬೋಟಿಗಳಿದ್ದವು. ಅದನ್ನೇ ತಿಂದು, ನೀರು ಕುಡಿದು, ಸರಿಪಡಿಸಿಕೊಂಡು ಹೊರಟೆವು. ನಾವು ಹೊಂಡರಬಾಳೂ ಬಿಟ್ಟಾಗ ಬೆಳಿಗ್ಗೆ ೮ ಆಗಿತ್ತು. ಹಳ್ಳಿಯವರೆಲ್ಲರು ಶುಭ ಕೋರಿ ಟಾಟಾ ಮಾಡಿದರು.

ಬೆಟ್ಟದ ಮೇಲಿನ ಸವಾರಿ ಸ್ವಲ್ಪ ಕಷ್ಟದ್ದೆನಿಸಿತ್ತು. ಸಾಗುವಾಗ ತೀರಾ ಕಡಿದಾಗಿರುವ ಕಡೆಗಳಲ್ಲಿ ಇಳಿಯುತ್ತಿದ್ದೆವು. ಧೂಳಿನಿಂದ ಮೈಯಲ್ಲಿ ಮಣ್ಣು ಮೆತ್ತಿಕೊಂಡು ಅಲ್ಲಲ್ಲಿ ಗುಂಪು ಗುಂಪಾಗಿ ಸಂಚರಿಸುವ ಆನೆಗಳನ್ನು ಕಂಡಾಗಲಂತೂ ನಮ್ಮ ಆನಂದ ನಿಜಕ್ಕೂ ಪರಕಾಷ್ಠೆ ಮುಟ್ಟಿತ್ತು. ಆ ಆನೆಗಳೋ ಹತ್ತಿರ ಬರಲು ಕಡಿದಾದಸ್ಥಳ ಇದ್ದುದ್ದರಿಂದ ಸಾಧ್ಯವಿರಲಿಲ್ಲ. ತೊರೆಗಳು, ಹಳ್ಳಗಳು, ಜುಳು ಜುಳು ಹರಿವ ನೀರು ಹೀಗೆ ಎಲ್ಲವನ್ನೂ ನೋಡಿಕೊಂಡು ಸಣ್ಣ ಸಣ್ಣ ನೀರು ಬೀಳುವ ಕಡೆಗಳಲ್ಲಿ ವಿಶ್ರಮಿಸಿಕೊಂಡು ಮುನ್ನಡೆದೆವು. ಬೆಟ್ಟದ ಮಧ್ಯದಲ್ಲಿ ಅರಣ್ಯ ಇಲಾಖೆಯ ವಿಶ್ರಾಂತಿ ಧಾಮದಲ್ಲಿ ಅಲ್ಪಕಾಲದ ವಿಶ್ರಾಂತಿ ಪಡೆದು ಬೆಟ್ಟದ ತುದಿ ತಲುಪಿದಾಗ ತೀರಾ ಸುಸ್ತಾಗಿದ್ದೆವು.

ಬೆಟ್ಟದ ಮೇಲೆ ನನ್ನ ತಂದೆಯ ಸಂಬಂಧಿಕರು ದೇವಸ್ಥಾನದಲ್ಲಿ ಅಡಿಗೆ ಮಾಡಿಕೊಂಡಿದ್ದರು. ಅವರ ಮನೆಗೆ ಹೋಗಿ ನಮ್ಮ ಪರಿಚಯ ಮಾಡಿಕೊಂಡೆವು. ಮಧ್ಯಾಹ್ನ ೨-೩೦ ಆಗಿತ್ತು. ಅವರ ಸಲಹೆಯಂತೆ ಕೆಳಗಿನ ಅಂಗಡಿಯಿಂದ ಸೀಮೆ ಬದನೆ, ಆಲೂಗಡ್ಡೆ ತಂದು ಕೊಟ್ಟೆವು. ಭರ್ಜರಿ ಅಡಿಗೆ ಮಾಡಿದ್ದರು. ಒಬ್ಬೊಬ್ಬರೂ ಬಕಾಸುರನಂತೆ ಊಟ ಮಾಡಿದೆವು. ಸಂಜೆಯ ವೇಳೆಗೆ ವಿಶ್ರಾಂತಿಯ ನಂತರ ಅಲ್ಲಿನ ಪ್ರೇಕ್ಷಣೀಯ ರಮ್ಯ ತಾಣಗಳನ್ನು ವೀಕ್ಷಿಸಿದೆವು.

ರಾತ್ರಿಯಾಗುತ್ತಾ ಬಂದಂತೆ ಬೆಟ್ಟದ ಮೇಲೆ ಕುಳಿರ್ಗಾಳಿ ಬೀಸಲಾರಂಭಿಸಿತು. ಅವರ ಮನೆಯ ಕೋಣೆಯಲ್ಲಿ ನಾವು ಬೆಚ್ಚಗೆ ಮಲಗಿಕೊಂಡೆವು. ಮಾತನಾಡುತ್ತಾ ಮಲಗಿದ್ದ ನಮಗೆ ನಿದ್ರಾದೇವಿ ಆವರಿಸಿಕೊಂಡುದೇ ಗೊತ್ತಾಗಲಿಲ್ಲ.

ಬೆಳಿಗ್ಗೆ ಎದ್ದು ಸ್ನಾನ ಮಾಡಿ, ಅವರು

ನೀಡಿದ ಉಪಾಹಾರ ಸ್ವೀಕರಿಸಿ ಅವರಿಗೆ ಧನ್ಯವಾದಗಳನ್ನು ಹೇಳಿ, ದೇವರ ದರ್ಶನ ಮಾಡಿದೆವು. ನಿಜಕ್ಕೂ ರಾತ್ರಿಯ ದರ್ಶನಕ್ಕೂ ಬೆಳಿಗ್ಗೆಯ ದರ್ಶನಕ್ಕೂ ನಮ್ಮಲ್ಲಿಯೇ ಸಂತಸ ಮೂಡಿತ್ತು. ಬಿಳಿಗಿರಿಯ ರಂಗನ ಸೇವೆಮಾಡಿ, "ಜೈ ಬಿಳಿಗಿರಿ ರಂಗ" ಎಂಬ ಜಯಕಾರದೊಂದಿಗೆ ಬೆಟ್ಟವನ್ನು ಸೈಕಲ್ ಮೇಲಿಂದ ಇಳಿಯತೊಡಗಿದೆವು. ನನ್ನ ಸೈಕಲ್‌ನ ಮುಂದಿನ ಗಾಲಿಯ ಬ್ರೇಕ್ ಶೂ ಕಳಚಿದ್ದು, ಬ್ರೇಕ್ ಹಿಡಿದಾಗಲೆಲ್ಲಾ ಒಂದು ರೀತಿಯ ಶಬ್ದವಾಗುತ್ತಿತ್ತು.

ಕರಡಿ ಸ್ನಾನದ ತಾಣ, ನವಿಲಿನ ಹಿಂಡುಗಳು, ಆನೆಗಳ ಹಿಂಡು, ಇವೆಲ್ಲವನ್ನೂ ನೋಡುತ್ತಾ ಕೋತಿಗಳು ಮರದಿಂದ ಮರಕ್ಕೆ ಹಾರುವುದನ್ನು ಆನಂದಿಸುತ್ತಾ ನಾವು ಬೆಟ್ಟದ ತಪ್ಪಲಿಗೆ ಇನ್ನೇನು ತಲುಪಲಿದ್ದೆವು, ಈ ಸಮಯದಲ್ಲಿ ನಾನು ಎಲ್ಲರಿಗಿಂತ ಸ್ವಲ್ಪ ಮುಂದೆ ಇದ್ದೆ. ಹೀಗಾಗಿ ಕಡಿದಾದ ತಿರುವುಗಳಲ್ಲಿ ನಾನು ಇತರರಿಗೆ ಕಾಣಿಸುತ್ತಿರಲಿಲ್ಲ. ಕೊನೆಯ ತಿರುವು ಬಹುಶಃ ಅದಾಗಿತ್ತು. ನಾವೇನು ಎಣಿಸಿರಲಿಲ್ಲವೋ ಅದೇ ಎದುರಾಗಿತ್ತು. ತಿರುವಿನಲ್ಲಿ ರಸ್ತೆಯ ಮಧ್ಯ ಒಂದು ದೊಡ್ಡ ಆನೆ ನಿಂತಿತ್ತು. ಒಮ್ಮಿಂದೊಮ್ಮೆ ಎರಡೂ ಬ್ರೇಕ್‌ಗಳನ್ನು ಹಿಡಿದೆ. ಬ್ರೇಕ್ ಶೂ ಇಲ್ಲದೆ ಗಾಲಿಯ ಅಂಚಿನ ಶಬ್ದವಾದಾಗ ಆನೆ ತಿರುಗಿತು. ನನ್ನ ಜಂಘಾಬಲವೇ ಉಡುಗಿತು. ಸೈಕಲ್ ತಿರುಗಿಸಿ, ವಾಪಸ್ಸು ಪೆಡಲ್ ತುಳಿಯತೊಡಗಿದೆ. ಅರ್ಧ ಫರ್ಲಾಂಗ್ ದೂರಹೋಗಿ ಹಿಂದೆ ನೋಡಿದಾಗ ಎಲ್ಲರೂ ಬರುತ್ತಿದ್ದರು. ಏದುಸಿರು ಬಿಡುತ್ತಾ ಬರುತ್ತಿದ್ದ ನಾನು ಮಾತನಾಡಲು ಕಷ್ಟಪಡುತ್ತಿದ್ದೆ. ಆಚಾರಿ ಏನು ಎನ್ನುವಷ್ಟರಲ್ಲಿಯೇ ಆ ಆನೆ ನಮ್ಮ ಕಡೆಗೆ ಬರುತ್ತಿತ್ತು. ಅದನ್ನು ನಾನು ತೋರಿಸಿದೆ. ಕೂಡಲೇ ನಾವೆಲ್ಲರೂ ಹಿಂದಕ್ಕೆ ಸೈಕಲ್ ತುಳಿಯಲು ಪ್ರಾರಂಭಿಸಿದೆವು. ಆದರೆ ಕೆಲವೆ ಗಜಗಳ ನಂತರ ತುಂಬಾ ಎತ್ತರದ ತಿರುವು ಇದ್ದುದರಿಂದ, ಸೈಕಲ್‌ನಿಂದ ಇಳಿಯಲೇಬೇಕಾಯಿತು. ಅಷ್ಟರಲ್ಲಿ ಸುಬ್ಬ ಎಲ್ಲರನ್ನೂ ಅಲ್ಲಿಯ ಕಾಡಿನ ಒಳಗೆ ಕಚ್ಚಾ ರಸ್ತೆಯ ಕಡೆಗೆ ಕರೆದೊಯ್ದ. ಹೀಗೆ ಆನೆಯಿಂದ ತಪ್ಪಿಸಿಕೊಂಡು. ಪ್ರಾಣ ಉಳಿಸಿಕೊಳ್ಳುವ ಆಸೆಯಿಂದ ಕಾಡಿನ ಒಳಗೆ ಹೊಕ್ಕೆವು. ಆಚಾರಿ, ಸುಬ್ಬ, ವೆಂಕ, ಒಂದು ದೊಡ್ಡ ಮರವನ್ನೇರಿದರು. ಸುರೇಶ, ವೆಂಕಟಾದ್ರಿ ಹಾಗೂ ನನಗೆ ಮರವೇರಲು ಬರುತ್ತಿರಲಿಲ್ಲ. ಅಲ್ಲಿ ಇದ್ದ ಬಂಡೆಯ ಕೆಳಗೆ ಅವಿತಿಟ್ಟುಕೊಂಡೆವು. ಹೀಗೆ ಸುಮಾರು ೨ ಗಂಟೆಗಳು ಕಳೆದವು. ಹೊಟ್ಟೆ ಚುರುಗುಟ್ಟುತ್ತಿತ್ತು. ಆಚಾರಿ ಮೆಲ್ಲಗೆ



## ಕವನ

ನನಗೆ ಇವತ್ತು
ಕವನ ಬರೆಯುವ
*Mood* ಇದೆ
ಅಂತೆಯೇ ಈ ಕವನ
ಹಾಳೆಯ ಮೇಲೆ
ಮೂಡಿದೆ!

• ಸಂಜೀವ ಹಲವಾಯಿ

ಮರದಿಂದ ಇಳಿದುನೋಡಿದ. ದೂರದಲ್ಲಿ ದನ, ಆಡು ಮೇಯಿಸುವ ಹೈಕಳು ದನಗಳನ್ನು ವಾಪಸ್ಸು ಕರೆದುಕೊಂಡು ಹೋಗುತ್ತಿದ್ದರು. ದೂರದ ಬುಡದಲ್ಲಿನ ಜನರ ಮಾತುಗಳು ಗಾಳಿಯಲ್ಲಿ ತೇಲಿ ಬಂದು ಕೇಳಿಸುತ್ತಿದ್ದವು. ಸಂಜೆಯ ಐದು ಗಂಟೆಯಾಗತೊಡಗಿತು. ಕೊನೆಗೆ ಆಚಾರಿಯೇ ಧೈರ್ಯ ಮಾಡಿ, ಹೀಗೆ ಕುಳಿತರೆ ಪ್ರಯೋಜನವಿಲ್ಲ ಎಂದು ನಮ್ಮಬಳಿ ಬರುತ್ತಿದ್ದ ಒಂದು ದೊಡ್ಡ ದನದ ಗುಂಪಿನ ಮಧ್ಯೆ ಇಬ್ಬರಂತೆ ನಾವು ನಮ್ಮ ನಮ್ಮ ಸೈಕಲ್ಲುಗಳನ್ನು ತಳ್ಳಿಕೊಂಡು ತಲೆ ಬಗ್ಗಿಸಿಕೊಂಡು ಮುಖ್ಯ ರಸ್ತೆಗೆ ಬಂದು ತಿರುವಿನಲ್ಲಿ ನಿಂತಿದ್ದ ಆನೆಯನ್ನು ದಾಟಿ ಬರಬೇಕಾಗಿತ್ತು. ಹೀಗೆಯೇ ಮಾಡಿದೆವು. ವೆಂಕನ ಮುಂದಿನ ಗಾಲಿ ಪಂಕ್ಚರ್ ಆದರೂ ಧಡಧಡ ಎಂದು ಓಡುತ್ತಿದ್ದೆವು. ಮುಖ್ಯ ರಸ್ತೆ ತಲುಪಿದಾಗ, ಕೂಡಲೇ ಎಲ್ಲರೂ ಸೈಕಲ್ಲುಗಳನ್ನು ಏರಿ ಹಿಗ್ಗಾಮುಗ್ಗಾ ಪೆಡಲ್ ಮಾಡಿದೆವು. ವೆಂಕನನ್ನು ಕೂರಿಸಿಕೊಂಡು ಆತನ ಸೈಕಲ್ ಎಳೆದು ಬರುವುದು ನನ್ನ ಪಾಲಿಗೆ ಬಿತ್ತು. ಹಾಗೂ ಹೀಗೂ ಆನೆಯಿಂದ ಸ್ವಲ್ಪ ದೂರ ಬಂದು ಹಳ್ಳಿ ತಲುಪಿದಾಗ ಸಂಜೆ ೬-೪೫ ಆಗಿತ್ತು.

ಒಟ್ಟಿನಲ್ಲಿ ನಮ್ಮೆಲ್ಲರಿಗೆ ಅಂದು ಸಾಮೂಹಿಕ ಜೀವದಾನವಾಗಿತ್ತು. "ಹಳ್ಳಿಯವನೊಬ್ಬ ಹೇಳಿದ, ಇಪತ್ತು ನೀವು ಉಳಿದುಕೊಂಡಿರುವುದು ಹೆಚ್ಚು," ಅದು ಮೂರು ದಿನದಿಂದ ಅಲ್ಲಿಯೇ ಇದೆ. ಯಾವ ವಾಹನವನ್ನು ಬಿಡುತ್ತಿಲ್ಲ, ಅದ್ಹೇಗೆ ನೀವು ಹೋದಿರೋ ಆ ಬಿಳಿಗಿರಿಯೇ ಬಲ್ಲ," ಎಂದಾಗ ನಮ್ಮ ಎದೆ ಅಳುಕಿತ್ತು.

ಚಾಮರಾಜನಗರ ತಲುಪಿ ಅಲ್ಲಿ ಊಟ ಮಾಡಿ, ಮೈಸೂರಿನ ಕಡೆಗೆ ಸವಾರಿ ಪ್ರಾರಂಭಿಸಿದೆವು. ಬರುವಾಗ ಖಾಲಿ ಎಳನೀರು ಬುರುಡೆಯ ಮೇಲೆ ಸುರೇಶನ ಚಕ್ರ ಹರಿದು ಆತ ಬಿದ್ದು, ಆತನಿಗೆ ಸಹಾಯ ಮಾಡುವುದು ನನ್ನ ಪಾಲಿಗೆ ಬಂದಿತ್ತು.

ಮೈಸೂರು ತಲುಪಿದಾಗ ರಾತ್ರಿ ೧ ಆಗಿತ್ತು. ಚಾಮುಂಡಿಪುರಂನ ಒಂದು ರಸ್ತೆಯಲ್ಲಿ ಒಬ್ಬರು ಪಕೋಡ ಬಜ್ಜಿ ಮಾಡುತ್ತಿದ್ದರು. ಅಲ್ಲಿ ಹೋಗಿ ಆ ಅಪರಾತ್ರಿಯಲ್ಲಿ ಸ್ವಲ್ಪ ಬೊಂಡಾ ತಿಂದೆವು. ಮನೆಗೆ ಹೋದರೆ ಕಷ್ಟವೆಂದು ನಾನು ಆ ರಾತ್ರಿ ಸುಬ್ಬನ ಮನೆಯಲ್ಲಿ ಮಲಗಿದ್ದು ಮಾರನೇ ದಿನ ಮನೆಗೆ ಬಂದೆ.

ಮನೆಯಲ್ಲಿ ನಾನು ಹೇಳಿರಲಿಲ್ಲ. ಬೆಳಿಗ್ಗೆ ನನ್ನ ತಂದೆ ನನ್ನನ್ನು ನೋಡಿದ್ದೇ ತಡ, ಒಂದು ಸಣ್ಣ ಕೋಲಿನಿಂದ ಬಾರಿಸತೊಡಗಿದರು. ನನಗೆ ಬುದ್ಧಿ ಬಂದ ನಂತರ ಬಹುಶಃ ಅದೇ ಮೊದಲು ಅವರು ನನ್ನ ಮೇಲೆ ಕೈ ಮಾಡಿದ್ದು. ನಂತರ ನಾನು ಅತ್ತು ಕರೆದು ಎಲ್ಲಾ ರಂಪ ಆಯಿತು.

ಕಾಲೇಜಿನಲ್ಲಿ ಒಂದು ವಾರ ಕಾಲ ಎಲ್ಲರ ಬಾಯಲ್ಲೂ ಇದೇ ಮಾತು. ನಮ್ಮ ತಂಡ ಒಂದು ರೀತಿಯಲ್ಲಿ ವಿಜಯಿ ತಂಡವಾಗಿತ್ತು. ಇದಾದ ನಂತರ ಇನ್ನೂ ಇಂತಹ ಸೈಕಲ್ ಪ್ರವಾಸಗಳು ಏರ್ಪಟ್ಟರೂ ಇದರಂತಹ ಥ್ರಿಲ್ ಮಾತ್ರ ಇರಲಿಲ್ಲ.

ಬಿಳಿಗಿರಿಯ ಬೆಟ್ಟ ನೆನೆಸಿಕೊಂಡಾಗ, ಮೈ ಜುಂ ಎಂದರೂ, ಅಂದಿನ ಆ ಪ್ರವಾಸದ ರೋಮಾಂಚಕ ಕ್ಷಣಗಳು, ಸುಂದರ ಪ್ರಕೃತಿ ಇವುಗಳು ಇನ್ನೂ ಕಣ್ಣಿಗೆ ಕಟ್ಟಿದಂತಿವೆ. ●

**ಯಾಕೆ?**

**ಮೊದಮೊದಲು ಇವಳೇ**
ನನ್ನ 'ಮನೆಯಾಕೆ' ಎನ್ನುತ್ತಿದ್ದವ,
ಈಗೀಗ, ಇವಳಿದ್ದ
ಮನೆ ಯಾಕೆ? ಎನ್ನುವನಲ್ಲ!!

✹ ಕೆ.ಆರ್. ಓಂಕಾರ

# ವಿಸ್ಮೃತಿ

ಮರಾಠಿ ಮೂಲ: ಅಂಬಿಕಾ ಸರಕಾರ
ಅನು: ಚಂದ್ರಕಾಂತ ಪೋಕಳೆ

ಉದ್ದೋ ಉದ್ದ ಬಟಾ ಬಯಲು ರಸ್ತೆ. ಅದರ ಮೇಲೆ ರಣರಣ ಬಿಸಿಲು. ಸವೆದ ಕರಿ ಚಪ್ಪಲು ಸೀಳಿ ಚುಚ್ಚುವ ಕಾಯ್ದ ರಸ್ತೆ. ಬೆನ್ನು ಚುರುಗುಡುವ ತೀಕ್ಷ್ಣಕಿರಣ. ಬ್ಲೌಜಿನೊಳಗೆ ಸುರಿವ ಧಾರಾಕಾರ ಬೆವರು.

ಮೂರ್‍ನಾಲ್ಕು ಗಂಟೆಯ ಸುತ್ತಾಟ. ವಾರಕ್ಕೆ ರಡು ಸರ್ತಿ- ಅದೂ ನಡು ಮಧ್ಯಾಹ್ನ. ಹೋಗುವಾಗ ಬಿಸಿಲು ಬೆನ್ನಿಗೆ, ಬರುವಾಗ ಹಣೆ ಮೇಲೆ, ಮರಳುವಾಗ ಗೋಣಿಗೆ ಸೂಜಿ ಚುಚ್ಚಿದ ಅನುಭವ. ಪ್ರತಿಯೊಂದು ಸೂಜಿಗೂ ವಿದ್ಯುತ್ತಿನ ಆಘಾತ, ನೆತ್ತಿಯೋ ಕಾಯ್ದ ಕೆಂಡ. ತಲೆ ಸಿಡಿದುಹೋಗುವ ತೀವ್ರ ವೇದನೆ......

ತಾರಾ ಲಗುಬಗೆಯಿಂದ ಹೆಜ್ಜೆ ಹಾಕುತ್ತಿದ್ದಳು. ಹಾಗೆ ಮನೆಗೆ ಮರಳುವ ಅವಸರವಿರಲಿಲ್ಲ. ಸುರೇಶ ಆಸ್ಪತ್ರೆಯಲ್ಲಿ, ಧೀರೆನ್ ಹಾಸ್ಟೇಲಿನಲ್ಲಿ, ಲೀನಾ ಅಜ್ಜಿಯ ಮನೆಗೆ. ಬಾಗಿಲಿಗೆ ದೊಡ್ಡ ಕೀಲಿ.

.......ಏಳು ವರ್ಷದ ಹಿಂದಿನ, ತೀರಾ ಮೊದಲನೇ ವರ್ಷದ ಮಾತು. ಕಾಯಿಪಲ್ಲೆ ಖರೀದಿ ಮಾಡಿ ಮನೆಗೆ ಹಿಂದಿರುಗುವಾಗ ವೇಳೆಯಾಯಿತು. ನೋಡಿದರೆ ಬಾಗಿಲಿಗೆ ಕೀಲಿ. ಮುಚ್ಚಿದ ಬಾಗಿಲಿನೆದುರು ಪುಟ್ಟ ಲೀನಾ ನಿಂತು ಅಳುತ್ತಿದ್ದಳು. ಶಾಲೆಯಿಂದ ಆಗಷ್ಟೇ ಬಂದಿದ್ದಳು. ತನ್ನನ್ನು ನೋಡಿ ಧಾವಿಸಿ ಬಂದ ವಳೇ ಅಪ್ಪಿ ಬಿಕ್ಕಳಿಸಲಾರಂಭಿಸಿದಳು. ನಾಲ್ಕು ವರ್ಷದ ತಬ್ಬಲಿ ಕೂಸು. ತೊಡೆ ಮೇಲೆ ಮಲಗಿಸಿ ಚಪ್ಪರಿಸಿದಳು. ಅಷ್ಟರಲ್ಲಿ ಧೀರೆನ್ ಮನೆಗೆ ಬಂದ. ತನ್ನ ತೊಡೆ ಮೇಲೆ ಲೀನಾ ಕಾಣಿಸುತ್ತಲೇ ಬಿರುಗಾಳಿಯಂತೆ ಮುನ್ನುಗ್ಗಿ ಎಳೆದುಕೊಂಡು ಹೋದ.

ವಾಸ್ತವಿಕವಾಗಿ ಧೀರೆನ್ ಒಳ್ಳೆ ಹುಡುಗ. ಮಾತು ತುಂಬಾ ಮೆತ್ತಗೆ. ವಿನಯಶೀಲ ವರ್ತನೆ. ಮನೆಗೆಲಸದಲ್ಲಿ ಆಸಕ್ತಿ. ಲೀನಾಳ ಎಲ್ಲ ಕೆಲಸ ಅವನೇ ಮಾಡುತ್ತಿದ್ದ.

ಪಾಕೀಟಿನಲ್ಲಿ ತನ್ನ ತಾಯಿಯ ಒಂದೆರಡು ಫೋಟೋ ಇಟ್ಟುಕೊಂಡಿದ್ದ. ಪ್ರತಿ ತಿಂಗಳು ತಾಯಿ ತೀರಿಕೊಂಡ ದಿನದಂದು, ಅವನು ಒಂದು ಹನಿ ನೀರೂ ಸೇವಿಸುತ್ತಿರಲಿಲ್ಲ. ಎಂಟು ವರ್ಷದವನಾಗಿದ್ದಾಗಿನಿಂದಲೂ ಇದೇ ರೂಢಿ. ಮೊದಲ ಸಲ ಆಗ್ರಹಪಡಿಸಿದಾಗ ಚಕಿತಗೊಂಡವನಂತೆ ನೋಡುತ್ತಿದ್ದ. ಇಡೀ ದಿನ ಹೊರಗೇ ಇರುತ್ತಿದ್ದ. ಅವನ ಮನಸ್ಸು ತಾಯಿಯ ನೆನಪಿನಿಂದ ತೀರಾ ಬೆಸೆದುಕೊಂಡಿತ್ತು. ಅದು ಅಳಿಯದಂತೆ ನೋಡಿಕೊಳ್ಳುತ್ತಿದ್ದ. ಸುತ್ತಲೂ ಮುಳ್ಳುಗಂಟಿ ಹೊದೆಸಿದ್ದ. ಸತ್ತ ತಾಯಿಯ ಬಗ್ಗೆ ಧೀರೆನ್‌ಗೆ ಅತ್ಯಂತ ನಿಷ್ಠೆ......ಅಂಥದರಲ್ಲಿ ನನ್ನ ಈ ರೀತಿ ನಡವಳಿಕೆಯಿಂದ ಅವನಿಗೆ ತಿರಸ್ಕಾರ ಮೂಡುವುದು ಸಹಜವೇ. ತನಗೆ ಕಸಿದುಕೊಳ್ಳುವಧೈರ್ಯವಾಗಲಿಲ್ಲ.

ಆದರೆ ಲೀನಾಳ ಮನಸ್ಸಿನಲ್ಲಿ ಮಾತ್ರ ಧೀರೆನ್‌ನಂತೆ ತಾಯಿಯ ನೆನಪು ಹಸಿಹಸಿಯಾಗಿರಲಿಲ್ಲ. ಸುರೇಶನಿಗೂ ಆಕೆಯ ಬಗ್ಗೆ ಪ್ರೀತಿ. ಲೀನಾಳಿಗೂ ಸುರೇಶನಿದ್ದ ಶಾಲೆಗೇ ಕಳಿಸಬೇಕೆಂಬ ಇಚ್ಛೆ. ಸುರೇಶನದು ಗಂಡುಮಕ್ಕಳು, ಹೆಣ್ಣುಮಕ್ಕಳು ಕೂಡಿಯೇ ಇದ್ದ ಮರಾಠಿ ಶಾಲೆ. ಆದರೆ ಗೋವಿಂದರಾವ್ ಧೀರೆನ್‌ನಂತೆ ಲೀನಾಳನ್ನೂ ಗುಜರಾತಿ ಶಾಲೆಗೆ ಕಳಿಸಿದರು. ಹಾಗೆ ನೋಡಿದರೆ ಆಕೆಯೇನು ಗುಜರಾತಿಗಳ ಜತೆ ವ್ಯಾಪಾರ ಮಾಡಬೇಕಾಗಿರಲಿಲ್ಲ! ಕ್ರಮೇಣ ಧೀರೆನ್-ಲೀನಾ ಪರಸ್ಪರ ಗುಜರಾತಿ ಮಾತಾಡಲಾರಂಭಿಸಿದರು. ಎಲ್ಲೊ ತಪ್ಪಿ ಪ್ರಯಾಸದಿಂದ ಒಂದೆರಡು ಮರಾಠಿ ವಾಕ್ಯ ಮಾತಾಡುತ್ತಿದ್ದರು.

ಒಂದು ದಿನ ಸುರೇಶ ಲೀನಾಳಿಗೆ ಇಸ್ಪೇಟ ಆಡಲು ಕರೆದ. ಲೀನಾ ಹೇಳಿದಳು, "ಮನೆ ನಥಿಶಮವು."

"ನನ್ನೊಂದಿಗೆ ಮರಾಠಿ ಮಾತಾಡು ಲೀನಾ!" ಎಂದು ಸುರೇಶ ಕಿರುಚಿ ಅವಳಿಗೆ ಹೊಡೆಯಲಾರಂಭಿಸಿದ.

ಸದಾಕಾಲ ರಕ್ಷಣೆ ಮಾಡುವ ಧೀರೆನ್, ಆಗ ಮಾತ್ರ ಮುಂದೆ ಬರಲಿಲ್ಲ. ತಾನೇ ನಡುವೆ ಪ್ರವೇಶಿಸಿ ಬಿಡಿಸಬೇಕಾಯಿತು. ಲೀನಾ ಮಾತ್ರ ಸಿಟ್ಟಿಗೆದ್ದು ಧೀರೆನ್ ಕೂತಿದ್ದ ಕಡೆ ಧಾವಿಸಿ ಹೋದಳು.

ಧೀರೆನ್ ತಿರಸ್ಕಾರದಿಂದ ದೂರವೇ ಉಳಿದ. ಲೀನಾ ಸಹ ದೂರಾದಳು. ಮತ್ತೆ ಈಗ......ಇಂದು ಸುರೇಶ 'ಅಮ್ಮ' ಎಂದೂ ಕರೆಯಲಿಲ್ಲ.

* * * *

ಇಪತ್ತಿನ ನೆನಪು ಮನಸ್ಸಿನಿಂದ ಕಿತ್ತೊಗೆಯುತ್ತ ತಾರಾ ನಡೆಯಲಾರಂಭಿಸಿದಳು. ಹೋಗಿ ಬರುವ ಹಾದಿ ಅಂಗಡಿ ಎದುರಿಗೇ ಇತ್ತು. ಹೇಗೆ ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನಿಸಿದರೂ ಗೋವಿಂದರಾವ್ ಮಾತ್ರ ಕಾಗೆಯಂತೆ ವಕ್ರನೋಟ ಬೀರುತ್ತಿದ್ದರು......

ಕಟ್ಟಿಗೆಯ ಗೊಂಬೆಯಂತೆ ಮೈ ಮುದುಡಿಕೊಂಡು ತಾರಾ, ಬಾಣದಂತೆ ಅಂಗಡಿಯ ಎದುರಿನಿಂದ ಹಾದು ಹೋದಳು.

-೨-

ಎಂಟು ಹೊಡೆಯುತ್ತಲೇ ಗೋವಿಂದರಾವ್ ಅಂಗಡಿ ಮುಚ್ಚಿದರು. ಧೋತರಿನಂಚು ಹಿಡಿದೆತ್ತಿ ಮನೆಯ ಕಡೆ ಹೊರಟರು. ನಾಲ್ಕು ಹೆಜ್ಜೆ ನಡೆಯುವಷ್ಟರಲ್ಲಿ ನೆನಪಾಯಿತು. ಐದು ಗಂಟೆಗೆ ತಾರಾ ಮನೆಗೆ ಮರಳಿದ್ದಾಳೆ. ಅಂಗಡಿ ಎದುರಿನಿಂದಲೇ ಹಾದು ಹೋಗಿದ್ದಾಳೆ. ಮನೆಯಲ್ಲಿ ಮತ್ತೇನೂ ಕೆಲಸವಿಲ್ಲ. "ಸಂಕಟ ಬಂದಾಗ ವೆಂಕಟರಮಣ" ಎನ್ನುವಂತೆ ಆಕೆ ತನ್ನ ಟ್ರಂಕಿನೆದುರು ಕೂತಿರಬೇಕು. ಗೋವಿಂದರಾವ್ ಮರಳಿ ಬಂದು, ಇರಾಣಿ ಹೋಟೆಲಿನಲ್ಲಿ ಹೋಗಿ ಕೂತರು. ಖಾದೀ ಟೊಪ್ಪಿಗೆ ತೆಗೆದು ಟೇಬಲ್ ಮೇಲಿಟ್ಟರು. ವೇಟರನನ್ನು ಕರೆದು ಆರ್ಡರ್ ಮಾಡಿದರು. ಅವನು ಕಪ್ಪು ಚಹಾ, ಬೆಣ್ಣೆ-ಬ್ರೆಡ್ ತಂದಿಟ್ಟ.

ಗೋವಿಂದರಾವ್‌ಗೆ ಚಹಾ ನೋಡಿ ವಾಕರಿಕೆ ಬಂತು. ಹಾಗೇ ನೋಡಿದರೆ ಎಂಟೂವರೆಗೆ ಬಿಸಿಬಿಸಿ ಅನ್ನ ಎದುರಿಗಿರಬೇಕಾಗಿತ್ತು.

ಇದು ಕಳೆದ ಇಪ್ಪತ್ತು ವರ್ಷಗಳ ಅಭ್ಯಾಸ...ಎಳೆಂಟು ವರ್ಷದ ಹಿಂದೆ ಮಲ್ಲಿಗೆ ಮೊಗ್ಗಿನಂತಹ ಅನ್ನ, ಅದರ ಮೇಲೆ ಮನೆಯ ತಾಜಾ ಬೆಣ್ಣೆ- ತುಪ್ಪವಲ್ಲ- ಊಟದೆಲೆಯ ಎದುರಿಗೆ ಊದುಬತ್ತಿ, ಪಕ್ಕದಲ್ಲಿ ಲೀನಾ, ಧೀರೇನ್‌ರ ಮಣೆ......ಆದರೆ ಅನಸೂಯ ಹೊರಟುಹೋದಳು.... ವರ್ಷವಿಡೀ ಹಾಗೇ ಕಳೆದರು. ಮಕ್ಕಳ ಸಂಕಟ ನೋಡಬಾರದು. ತನಗೂ ಏಕಾಕಿಯೆನಿಸಿತು. ತರುಣ ಹೆಣ್ಣು ನೋಡಿದಾಕ್ಷಣ ಕಸಿವಿಸಿಯಾಗುತ್ತಿತ್ತು...... ಕೊನೆಗೆ ಜಾಹೀರಾತು ನೀಡಿದರು. ವಿಧವೆಯಾದರೂ ಅಡ್ಡಿಯಿಲ್ಲ. ಸಾಕಷ್ಟು ಉತ್ತರ ಬಂತು. ಕುಮಾರಿ, ವಿಧವೆ, ವಿಚ್ಛೇದನ ಪಡೆದ....ಒಬ್ಬಾಕೆಗಂತೂ ಆರು ಮಕ್ಕಳು! ಒಂದಿಬ್ಬರು ಹಿಡಂಬೆಯಂತಿದ್ದರು. ಆ ಅಡಿಗೆಯಾಕೆ ಲೀಲಾ ಬಾಯಿ, ಐವತ್ತು ವರ್ಷದವಳಿರಬೇಕು. ಉಬ್ಬು ಹಲ್ಲು. ಅದಕ್ಕೆ ನಾಲಿಗೆ ತಗುಲಿಸಿ ಮಾತಾಡೋದು, ಸೊಂಟ ಕುಣಿಸೋದು.... ಗಂಗಾಬಾಯಿಯಂತೂ ಬರೇ ಹಣದ ಲೆಕ್ಕಾಚಾರದವಳು.....

ತಾರಾ ಮಾತ್ರ ಬಹಳ ಹೊತ್ತಿನ ವರೆಗೆ ತಲೆ ಮೇಲೆ ಎತ್ತಿರಲಿಲ್ಲ. ಆಕೆಯ ಬಿಳಿಗೋಣಿ ತುರುಬಿನಿಂದ ಹೊರಗೆ ಇಣುಕುವ ಕೂದಲ ರಾಶಿ, ನೋಡಿಯೇ ಎದೆ ಡವಗುಡಲಾರಂಭಿಸಿತು. ಮಕ್ಕಳಿದ್ದ ವಿಧವೆ ಎಂದು ಅನುಮಾನಿಸುತ್ತಿದ್ದಾಗ ಆಕೆಯ ಕಂಗಳಲ್ಲಿ ವ್ಯಕ್ತವಾದ ಅಸಹಾಯಕತೆ, ಆ ಕಪ್ಪು ಕಂಗಳಲ್ಲಿರುವ ಯಾತನೆ, ಆದರೆ ತನಗೇನು ಬೇಕೆನ್ನುವುದು ಮಾತ್ರ ಆ ಕಣ್ಣುಗಳಿಗೆ ಎಂದೂ ತಿಳಿಯಲೇ ಇಲ್ಲ....

ಹಾಗೆ ನೋಡಿದರೆ ತಾರಾ ಅನುಭವಿಸಿದ ಸಂಕಟಕ್ಕೆ ಎಣೆಯಿಲ್ಲ. ಶಿಕ್ಷಣವೂ ಅಷ್ಟಕ್ಕಷ್ಟೇ. ಮೇಲಾಗಿ ಸುಂದರ ರೂಪ....ಸಿಕ್ಕ ಕೆಲಸ ಉಳಿಸಿಕೊಳ್ಳುವುದೂ ಕಷ್ಟ. ಮನೆ ಬಾಡಿಗೆ ಕೊಡುವುದೂ ಆಗಲಿಲ್ಲ. ಸುರೇಶನ ಶಾಲೆ ಬಿಡಿಸಿ ಕೆಲಸಕ್ಕೆ ಹಚ್ಚಲಾಯಿತು. ಈಗ ಸ್ವಂತದ

ಮನೆಯಾಯಿತು. ಮಕ್ಕಳೂ ಇದ್ದವು, ಸಾಕಷ್ಟು ಹಣವೂ ಇತ್ತು. ಅನಸೂಯೆಯ ನೂರು-ನೂರೈವತ್ತು ತೊಲೆ ಬಂಗಾರವಿತ್ತು. ಆದರೆ ತಾರಾಳ ಕಿವಿ ಮಾತ್ರ ಬೋಳು.... ಬಂಗಾರದ ಮಂಗಳಸೂತ್ರವೂ ಇರಲಿಲ್ಲ. ಹಳೇ ಕಾಲದ ಮಂಗಮ್ಮನಂತೆ ಮನೆಯಲ್ಲಿ ಓಡಾಡಲಾರಂಭಿಸಿದಳು.

ಆದರೆ ಸಂಸಾರ ಮಾತ್ರ ಹಾದಿಗೆ ಹತ್ತಿತ್ತು. ಎಲೆಯೆದುರು ಊದುಬತ್ತಿಯಿರದಿದ್ದರೂ ಸಮಯಕ್ಕೆ ಸರಿಯಾಗಿ ಊಟ ಸಿಗುತ್ತಿತ್ತು. ಮನೆಗೆ ಬಂದ ಕೂಡಲೆ, "ಇವತ್ತು ಸುರೇಶ ಸೈಕಲ್ ಹೊಡೆಯಲು ಕಲಿತೂ", "ಸುರೇಶನ ಆರು ತಿಂಗಳ ಅಂಕಪಟ್ಟಿ ಬಂದಿದೆ. ಗಣಿತದಲ್ಲಿ ತೊಂಭತ್ತೆಂಟು, ಆದರೆ ಇಂಗ್ಲೀಷಿನಲ್ಲಿ ಮಾತ್ರ ಫೇಲು" ಹೀಗೆ ಕಿವಿ ಮೇಲೆ ಏನೇನೋ ಬೀಳುತ್ತಿತ್ತು. ಆಗಲೂ ತಾರಾ ಅಂತರವನ್ನು ಇಟ್ಟುಕೊಂಡಿದ್ದಳು. ಸುರೇಶನ ತಂದೆ ಬಗ್ಗೆ ಚಕಾರ ಶಬ್ದವಿಲ್ಲ. ಮಂಚದ ಕೆಳಗೆ ಆಕೆಯದೊಂದು ಟ್ರಂಕಿತ್ತು. ಅದರೊಳಗೆ ಸುರೇಶನ ತಂದೆಯ ಫೋಟೋ, ಕೆಲವು ಕಾಗದ ಪತ್ರ



ಗಳು-ಆಕೆಯದೋ, ಬೇರೆಯವರದೋ ಇರ ಬೇಕು. ಇಷ್ಟು ವರ್ಷ ಕಳೆದವು. ಆದರೆ ಮನದೊಳಗಿನ ಅಸೂಯೆ ಮಾತ್ರ ಹೋಗ ಲಿಲ್ಲ......ಗೋವಿಂದರಾವ್ ಮನದಲ್ಲೇ ನಿರಾ ಶೆಯ ನಗುನಕ್ಕರು.....

ಮನೆಯಲ್ಲಿ ಯಾರೂ ಇಲ್ಲದಿದ್ದಾಗ ತಾರಾ ಟ್ರಂಕು ತೆರೆದು ಕೂಡುತ್ತಿದ್ದಳು. ಅದರ ಕೀಲಿ ಸದಾ ಕಾಲ ಸೊಂಟಕ್ಕೆ ಸಿಕ್ಕಿಸಿ ಇಡುತ್ತಿದ್ದಳು. ಅದರಲ್ಲಿರುವ ವಸ್ತುವನ್ನು ಕಪಾಟಿನಲ್ಲಿಡು ಎಂದು ತಾನು ಎರಡು ಮೂರು ಬಾರಿ ಹೇಳಿದ್ದೆ. ಅದಕ್ಕೆ ಉತ್ತರವಿಲ್ಲ. ಕಳೆದ ಇಡೀ ವರ್ಷ ಅವಳು ತನ್ನನ್ನು ಟ್ರಂಕಿನಲ್ಲಿ ಹಾಕಿಕೊಂಡಹಾ ಗಿತ್ತು. ಮಾತೂ ಅಷ್ಟಕ್ಕಷ್ಟೆ. ನೋಟದಲ್ಲಿ ವಕ್ರತೆ, ಕಂಗಳಲ್ಲಿ ಕೆಂಪು ಜ್ವಾಲೆ. ಆ ಜ್ವಾಲೆಯಲ್ಲಿ ಸಿಕ್ಕಿಕೊಂಡ ಹತಾಶೆ, ಆರಿದ ಕಪ್ಪು ಕಣ್ಗೊಂಬೆ......

ಕಳೆದ ವರ್ಷ ತಾರಾ ತನ್ನ ದೇಹಕ್ಕೆ ಸ್ಪರ್ಶ ಮಾಡಲೂ ಅವಕಾಶ ನೀಡಿರಲಿಲ್ಲ. ಆಕೆಯ ಬಿಳಿ ಗೋಣಿನ ಹೊಳಪು, ಅಲ್ಲಿ ಹಾರಾಡುವ ಕಪ್ಪುಗೂದಲು ನೋಡಿ ಮೈ ಉರಿಯು ತ್ತಿತ್ತು....ಅದೇನು ಮಹಾ ಬಿಡಿ....ಈಗೇನು ತಾರಾಳಿಗೆ ಮಕ್ಕಳಾಗುವ ಸಾಧ್ಯತೆಯಿರ ಲಿಲ್ಲ...... ಆದರೆ ಈ ವಿಷಯ ಮನದಲ್ಲಿ ಮೂಡಿದಾಕ್ಷಣ ಗೋವಿಂದರಾವ ಅವರ ಮುಖ ನಾಚಿಕೆಯಿಂದ ಮುದುಡಿತು. ಆದ್ದರಿಂ ದಲೇ ತಾರಾಳಿಗೆ ತನ್ನ ಸ್ಪರ್ಶ ಬೇಡಾಗಿರಲೂಬ ಹುದು........ ಏನೇ ಆಗಲಿ, ಆಕೆಯ ಹೊಟ್ಟೆ ಯಲ್ಲಿ ತನ್ನ ವಂಶವಿಲ್ಲ, ಆಕೆಯ ಮನಸ್ಸಿನ ಮೇಲೆ ತನ್ನ ಛಾಪೂ ಇಲ್ಲ. ನಿರ್ಲಿಪ್ತವಾಗಿ ಆಕೆ ಏಳು ವರ್ಷ ಕಳೆದಳು..... ಮಳೆ-ಋತುಗಳ ಸಂಬಂಧವಿಲ್ಲದ ಗಿಡದ ಅಸ್ಥಿಪಂಜರದಂತೆ ......ಕೈಜಾರಿ ಹೋಗದಿದ್ದರೆ ಸಾಕು. ಆಕೆ ಹಾಗೆ, ಈಕೆ ಹೀಗೆ....

ವ್ಯವಸ್ಥಿತವಾಗಿ ವ್ಯಾಪಾರಮಾಡಿದೆ. ಆ ಗುಜ ರಾತಿಗಳ ಎದೆ ಮೇಲೆ ಕಾಲಿಟ್ಟು ಕಾಲೂರಿ ನಿಂತೆ. ಕಳೆದ ಇಪ್ಪತ್ತೈದು ವರ್ಷಗಳಲ್ಲಿ ಒಮ್ಮೆಯೂ ದಿವಾಳಿಯಾಗುವ ಸಂದರ್ಭ ಬಂದಿಲ್ಲ. ಸ್ವಂತ ಮನೆ ಕಟ್ಟಿದೆ. ಬೆಳ್ಳಿ-ಬಂಗಾರ ಖರೀದಿಸಿದೆ. ಆದರೆ ಎಲ್ಲದರ ಬೆನ್ನಹುರಿಯೇ ಮುರಿದಂತೆ ಈ ದುರ್ಬಲ ವೈಭವ......

ಚಹದ ಕೊನೆಯ ಗುಟುಕಿನೊಂದಿಗೆ ಈ ವಿಚಾರಗಳನ್ನೆಲ್ಲ ಗೋವಿಂದರಾವ್ ಕುಡಿದು ಬಿಟ್ಟರು. ಈಗ ಸುರೇಶ ಹಾಸ್ಪಿಟಲ್‌ನಲ್ಲಿದ್ದಾ ನಂತೆ. ತಾರಾ ಹೀಗೆಲ್ಲ ನಡೆದುಕೊಳ್ಳಾಳೆ.... ಆದರೆ ಇದೇನೂ ಶಾಶ್ವತವಾಗಿರುವುದಿಲ್ಲ.... ಗೋವಿಂದರಾವ್ ಡಾಕ್ಟರರನ್ನು ಕಂಡು ಬಂದಿ ದ್ದರು. ಡಾಕ್ಟರ್ ಎಲ್ಲ ತಿಳಿಸಿ ಹೇಳಿದ್ದರು. ತಾರಾಳ ಆಸ್ಪತ್ರೆಯ ಓಡಾಟ ನಿಂತ ಬಳಿಕ ಆಕೆ ಪುನಃ ಸುಧಾರಿಸಬಹುದು. ಮನೆಯ ಕಡೆ ಲಕ್ಷ್ಯ ಹರಿಸಬಹುದು. ಉಪಾಯವಿಲ್ಲದೆ ಲೀನಾ-ಧೀರೆರನ್ನು ದೂರ ಇಡಬೇಕಾಯಿತು. ಅವ ರನ್ನು ಮತ್ತೆ ಮನೆಗೆ ಕರೆತಂದರಾಯಿತು. ತಾರಾಳ ಈ ವರ್ಷದ ವಿರಕ್ತಿಯೂ ಕರಗಬ ಹುದು.

ಗೋವಿಂದರಾವ್ ಬೇಗ ಬೇಗ ನಡೆಯಲಾ ರಂಭಿಸಿದರು. ಮೆಟ್ಟಲ ಹತ್ತಿರ ಬಂದ ಕೂಡಲೇ ಅವರಿಗೆ ನೆನಪಾಯಿತು. ವಿದ್ಯುತ್ತಿನ ಕನೆಕ್ಷನ್ ಇದ್ದ ಕಪಾಟಿನ ಕೀಲಿ ಮುರಿದಿತ್ತು. ಚಿಲಕಕ್ಕೆ ಹಳೆಯ ತಂತಿಯೊಂದನ್ನು ಸಿಕ್ಕಿಸಲಾಗಿತ್ತು. ಹೊಸದಾಗಿ ತರಿಸಿದ ಕೀಲಿ ಮನೆಯಲ್ಲಿತ್ತು. ತಂದು ಹಾಕಲು ಮರೆತಿದ್ದರು....ಇವತ್ತೇ ಸಾಧ್ಯವಾದರೆ ಹಾಕಬೇಕು. ಇಲ್ಲವಾದರೆ ಏನಾ ದರೂ ಅನಾಹುತ ನಡೆಯಬಹುದು.

-೩-

ಗೋವಿಂದರಾವ್ ಮನೆ ಬಾಗಿಲಿಗೆ ಬಂದರು. ಚಪ್ಪಲಿ ಕಳಚುವಾಗ ಎಡಗೈಯಲ್ಲಿ ಧೋತರದ ಚುಂಗು ಹಿಡಿದರು. ನಯವಾದ, ಬಿಳಿ ತೊಡೆ ಕಾಣಿಸಿತು. ತಾರಾ ಮುದುಡಿದಳು. ತಲೆಯ ಮೇಲಿನ ಟೊಪ್ಪಿಗೆ ತೆಗೆದು ಬೋಳು ತಲೆ ಮೇಲೆ ಕೈಯಾಡಿಸಿದರು. ತಕ್ಷಣ ತಿಜೋರಿಯ ಬಳಿಗೆ ಹೋಗಿ ಕಿಸೆಯೊಳಗಿನ ನೋಟುಗಳನ್ನು ಹೊರದೆಗೆದರು. ಒಮ್ಮೆ ಎಣಿಸಿದರು. ಎರ ಡನೇ ಸಲ ಎಣಿಸಿದರು. ಮೂರನೇ ಸಲ, ನಾಲ್ಕನೇ ಸಲ.... ಬಾಯಿ ತೆರೆದಿತ್ತು. ಮುಖದ ಮೇಲೆ ಹಪಾಪಿತನ. ಜೋಲುತ್ತಿರುವ ಕೆಳ ದುಟಿ.

ಈ ಮನುಷ್ಯನಿಗೆ ಊದು ಬತ್ತಿಯ ವಾಸನೆ ಹಾಗೂ ಅನ್ನದ ಜತೆಗೆ ಬೆಣ್ಣೆ ಇಷ್ಟವಾಗುತ್ತದೆ ಯೆಂದರೆ ? ಮನೆಗೋಡೆ ಸಹ ಬೆಣ್ಣೆ ಸವರಿ

ದಂತೆ ಬಿಳಿ ಆಯಿಲ್ ಪೇಂಟಿನಲ್ಲಿರಬೇಕೆಂಬಾಶೆ! ಯಾವ ಚಟವೂ ಇಲ್ಲ. ಸಿಗರೇಟು, ತಂಬಾಕಿಲ್ಲ. ಅಡಿಕೆಯ ಚಟವೂ ಇಲ್ಲ. ಸಂಪೂರ್ಣ ಲಕ್ಷ್ಯವೆಲ್ಲ ಬರೇ ಅಂಗಡಿ ಹಾಗೂ ಬೆಣ್ಣೆಯ ಮೇಲೆ! ತಾರಾಳ ದೇಹ ಕಂಪಿಸಿದಂತಾಯಿತು. ಆದರೆ ಎಡ ತೊಡೆಯ ಬತ್ತಲೆ ಪ್ರದರ್ಶನ, ಎಡಗೈ ಕುಣಿಸುವುದು, ಟೆಲಿಫೋನು ಗಂಟೆ ಬಾರಿಸುತ್ತಲೆ 'ತಮೆ ಕೋನ್' ಎಂಬ ನಿರ್ಜೀವ ಮಾತು, ಈ ಬಂಡವಾಳದ ಮೇಲೆ ನಡೆಯುವ ಈ ಬೆಣ್ಣೆ ವ್ಯಾಪಾರ. ಗೋವಿಂದರಾಯನ ಮೈಯಿಂದ ಬೆಣ್ಣೆಯ ಕಮಟು ವಾಸನೆ ಬಂತು. ಆ ಬೋಳು ಬೋಳು ಸ್ಪರ್ಶದಿಂದ ತನ್ನ ದೇಹವೂ ಜಿಗಟುಗೊಂಡಂತಾಗಿ ಹೇಸಿಗೆಯೆನಿಸಿತು......ಕೊನೇ ಪಕ್ಷ ಕಳೆದ ವರ್ಷವಾದರೂ ಇಲ್ಲ......ಆ ಸ್ಪರ್ಶದ ನೆನಪೂ ಅಸಹ್ಯವೆನಿಸಿತು.

"ಇವತ್ತು ಆಸ್ಪತ್ರೆಗೆ ಹೋಗಿದ್ದಿಯಲ್ಲವೆ ?" ನೋಡಿರಬೇಕು. ಉತ್ತರಿಸುವ ಅವಶ್ಯಕತೆಯೂ ಇರಲಿಲ್ಲ.

"ಸುರೇಶ ಹೇಗಿದ್ದಾನೆ ?"

ಆ ಆಸೆಬುರಕ ನೋಟ ಸಹಿಸಿದ್ದಾಯಿತು, ಕೊಂಕು ನೋಟವನ್ನು ವಿರೋಧಿಸಲಿಲ್ಲ, ಆದರೆ ಉಪಚಾರದ ಈ ನಾಟಕೀಯ ಪ್ರಶ್ನೆ ಮಾತ್ರ ಬೇಡವಾಗಿತ್ತು.

"ಆರೋಗ್ಯವಾಗಿದ್ದಾನೆ."

"ಡಾಕ್ಟರರು ಏನು ಹೇಳಿದರು ?"

"ಕ್ರಮೇಣ ಸುಧಾರಿಸಬಹುದು ಅಂತ ಹೇಳಿದರು."

ಡಾಕ್ಟರ್ ಯಾವಾಗಲೂ ಕ್ರಮೇಣ ಸುಧಾರಿಸ್ತಾನೆ ಅಂತಾನೇ ಹೇಳುತ್ತಿದ್ದರು.

ಕಳೆದ ವರ್ಷದ ತನಕ ಸುರೇಶ ಶಾಲೆಗೆ ಹೋಗುತ್ತಿದ್ದ. ಗಣಿತದಲ್ಲಿ ತೀರಾ ಬುದ್ಧಿವಂತ. ಒಂದು ದಿನ ಮಾತ್ರ ಅಂಗಡಿಗೆ ಹೋಗಿ ಸಾಮಾನು ತರುವಾಗ ಬೆರಳಿನಿಂದ ಎಣಿಕೆ ಮಾಡಲಾರಂಭಿಸಿದ. ಅದನ್ನು ನೋಡಿ ತಾರಾ ಕಂಪಿಸಿದಳು. ಆರು ತಿಂಗಳ ಪರೀಕ್ಷೆಯಲ್ಲಿ ಸುರೇಶ ಗಣಿತದಲ್ಲಿ ಬಹಳ ಕಡಿಮೆ ಅಂಕಗಳಿಸಿದ. ಶಂಕರನಿಗೆ ಮೊದಲ ಸ್ಥಾನ ಬಂತು. ಅದನ್ನು ಕಂಡು ಸುರೇಶ ಶಂಕರನನ್ನು ಸಿಕ್ಕಾಪಟ್ಟೆ ಬೈದ.

ಸುರೇಶನ ಎಡಗೈ ಕ್ರಮೇಣ ಚಲಿಸಲಾರಂಭಿಸಿತು. ಬೆರಳು ಮುರಿಯುವ ಅಭ್ಯಾಸ ಆರಂಭವಾಯಿತು. ರಾತ್ರಿಯಿಡೀ ನಿದ್ದೆಯಿಲ್ಲ. ಕಣ್ತೆರೆದೇ ಮಲಗಲಾರಂಭಿಸಿದ. ಉಪಾಯವಿಲ್ಲದೆ ಡಾಕ್ಟರರಿಗೆ ತೋರಿಸಬೇಕಾಯಿತು.

ಡಾಕ್ಟರ್ ಹಿಂದಿನ ಇತಿಹಾಸವನ್ನೆಲ್ಲ ಕೇಳಿದರು. ಹುಡುಗನ ಹೆಸರು ಸುರೇಶ ಚಿತಳೆ. ವರ್ಷ ಹದಿನೈದು. ತಂದೆ ಶ್ರೀಪಾದ. ತನ್ನ ಹೆಸರು ಮಾತ್ರ ತಾರಾ ಕಾಳೆ. ಅವನ ತಾಯಿ! ಡಾಕ್ಟರ್ ತಲೆಯೆತ್ತಿದರು. ಅವನನ್ನು ಮೊದಲ ಮಗ ಎನ್ನಬೇಕೆ ? ಅಥವಾ ತನ್ನದು ಎರಡನೇ ಮದುವೆ ಎನ್ನಬೇಕೆ ? ಎಂಬ ಗೊಂದಲ. ಡಾಕ್ಟರರಿಗೆ ಎಲ್ಲ ಅರ್ಥವಾಯಿತು. ಅವರು ನಸುನಕ್ಕಾಗ ಬತ್ತಲೆಯಾದಂತಾಯಿತು.

ಡಾಕ್ಟರರು ನಿದ್ದೆ ಗುಳಿಗೆ ಬರೆದುಕೊಟ್ಟರು. ಮೊದಲ ಬಾಟಲಿ ಅರ್ಧ ಮುಗಿಯಿತು. ಆದರೂ ಮಾಸ್ತರನಿಗೆ ಬಯ್ಗಳು, ಗೋವಿಂದರಾಯರಿಗೆ ಬಯ್ಗಳು ಮಾತ್ರ ನಿಲ್ಲಲಿಲ್ಲ....ಒಂದು ದಿನ ಧೀರೆನನಿಗೆ ಕ್ರಿಕೆಟ್ ಬ್ಯಾಟಿನಿಂದ ಹೊಡೆದ. ಪುಣ್ಯಕ್ಕೆ ಬಹಳ ಪೆಟ್ಟು ಬೀಳಲಿಲ್ಲ. ಗಾಬರಿಗೊಂಡ ಗೋವಿಂದರಾವ್ ಧೀರೆನ್ ಹಾಗೂ ಲೀನಾಳನ್ನು ಅದೇ ದಿನ ಕಳಿಸಿಕೊಟ್ಟರು. ಎರಡು ದಿನಗಳ ನಂತರ ತಾರಾಬೆನ್ ಎನ್ನುತ್ತ ಭೋಗಿಲಾಲ ಬಂದಿದ್ದ. ಬೆತ್ತದಿಂದ ಅವನನ್ನು ಹೊಡೆಯಲು ಬೆನ್ನಟ್ಟಿದ....ಕೊನೆಗೆ ಆಸ್ಪತ್ರೆಗೆ ಸೇರಿಸಬೇಕಾಯಿತು.

ಅಂದಿನಿಂದ ಆಸ್ಪತ್ರೆಯ ಈ ಓಡಾಟ ಹಾಗೂ ಈ ತಲೆನೋವು ಆರಂಭವಾಯಿತು. ಆಗಾಗ ಗೋಣು ಚುಚ್ಚುವ ಸೂಜಿಯಂಥ ವೇದನೆ. ಪ್ರತಿಸಲ ತಲೆನೋವು ಹೆಚ್ಚಾಗುತ್ತಿತ್ತು. ಸುರೇಶನ ಆರೋಗ್ಯ ಕ್ಷೀಣಿಸುತ್ತಿತ್ತು. ನೋಟ ಮತ್ತೂ ವಕ್ರ. ದೇಹ ಎಲುಬಿನ ಗೂಡು. ಕಣ್ಗೊಂಬೆ ಗೋಲಿಯಂತೆ ನಿಸ್ತೇಜ. ಒಣಗಿದ ಕಡ್ಡಿಯಂಥ ದೇಹ.

ಆದರೆ ಶುಷ್ಕ ಮುಖದ ಡಾಕ್ಟರ್, "ಕ್ರಮೇಣ ಸುಧಾರಿಸುತ್ತದೆ," ಎಂದೇ ಹೇಳುತ್ತಿದ್ದ. ಆ ಡಾಕ್ಟರರನ್ನು ಗಟ್ಟಿಯಾಗಿ ಅಲುಗಾಡಿಸಿ ಹೇಳಬೇಕೆಂದೆನಿಸಿತು.. ಏನಾಗುತ್ತದೆ. ಅನ್ನೋದು ನನಗ್ಗೊತ್ತು. ಅವನ ಅಪ್ಪ, ಅಜ್ಜ ಹೀಗೆಯೇ

ಸತ್ತರು. ಅವನ ಅಪ್ಪನನ್ನು ಇದೇ ಆಸ್ಪತ್ರೆಗೆ ತಂದು, ಇದೇ ಡಾಕ್ಟರನ ಸ್ವಾಧೀನ ಮಾಡಿದ್ದೆ. ಇದು ಕಳೆದು ವರ್ಷವೂ ಕಳೆಯಲಿಲ್ಲ. "ಇದು ಮನೆತನದ ದೋಷ. ಇಂಥ ಮದುವೆ ಸರಿಯಲ್ಲ" ಎಂದುಅಮ್ಮ ಬಹಳ ಹೇಳಿದ್ದಳು. ತಾನು ಚೇಷ್ಟೆ ಮಾಡಿದ್ದೆ. "ನಿನ್ನ ಗಲ್ಲದ ಮೇಲೆ ಬಿಳಿ ಮಚ್ಚೆ ಇದೆ. ನನಗೂ ಇದೆಯಾ? ಪ್ರತಿಯೊಂದು ವಾರಸಾದೋಷ ಎಂದಾದರೂ ಬರುತ್ತದೆಯೆ?" "ತಾರಾ, ನಾಳೆ ಏನಾದರೂ ಹೆಚ್ಚು ಕಡಿಮೆ ಆದ್ರೆ ಗತಿಯೇನು? ನಾನು ಇರಬಹುದು, ಇರಲಿಕ್ಕಿಲ್ಲ. ಅಪ್ಪ ಇಲ್ಲ, ತಮ್ಮನೂ ಇಲ್ಲ. ನೀನೋ ಏಕಾಕಿ. ಒಂಟಿ ಹೆಂಗಸು. ಶ್ರೀಪಾದನ ಅಮ್ಮನ ಗತಿಯೇ ಸಾಯ್ತುಗೊತ್ತೆ?"

"ಅದು ಶ್ರೀಪಾದನ ಅಮ್ಮನದೇ ತಪ್ಪು. ಗಂಡನಿಗೆ ಮತಿಭ್ರಮಣೆಯಾದ ನೆಪ ಹೇಳಿ ತವರಿಗೆ ಹೊರಟು ಹೋದಳು.... ಹೀಗಾಗಿ ಎಲ್ಲ ಕೈಮೀರಿ ಹೋಯ್ತು."

"ಗಂಡಸರ ಎದುರಿಗೆ ಹೆಂಗಸಿನದು ಏನು ನಡೆಯುತ್ತದೆ? ಉಡಿಯಲ್ಲಿದ್ದ ಮಗನನ್ನು ಸಂಭಾಳಿಸಬೇಕಾಯಿತು. ಹೋಗಲೇಬೇಕಾಯ್ತು."

"ಅಮ್ಮ ನೀನೇನೂ ಹೆದರಬೇಡ, ಅಂಥಾದ್ದೇನೂ ಆಗೋದಿಲ್ಲ. ಹಾಗೇನಾದರೂ ಆದರೆ ನಾನೇನು ಗಂಡನನ್ನು ಬಿಟ್ಟು ಹೋಗೋದಿಲ್ಲ...."

ಸಾವಿತ್ರಿಯ ನಿಷ್ಠೆ ವ್ಯಕ್ತಪಡಿಸಿದ್ದೆ.

ಮದುವೆಯಾದ ವರ್ಷದೊಳಗೇ ಸುರೇಶ ಹುಟ್ಟಿದ.... ಸುರೇಶನ ಹುಟ್ಟುಹಬ್ಬದ ದಿನ ನೀಲಿ ಸೀರೆ ತಂದಿದ್ದ. ಜೋಪಾನವಾಗಿಟ್ಟ ಆ ಸೀರೆಯನ್ನೇ ಮೈ ತುಂಬ ಹೊದ್ದುಕೊಳ್ಳಬೇಕೆಂದು ಮಾಡಿದ್ದಳು. ಆದರೆ ಆ ಪ್ರಸಂಗವೇ ಬರಲಿಲ್ಲ. ಬರೆ ಸುಖದಿಂದಲೇ ತುಂಬಿ ತುಳುಕಿದ ಮೊದಲ ವರ್ಷ! ಆ ವರ್ಷಕ್ಕೆ ಬರೇ ಸಿಗರೇಟಿನ ಉಗ್ರವಾಸನೆ. ತಾಜಾ, ಉಗ್ರ ಪುರುಷ ವಾಸನೆ. ಶ್ರೀಪಾದನ ಸಿಗರೇಟು ವಾಸನೆ ಎಷ್ಟು ಮೈಗೂಡಿತ್ತೆಂದರೆ ಮೊನ್ನೆ ಮೊನ್ನೆಯವರೆಗೆ ಸಿಗರೇಟಿನ ವಾಸನೆ ಬಂತೆಂದರೆ ಮೈ ಕಂಪಿಸುತ್ತಿತ್ತು.

ಶ್ರೀಪಾದ ಪೋಲೀಸ ಖಾತೆಯಲ್ಲಿ ನೌಕರಿ ಮಾಡುತ್ತಿದ್ದರೂ ಎಂದೂ ಸುಳ್ಳು, ತಟವಟ ಇರಲಿಲ್ಲ. ಲಂಚ ತಿನ್ನಲಿಲ್ಲ...... ಆದರೊಂದು ದಿನ ಇಂಗಳೆ ಎಂಬ ಅಧಿಕಾರಿ ಬಂದ. ಅವನಿಗೆ ಬಾಯಿಗೆ ಬಂದಂತೆ ಬೈದು ಮನೆಗೆ ಬಂದ. ನೌಕರಿಯ ಸಮಸ್ಯೆ ಏನಾದರೂ ಇದ್ದಿರಬೇಕೆಂದು ತಾನೂ ಸುಮ್ಮನಿದ್ದೆ. ಆದರೆ ಬೆರಳೆಣಿಕೆ ಮಾಡಿಯೂ ಲೆಕ್ಕ ತಪ್ಪುತ್ತಿರುವುದು ತನ್ನ ಗಮನಕ್ಕೆ ಬಂತು. ಅವನ ಉಗ್ರ ದರ್ಪವೂ ಇಂಗಿಹೋಯಿತು. ಅತ್ಯಂತ ಕೆಟ್ಟ ಬಾಯಿ ವಾಸನೆ. ಕೆಲಸಕ್ಕೆ ಹೋಗುವುದನ್ನೂ ನಿಲ್ಲಿಸಿದ.

ಸಿಕ್ಕ ಸಿಕ್ಕವರಿಗೆಲ್ಲ ಬೈಗಳ ಸುರಿಮಳೆ.

"ನಾನೇನು ಅವನನ್ನು ತೊರೆದು ಹೋಗುವದಿಲ್ಲ.....!"

ಹನ್ನೊಂದು ತಿಂಗಳು ಶ್ರೀಪಾದ ಆಸ್ಪತ್ರೆಯಲ್ಲಿ ಏಕಾಕಿಯಾಗಿ ಕಳೆದ. ಮೊದಮೊದಲು ಅವನನ್ನು ಕಾಣಲು ಹೋದಾಗ "ಆರೋಗ್ಯ ಸುಧಾರಿಸಿದ ಕೂಡಲೆ ಆ ಇಂಗಳೆಗೆ ಬುದ್ಧಿ ಕಲಿಸುತ್ತೇನೆ" ಎಂದು ಉತ್ಸಾಹದಿಂದ ಹೇಳುತ್ತಿದ್ದ. ತಾನು ತಂದುಕೊಟ್ಟ ಮಿರ್ಚಿ ಭಜಿ ಪ್ರೀತಿಯಿಂದ ತಿನ್ನುತ್ತಿದ್ದ.

ಶಾಕ್ ಟ್ರೀಟ್‌ಮೆಂಟ್ ಆರಂಭವಾದ ಕೂಡಲೇ ದೇಹ ಮಾತ್ರ ಹಿಂಡಿದ ಬಟ್ಟೆಯಂತೆ ಕಾಣಲಾರಂಭಿಸಿತು. ಕೊನೆಯ ಮೂರು ತಿಂಗಳಂತೂ ಗುರುತು ಹಿಡಿಯುತ್ತಿರಲಿಲ್ಲ. ಮೂರು ತಿಂಗಳ ಕಾಲ ಕೊಠಡಿಯಲ್ಲಿ ಕೂಡಿ ಹಾಕಲಾಯಿತು. ಮೂರು ತಿಂಗಳು ಸಾಕಷ್ಟು ಪುರಸೊತ್ತಿರುವುದರಿಂದ ಗಪಗಪ ಉಂಡಳು.

ಶ್ರೀಪಾದ ಹೋದ ಕೆಲವೇ ವರ್ಷಗಳಲ್ಲಿ ಆಪರೇಶನ್ ಮಾಡಿಸಿಕೊಂಡ ಈ ಬೆಣ್ಣೆ ಮುದ್ದೆಯ ಜಾಹೀರಾತು ನೋಡಿ ಪುನಃ ಮದುವೆ ಮಾಡಿಕೊಂಡಿದ್ದಳು. ತಾನಾಗಿಯೇ ಕಪ್ಪು ನೇಣಿಗೆ ಕೊರಳು ಕೊಟ್ಟಿದ್ದಳು. ಜಾಹೀರಾತಿನಂತೆ ಸಂಸಾರ ಮಾಡಿದ್ದಳು. ಸ್ವಂತ ಮನೆ, ಬಂಗಾರದ ಆಭರಣ, ಮೂರು ಮೂರು ಮಕ್ಕಳು.....ಎಲ್ಲ ವರ್ಣರಂಜಿತ, ಆಕರ್ಷಕ.....

ಮದುವೆ ನೋಡಿ ಆಸೆ ಚಿಗುರಿತ್ತು. ಮೊದಲ ರಾತ್ರಿಯೇ ಗೋವಿಂದರಾವ್ ಹೇಳಿದ್ದರು, "ಅಷ್ಟೆ ಅಪೇಕ್ಷೆಯಾಗಿದ್ದರೆ ಅಡಿಗೆಯಾಕೆ

ಯನ್ನು ಇಡುತ್ತಿದ್ದೆನಲ್ಲ ?" ಅನಂತರ ಯಾವ ಮಾತೂ ಇಲ್ಲ.

ಅಮ್ಮನ ಏಕಾಕಿ ಮಗಳು......ಆಕೆಗೆಂದೂ ಸುಖ ನೀಡಲಿಲ್ಲ. ಆಕೆ ಕಾಳಜಿಯಲ್ಲೇ ಸೊರಗಿ ಹೋದಳು- ಕೊನೆಗೆ ಹೇಳಿದಂತೆ ಮಾಡಲಿಲ್ಲ. ಆ ಕರಿ ಮುಸುಡಿ ಕಸಾಯಿಯವನ ಕೈಗೆ ಶ್ರೀಪಾದನನ್ನು ಒಪ್ಪಿಸಲಾಯಿತು. ಈಗ ಈ ಬೆಣ್ಣೆ ವ್ಯಾಪಾರಿಯೊಂದಿಗೆ ಈ ವ್ಯವಹಾರ. ಈಗ ಈ ಅನಿಷ್ಟ ಪರಂಪರೆ ಮುಂದುವರೆಯಲು ಯಾವ ನಿಮಿತ್ತವೂ ಉಳಿಯಲಿಲ್ಲ ಅನ್ನೋದೆ ಸಮಾಧಾನದ ಸಂಗತಿ.....

ಸುರೇಶನಿಗೆ ಶಾಕ್ ಟ್ರೀಟ್‌ಮೆಂಟ್ ನೀಡಿದರು. ಸುರೇಶ ಶ್ರೀಪಾದನಂತೆ ಕಾಣಲಾರಂಭಿಸಿದ. ನೆತ್ತಿಯ ಮೇಲೆ ನಿಮಿರಿ ನಿಲ್ಲುವ ಕೂದಲು, ಚಲಿಸುವ ಎಡಗೈ ಬೆರಳು, ನಿಸ್ತೇಜ ಕಂಗಳು. ಶಾಕ್ ನೀಡಿದ ನಂತರ ಯಾರ ಗುರುತೂ ಹಿಡಿಯದ ಸ್ಥಿತಿ-ಸುರೇಶನ ವಯಸ್ಸು ಕಿರಿಯದು. ಮೈಬಣ್ಣ ಸ್ವಲ್ಪ ಬಿಳಿಯದು, ಇಷ್ಟೇ ವ್ಯತ್ಯಾಸ....

ಪ್ರತಿಸಲ ಶಾಕ್ ನೀಡಿದಾಗ ಬರೇ ಗುರುತು ಮಾತ್ರ ಉಳಿಯುತ್ತಿತ್ತು. ಅವರಿಬ್ಬರ ಸುಖದ ಪಾಲುಗಾರಿಕೆಯೂ ಇಲ್ಲ!

ಇವತ್ತು ಹೋದಾಗ ಸುರೇಶನ ಭೇಟಿಯೂ ಆಗಲಿಲ್ಲ. 'ಶಾಕ್' ನೀಡಲಾಗಿದೆ ಎಂಬ ಕಾರಣ ನೀಡಿ ಭೇಟಿ ನಿರಾಕರಿಸಲಾಯಿತು. ಕ್ಷಣಕಾಲ ಏನೂ ಹೊಳೆಯಲೇ ಇಲ್ಲ. ಹಿಂದಿನ ಸಲ ಶಾಕ್‌ನೀಡಿದ ಕೆಲ ಸಮಯದೊಳಗೇ ಭೇಟಿ ಮಾಡಿಸಲಾಗಿತ್ತು. ಇವತ್ತೇ ಏಕಿಲ್ಲ ? ಬಹಳ ವಿನಂತಿಸಿಕೊಂಡ ಬಳಿಕ ಸುರೇಶನ ಕೊಠಡಿಗೆ ಕರೆದೊಯ್ಯಲಾಯಿತು. ಸುರೇಶನೆಲದ ಮೇಲೆ ಅಂಗಾತ ಮಲಗಿದ್ದ... ಡಾಕ್ಟರರನ್ನು ನೋಡಿ ಎದ್ದು ಕೂತ ಬೆದರಿದವರಂತೆ. ತನ್ನನ್ನು ನೋಡಿ ಯಾವ ಪ್ರತಿಕ್ರಿಯೆಯನ್ನೂ .ತೋರಿಸಲಿಲ್ಲ. ಪರಿಚಯದ ಗುರುತೂ ಇಲ್ಲ. ಅಮ್ಮ ಎಂದು ತೊದಲು ನುಡಿಯಲೂ ಇಲ್ಲ. ಇನ್ನು ಮುಂದೆ ಭೇಟಿಯಾದರೂ ಅಷ್ಟೇ, ಬಿಟ್ಟರೂ ಅಷ್ಟೇ.

ತಾರಾ ಬೆರಳು ಮುರಿದಳು. ಅನಂತರ ಆಕೆ ಒಳಗಿನ ಕೋಣೆಗೆ ಹೋಗಿ ಟ್ರಂಕಿನ ಎದುರಿಗೆ ಕೂತಳು.

-೪-

ಗೋವಿಂದರಾವ್ ತಡಮಾಡಿ ಮನೆಗೆ ಮರಳಿದರು. ಅನಂತರ ಮತ್ತೆ ಅರ್ಧಗಂಟೆ ಕಳೆಯಿತು. ಆಸ್ಪತ್ರೆಯಿಂದ ತಾರಾ ಮರಳಿದಳೆಂದರೆ ಎಲ್ಲ ಹದಗೆಡುತ್ತಿತ್ತು. ಇಡೀ ದಿನ ಹಾಳು. ಮನೆಗೆ ಬಂದರೆ ಊಟವಿಲ್ಲ. ಮಾತಾಡಲು ಹೋದರೆ ಕಡ್ಡಿ ತುಂಡು ಮಾಡಿದಂತೆ ಮಾತು. ಸಹಾನುಭೂತಿಯ ಮಾತೆತ್ತಿದರೆ ಕೆರಳುವ ನೋಟ.....

ಇದು ಬಹಳ ದಿನ ನಡೆಯುವ ಆಟವಲ್ಲ, ಅನ್ನೋದೇ ಸಮಾಧಾನದ ಸಂಗತಿ... ಆಸ್ಪತ್ರೆಯ ಈ ಓಡಾಟ ಮುಗಿದ ಕೂಡಲೇ ಧೀರೆನ್-ಲೀನಾರನ್ನು ಮರಳಿ ಕರೆ ತರಬೇಕು. ಐದಾರು ವರ್ಷಗಳಿಂದ ಮನೆಗೆ ಬಣ್ಣ -ಸುಣ್ಣ ವಿಲ್ಲ. ಬಿಳಿ ಆಯಿಲ್ ಪೇಂಟಿನ ಒಂದು ಕೈ ಹೊಡೆದರೆ ಸಾಕು. ಮುಖ್ಯ ಅಂದರೆ ತಾರಾಳ ಮನಸ್ಸು ಪರಿವರ್ತನೆಗೊಳಿಸುವುದು- ಹುಳುಕು ಮರದ ಹಣ್ಣು ಹುಳುಕೇ ಏನೋ. ಆದರೆ ತಾರಾ ಈಗ ಅದನ್ನೆಲ್ಲ ಮರೆಯಬೇಕು. ತಾನೂ ಒಬ್ಬ ಡಾಕ್ಟರನನ್ನು ಕಂಡು ಮೊದಲಿನಂತೆ ಮಾಡಿಕೊಳ್ಳುವುದು. ಇದರಿಂದ ತಾರಾಳ ಮನಸ್ಸು ಹುರುಪುಗೊಳ್ಳಬಹುದು.....

ಗೋವಿಂದರಾವ್ ಒಳಗೆ ಹೋದರು....ತಾರಾ ಟ್ರಂಕಿನೆದುರು ಕೂತಿದ್ದಳು. ಅದರೊಳಗಿನ ಕಾಗದ ಪರಿಶೀಲಿಸುತ್ತಿದ್ದಳು. ತಾನು ಮನೆಯೊಳಗಿದ್ದಾಗ ಆಕೆ ಟ್ರಂಕು ತೆರೆದದ್ದಿಲ್ಲ. ಅವರು ಕುತೂಹಲದಿಂದ ಮುಂದಾದರು. ಏನು ಮಾಡ್ತಿದ್ದೀಯಾ ?"

ಅವಸರದಲ್ಲಿ ಟ್ರಂಕು ಮುಚ್ಚುತ್ತ, "ಕಸ ಜಾಡಿಸುತ್ತಿದ್ದೇನೆ!" ಅಂದಳು ಆಕೆ.

'ಕಸ' ಎಂಬ ಶಬ್ದವನ್ನು ತಾರಾ ಎಷ್ಟು ಕ್ರೂರವಾಗಿ ಉಚ್ಚರಿಸಿದಳೆಂದರೆ ಗೋವಿಂದರಾಯರಿಗೆ ಪರಚಿದಂತಾಯಿತು. ಮನಸ್ಸು ಹತ್ತಿಕ್ಕಿಕೇಳಿದರು, "ಊಟ ಮಾಡೋಣವೇ"?

"ಈಗ ಬರ್ತೇನೆ :", ಎಂದವಳೇ ಕೋಣೆಯ ಬಾಗಿಲು ಹಾಕಿಕೊಂಡಳು. ಬಹಳ ಹೊತ್ತಿನ ನಂತರ ಬಾಗಿಲು ತೆರೆಯಿತು. ತೆರೆದ ತಕ್ಷಣ ಸುಟ್ಟ ಕರಕಲು ವಾಸನೆ ಬಂತು. ಗೋವಿಂದ

ರಾವ್ ಮುಂದಾದರು. ತಾರಾ ಅವರಿಗೇನೂ ಕಾಣದಂತೆ ಬಾಗಿಲು ಎಳೆದುಕೊಂಡಳು. ತಾರಾ ಸೀರೆ ಬದಲಾಯಿಸಿದ್ದಳು!

"ಈಗೇಕೆ ಸೀರೆ ಬಯಲಾಯಿಸಿದೆ ?" ಹಳದಿಯಂಚಿನ ನೀಲಿ ಸೀರೆ- ಅದನ್ನು ಈ ಹಿಂದೆ ನೋಡಿದ ನೆನಪು ಗೋವಿಂದರಾಯರಿಗಿಲ್ಲ.

ರಾತ್ರಿ ಸೀರೆ ಬದಲಾಯಿಸುವುದು ಅನಸೂಯೆಯ ಸಂಕೇತ. ಸೀರೆ ಬದಲಾಯಿಸಿದಾಗ ಅನಸೂಯೆಯ ನೋಟ ಮೇಲೆ ಹೋಗುತ್ತಿರಲಿಲ್ಲ. ಕಣ್ಣಿಗೆ ಕಣ್ಣು ಸಂಧಿಸದೇ ಓಡಾಡುತ್ತಿದ್ದಳು... ಅರಳಿದ ದೇಹ, ನಾಚಿ ಮುದ್ದೆಯಾದ ಮುಖ....ತಾರಾ ಮಾತ್ರ ಯಾವ ಸಂಕೇತವನ್ನೂ ನೀಡಿರಲಿಲ್ಲ.

ತಾರಾಳ ದೇಹದ ಹಳದಿಯಂಚಿನ ಸುತ್ತಲೂ ಗೋವಿಂದರಾಯರ ಧಗಧಗಿಸುವ ನೋಟ ಹರಿಯಿತು.....ನೋಟ ಚಲಿಸುತ್ತಿರಲಿಲ್ಲ....ಕಾಳಜಿಯಿಂದ ಮುಖ ಕಪ್ಪಿಟ್ಟರೂ. ದೇಹ ಮಾತ್ರ ವಿದ್ಯುತ್ತಿನಂತೆ ಥಳಥಳಿಸಲು ಕಾರಣವೇನು ? ಬೆನ್ನಿನ ಮೈ ಮಾಟ.... ನೆಲ ನೋಡುವ ನೋಟ.....ಕೊರಳ ಮೇಲಿನ ಕೂದಲ ಜೊಂಪೆ.....

ತಡೆಯುವುದಾಗದೇ ತಾರಾಳ ಗೋಣು ಸ್ಪರ್ಶಿಸಿದರು. ಗೋಣ ಮೇಲೆ ಹಲ್ಲಿಬಿದ್ದವಳಂತೆ ಆಕೆ ಬೆಚ್ಚಿದಳು. ಗೋವಿಂದರಾಯರ ಹಪಾಪಿ ಮುಖ, ಜೋಲುಬಿದ್ದ ದಪ್ಪ ತುಟಿ..... ವಾಸನೆಯೂ ಸಹ ಧಗ ಧಗ ಎಂದು ಹೊತ್ತಿಕೊಳ್ಳುವ ಹಾಗಿಲ್ಲ; ಹಾವಸೆಯಂಥ ಜಾರುಬಂಡೆ.....

ತಾರಾಳ ಮುಖದ ಮೇಲಿನ ಅಸಹ್ಯ ಭಾವನೆ ಕಂಡು ಗೋವಿಂದರಾವ್ ಕರಗಿದರು. ಈಗ ಕೆಲಕ್ಷಣ ತಾರಾ ಎದುರಿಗೆ ಬೇಡ. ತನ್ನ ಹಪಾಪಿ ಮುಖ, ಆಸೆಬರುಕುತನ ಆಕೆಯ ಕಣ್ಣಿಗೆ ಬೀಳಬಾರದು.....

ಈ ಸೀರೆ ತನಗಾಗಿಯಲ್ಲ. ಈ ಮೊದಲೂ ಅದನ್ನು ನೋಡಿರಲಿಲ್ಲ. ಇದೆಲ್ಲಿಂದ ಬಂತು ? ತಾರಾ ಇಷ್ಟು ಹೊತ್ತಿನವರೆಗೆ ಆ ಟ್ರಂಕಿನೆದುರು ಕೂತು ಏನು ಮಾಡುತ್ತಿದ್ದಳು ? ಆ ಫೋಟೋ ಯಾರದು ? ಪತ್ರ ಯಾರದ್ದು ? ಎಂಬ ಕುತೂಹಲ ಗೋವಿಂದರಾಯರನ್ನು ಬಡಿದೆಬ್ಬಿಸಿತು. ತಕ್ಷಣ ಹೋಗಿ ಟ್ರಂಕು ತೆರೆಯಬೇಕು, ಪತ್ರ ಯಾರದ್ದೇ ಇರಲಿ, ಅದನ್ನು ಓದಬೇಕು....

ತಾರಾಳನ್ನು ಎಲ್ಲಾದರೂ ಕಳಿಸಬೇಕು. ಗೋವಿಂದರಾವ್ ಅವಸರದಿಂದ ಕೀಲಿ ತೆಗೆದುಕೊಂಡು ಮುಂದಾದರು. ತಾರಾಳಿಗೆ ಕೀಲಿ ಕೊಡುತ್ತ ಹೇಳಿದರು, "ಕೆಳಗಿನ ವಿದ್ಯುತ್ತಿನ ಡಬ್ಬಿಗೆ ಬರೇ ತಂತಿ ಸಿಕ್ಕಿಸಲಾಗಿದೆ. ಅದನ್ನು ತೆಗೆದೊಗೆದು ಈ ಕೀಲಿ ಹಾಕಿ ಬಾ...."

ತಾರಾ ಧಾವಿಸಿ ಬಂದಳು. ಇಷ್ಟು ದಿನ ತನಗೇಕಿದು ಹೊಳೆಯಲಿಲ್ಲ ? ಶ್ರೀಪಾದ ತಂದ ಈ ಸೀರೆಯೂ ಮೈಲಿಗೆಯಾಯಿತು. ಮುಗಿಯಿತು. ಈಗ ಹೊಸದು ಸಿಗುವುದಿತ್ತೇನೋ ? ಕೈಯಲ್ಲಿದ್ದ ಕೀಲಿಯನ್ನಾಕೆ ಮೆಟ್ಟಿಲ ಮೇಲೆಯೇ ಚೆಲ್ಲಿದಳು. ಆಕೆ ವಿದ್ಯುತ್ ಡಬ್ಬಿಯ ಬಳಿಗೆ ಬಂದಾಗ ಗೋಣಮೇಲಿನ ಸೂಜಿ ಚುಚ್ಚುತ್ತಿತ್ತು. ಬಾಗಿಲಿಗೆ ಸಿಕ್ಕಿಸಿದ ತಂತಿ ಕಳಚಿ ಅದನ್ನು ಕೈಯಲ್ಲಿ ಹಿಡಿದು ಫ್ಯೂಜ್ ಸಮೀಪ ಹೋದಳು. ಅಲ್ಲೊಂದು ದಪ್ಪ ತಂತಿ ತೂಗುಬಿದ್ದಿತ್ತು. ತನ್ನ ಕೈಲಿದ್ದ ತಂತಿಯಿಂದ ವಿದ್ಯುತ್ ಹರಿಯುವ ಈ ತಂತಿಯನ್ನು ಸ್ಪರ್ಶಿಸಿದಳು. ತಕ್ಷಣ ಮಿಂಚಿನಂತೆ ಬೆಂಕಿ ಭುಗಿಲ್ಲೆದ್ದಿತು. ನೆತ್ತಿಯ ತುದಿಗೆ ಮಿಂಚು ಹರಿದಂತಾಯಿತು. ನೆತ್ತಿಯ ಸೂಜಿ ನುಂಗಿತು. ಯಾರೋ ವಿಲಕ್ಷಣವಾದ ಆವೇಗದಿಂದ ಅಪ್ಪಿಕೊಂಡಂತಾಯಿತು.

-೫-

ತಾರಾಳ ಟ್ರಂಕಿನೆದುರು ಗೋವಿಂದರಾವ್ ನಿಂತಿದ್ದರು. ಟ್ರಂಕು ತೆರೆದಿತ್ತು. ವಿದ್ಯುತ್ ಆಘಾತಕ್ಕೊಳಗಾದಂತೆ ಕಾಣುತ್ತಿತ್ತು. ಎಲ್ಲ ಉದ್ಧ್ವಸ್ತ. ಕಾಗದಪತ್ರಗಳೆಲ್ಲ ಸುಟ್ಟು ಕರಕಲಾಗಿತ್ತು. ಅಷ್ಟರಲ್ಲಿ ಒಮ್ಮೆಲೆ ಭಗ್ಗನೇ ಮಿಂಚಿದಂತಾಗಿ ಮನೆಯ ದೀಪಗಳೆಲ್ಲ ಆರಿದವು. ಆ ಕಗ್ಗತ್ತಲೆಯಲ್ಲಿ ಟ್ರಂಕಿನೊಳಗಿನ ಆರದ ಒಂದು ಕಿಡಿ ಮಿಂಚುತ್ತಲೇ ಇತ್ತು.

*ಮನೆಯ ಬಳಿ ಬಹಳ ಕಸವನ್ನು ಗುಪ್ಪೆಹಾಕಿದ್ದಕ್ಕಾಗಿ ಶೇಕ್ಸಪಿಯರನ ತಂದೆಗೆ ದಂಡಹಾಕಲಾಗಿತ್ತು.*

# 'ಬೆಕ್ಕಿನ ನಿದ್ರೆ'ಯ ರಹಸ್ಯ



• ಶ್ರೀಲಕ್ಷ್ಮಿ

ಮೈಮುರಿದು ದುಡಿದು, ದಣಿದು, ಒಂದಿಷ್ಟು ಉಂಡು ಮಲಗುವ ಮನುಷ್ಯನಿಗೆ ನಿದ್ರೆ ತಂತಾನೇ ಆವರಿಸುತ್ತದೆ. ಆದರೆ ಆಧುನಿಕ ಜಗತ್ತಿನ ಜಂಜಾಟದಲ್ಲಿ ನಿತ್ಯ ಆತಂಕ, ಉದ್ವೇಗಗಳಿಂದಾಗಿ ನಿದ್ರಾಹೀನತೆಯಿಂದ ಬಳಲುವವರ ಸಂಖ್ಯೆ ಹೆಚ್ಚುತ್ತಿದೆ. ಚಿಂತಿಸಬೇಡಿ. ಅಂಥವರಿಗೆ 'ಸ್ವಾಭಾವಿಕ' ಸುಖನಿದ್ರೆ ತರುವಂತಹ ಮಾತ್ರೆಗಳನ್ನು ವಿಜ್ಞಾನಿಗಳು ಇದೀಗ ಸಿದ್ಧಪಡಿಸುತ್ತಿದ್ದಾರೆ. ಈಗಿರುವ ನಿದ್ರಾಮಾತ್ರೆಗಳಿಂತ ಇವು ಹೆಚ್ಚು ಪರಿಣಾಮಕಾರಿ ಹಾಗೂ ಸುರಕ್ಷಿತ ಎಂಬುದು ಅವರ ಅಭಿಮತ.

ಈ ಔಷಧಿ ಕಂಡುಹಿಡಿಯಲು ಹಾರ್ವರ್ಡ್ ವಿಜ್ಞಾನಿಗಳಿಗೆ ಆರು ಬೆಕ್ಕುಗಳು ನೆರವಾಗಿವೆ. 'ಬೆಕ್ಕಿನ ನಿದ್ರೆ' ಎಂಬ ಆಡುನುಡಿ ಕೇಳಿದ್ದೀರಲ್ಲವೆ? ಆಗಾಗ ಹೀಗೆ ಮಲಗಿ ಚಕ್ಕನೇ ಎದ್ದುಬಿಡುವ ಬೆಕ್ಕುಗಳ ನಿದ್ರೆ ಬಲು ವಿಶಿಷ್ಟ. ಹಾಗಾದರೆ ಬೆಕ್ಕುಗಳ ಈ ನಿದ್ರೆಗೆ ಕಾರಣವೇನು ಎಂದು ಯೋಚಿಸಿದ ವಿಜ್ಞಾನಿಗಳು ಅವುಗಳ ಮಿದುಳಿಗೆ ಕೈ ಹಾಕಿದರು- ಎಂದರೆ, ಆ ಆರು ಬೆಕ್ಕುಗಳ ಮಿದುಳಿನಲ್ಲಿ ಎಲೆಕ್ಟ್ರೋಡ್‌ಗಳನ್ನು ಹಾಯಿಸಿ ಟ್ಯೂಬ್‌ಗಳನ್ನು ಸೇರಿಸಿದರು. ಮಿದುಳ ಸಾರವನ್ನು ಹೊರ ತೆಗೆದು ವಿಶ್ಲೇಷಿಸಿದರು. ಇದರೊಂದಿಗೆ ಮಿದುಳ ಅಲೆಗಳ ಏರಿಳಿತಗಳನ್ನು ಎಲೆಕ್ಟ್ರೋ ಎನ್‌ಸೆಫಲೊಗ್ರಾಫ್ ಮುಖಾಂತರ ಅಚ್ಚುಕಟ್ಟಾಗಿ ದಾಖಲಿಸಿದರು. ಇಷ್ಟೆಲ್ಲವನ್ನೂ ಆರೇ ಗಂಟೆಗಳಲ್ಲಿ ಮಾಡಿ ಮುಗಿಸಿದರು. ಆದರೆ ಆರು ಗಂಟೆಗಳ ಕಾಲ ಬೆಕ್ಕು ನಿದ್ರೆಯಿಲ್ಲದೆ ಇರಬಲ್ಲದೆ? ವಿಜ್ಞಾನಿಗಳು ಅವುಗಳೊಂದಿಗೆ ಚಿನ್ನಾಟವಾಡುತ್ತ, ಚೆಲ್ಲಾಟವಾಡುತ್ತ, ಜಾಗರಣೆ ಮಾಡಿಸಿದರು. 'ವಿಜ್ಞಾನಿಗೆ ಚಿನ್ನಾಟ, ಬೆಕ್ಕಿಗೆ ಪ್ರಾಣ ಸಂಕಟ'ವಾಯಿತೇನೋ ಗೊತ್ತಿಲ್ಲ. ಆದರೆ ವಿಜ್ಞಾನಿಗಳಿಗೆ ಮಾತ್ರ ಬೆಕ್ಕಿನ ನಿದ್ರೆಯ ರಹಸ್ಯ ತಿಳಿದುಬಿಟ್ಟಿತು. ಈ ಪ್ರಯೋಗದಿಂದ

ವಿಜ್ಞಾನಿಗಳಿಗೆ ತಿಳಿದುಬಂದದ್ದಿಷ್ಟು:

ಮಿದುಳಿನಲ್ಲಿರುವ ಅಡೆನೋಸಿನ್ ಎಂಬ ರಾಸಾಯನಿಕವೇ ನಿದ್ರೆಗೆ ಕಾರಣ. ಈ ರಾಸಾಯನಿಕದ ಮಟ್ಟ ನಿಗದಿಗಿಂತ ತುಸು ಕಡಿಮೆಯಾಯಿತೋ ಥಟ್ಟನೇ ಎಚ್ಚರವಾಗಿಬಿಡುತ್ತದೆ. ಬೆಕ್ಕುಗಳು ದಣಿದಂತೆಲ್ಲ ಮಿದುಳಿನಲ್ಲಿ ಅಡೆನೋಸಿನ್ ಮಟ್ಟ ಹೆಚ್ಚುತ್ತ ಹೋಗಿ ಅವು ಮಲಗಿದೊಡನೆ ಅದರ ಮಟ್ಟ ಇಳಿಯುತ್ತ ಸಾಗುತ್ತದೆ ಎಂಬುದನ್ನು ವಿಜ್ಞಾನಿಗಳು ಕಂಡುಕೊಂಡರು. ಈ ಕ್ರಿಯೆ ಮನುಷ್ಯರಲ್ಲೂ ಇದೆ. ಹೊಟ್ಟೆ ತುಂಬ ಉಂಡೊಡನೆ ಮಿದುಳಿನಲ್ಲಿ ಅಡೆನೋಸಿನ್ ಮಟ್ಟ ಹೆಚ್ಚುತ್ತದೆ. ಕಣ್ಣು ಮುಚ್ಚ ತೊಡಗುತ್ತವೆ. ಆದರೇನು, ಬೆಕ್ಕುಗಳಂತೆ ನಾವು ಚಟಹೀನರಲ್ಲವಲ್ಲ? ನಮಗೆ ಆಗಾಗ ಕಾಫಿ, ಚಹ ಬೇಕೇಬೇಕು. ಸಿಗರೇಟು ಸೇದಬೇಕು, ತಂಬಾಕು ಹಾಕಿಕೊಳ್ಳಬೇಕು ಇಂಥ ಚೋದಕಗಳೆಲ್ಲ ಸೇರಿ ನಮ್ಮ ಮಿದುಳಿನಲ್ಲಿ ಅಡೆನೋಸಿನ್ ಮಟ್ಟ ಹೆಚ್ಚಿಸಲು ಬಿಡುವುದೇ ಇಲ್ಲ. ಈ ರಾಸಾಯನಿಕದ ಪ್ರಭಾವ ಮಿದುಳಿನ ಮೇಲಾಗದಂತೆ ಚಹ, ಕಾಫಿಗಳಂತಹ ವಸ್ತುಗಳು ದುಷ್ಪರಿಣಾಮ ಬೀರುತ್ತವೆ. ಹೀಗಾಗಿಯೇ ನಿದ್ರಾಹೀನತೆಯ ರೋಗ ಕಾಡುತ್ತದೆ.

ಅಡೆನೋಸಿನ್ ಪರಿಣಾಮವನ್ನು ಖಚಿತ ಪಡಿಸಲು ವಿಜ್ಞಾನಿಗಳು ಇನ್ನೊಂದು ಪ್ರಯೋಗ ಕೈಗೊಂಡರು. ಚೆನ್ನಾಗಿ ಮಿದುಳಿಗೆ ಅಡೆನೋಸಿನ್ ಮಟ್ಟ ಹೆಚ್ಚಿಸುವ ಗುಣವುಳ್ಳ ರಾಸಾಯನಿಕವೊಂದನ್ನು ಚುಚ್ಚಿದರು. ಕೆಲಕ್ಷಣದಲ್ಲೆ ಬೆಕ್ಕಿಗೆ ಗಾಢನಿದ್ರೆ!

ಈ ಪ್ರಯೋಗದ ಫಲಿತಾಂಶದಿಂದ ಉತ್ಸಾಹಿತರಾಗಿರುವ ವಿಜ್ಞಾನಿಗಳು ಮನುಷ್ಯರಿಗೆ ಸ್ವಾಭಾವಿಕ ಸುಖನಿದ್ರೆ ತರುವ ಮಾತ್ರೆಗಳ ತಯಾರಿಕೆಗೆ ಸಿದ್ಧತೆ ನಡೆಸಿದ್ದಾರೆ. ❄

## ಶುಲ್ಕದ ಲೆಕ್ಕ

ವಾಹನಗಳಿಗೆ ಪ್ರಪ್ರಥಮವಾಗಿ ಮೀಟರ್ ಅಳವಡಿಸಿದವರು ಗ್ರೀಕರು. ಪ್ರಾಚೀನ ಕಾಲದಲ್ಲಿ ಸಾಮಾನ್ಯ ಜನರು ಉಪಯೋಗಿಸುತ್ತಿದ್ದ ರಥಗಳ ಆಕೃತಿಗೆ 'ಹೋಡೋ ಮೀಟರ್' ಎಂಬ ಉಪಕರಣ ಜೋಡಿಸಲಾಗುತ್ತಿತ್ತು. ಮತ್ತೊಂದು ಬಗೆಯ ಮೀಟರ್ ಹೇಗಿತ್ತೆಂದರೆ ಕಲ್ಲು ಹರಳುಗಳಿದ್ದ ಡಯಲ್ ಒಂದನ್ನು ತಿರುಗಿಸುತ್ತಾ ಮಾರ್ಗ ಕ್ರಮಿಸುವಾಗ ನಿರ್ದಿಷ್ಟ ಅಂತರಗಳಲ್ಲಿ ಒಂದೊಂದು ಹರಳು ಕೆಳಗಿನ ಪಾತ್ರೆಯೊಂದಕ್ಕೆ ಬೀಳುತ್ತಿತ್ತು. ಬಿದ್ದ ಹರಳುಗಳ ಲೆಕ್ಕ ಮಾಡಿ, ಅದರಿಂದ ಕ್ರಮಿಸಿದ ದೂರವನ್ನು ಅಳೆದು, ತಕ್ಕ ಶುಲ್ಕ ವಸೂಲು ತೆಗೆದುಕೊಳ್ಳಲಾಗುತ್ತಿತ್ತು.

✸ ಟಿ.ಎಸ್. ಲಲಿತ

# ಕಲೆ, ಜೀವನ ಮತ್ತು ನಾನು

ಚಾರ್ಲಿಚಾಪ್ಲಿನ್

"ಚಿತ್ರಗಳಲ್ಲಿ ಅಭಿನಯಿಸುವ ಸಾಮಗ್ರಿಗಳು ನಿಮಗೆ ಎಲ್ಲಿಂದ ದೊರೆಯುತ್ತವೆ? ವಿಚಾರಗಳು ಹೇಗೆ ಹೊಳೆಯುತ್ತವೆ?" ಎಂದು ಅನೇಕರು ನನ್ನನ್ನು ಪ್ರಶ್ನಿಸಿದ್ದುಂಟು. ಅನೇಕ ವರ್ಷಗಳ ವಿಚಾರ ಮಥನದಿಂದ ಯಾವುದೇ ಒಂದು ವಿಷಯದ ಬಗ್ಗೆ ಮನುಷ್ಯನಿಗೆ ಪ್ರಬಲವಾದ ಆಸಕ್ತಿಯಿದ್ದರೆ, ಆಗ ಅವನು ಅದಕ್ಕೆ ಸಂಬಂಧಿಸಿದ ತನ್ನ ಕಲ್ಪನೆಗೆ ಇಂಬು ಕೊಟ್ಟು ಪ್ರೋತ್ಸಾಹಿಸುವ ಘಟನೆಗಳನ್ನು ಹುಡುಕುತ್ತಿರುತ್ತಾನೆ. ಎಂಬ ನಿರ್ಣಯಕ್ಕೆ ಬಂದಿದ್ದೇನೆ.

ವಿರೋಧ ಮತ್ತು ದುಃಖ ಇವೆರಡೂ ಜೀವನದಲ್ಲಿ ಹಾಸುಹೊಕ್ಕಾಗಿವೆ ಎಂಬುದನ್ನು ತಿಳಿಯಲು ನಾನು ಪುಸ್ತಕಗಳನ್ನು ಓದಬೇಕಾಗಲಿಲ್ಲ. ನಿಜವಾಗಿಯೆಂದರೆ ನನ್ನ ಹಾಸ್ಯ ಇದನ್ನೇ ಅವಲಂಬಿಸಿದೆ. ಜನರನ್ನು ತೊಂದರೆಗೆ ಒಳಪಡಿಸುವುದು, ಪುನಃ ಅದನ್ನು ಪರಿಹರಿಸುವುದು ಇವೆರಡೂ ನಾನು ಹಾಸ್ಯವನ್ನು ಸೃಜಿಸುವ ಉಪಾಯಗಳು.

ಪ್ರೇರಣೆ ಪಡೆಯಲು ನನಗೆ ಕುಡಿತದ ಅವಶ್ಯಕತೆ ಏನಿರಲಿಲ್ಲ. ಕೆಲಸ ಮಾಡುವಾಗ ಸ್ವಲ್ಪ ಪ್ರಮಾಣದ ಅಮಲು ಕೂಡ ಬುದ್ಧಿಯ ಕುಶಾಗ್ರತೆಯ ಮೇಲೆ ಕೆಟ್ಟ ಪರಿಣಾಮ ಬೀರಬಲ್ಲದು.

ಫ್ರಾಯ್ಡ್ ಹೇಳಿದಹಾಗೆ ಲೈಂಗಿಕ ಆಸಕ್ತಿ ಮನುಷ್ಯನ ಚಾರಿತ್ರ್ಯದ ಮೇಲೆ ಹೆಚ್ಚು ಪ್ರಭಾವ ಬೀರುತ್ತದೆ ಎಂಬುದರ ಮೇಲೆ ನನಗೆ ನಂಬಿಕೆಯಿಲ್ಲ. ಬಡತನ, ಚಳಿ, ಹಸಿವು, ನಾಚಿಕೆ ಇವುಗಳು ಕೂಡ ಮನುಷ್ಯನ ಮನಸ್ಸಿನ ಮೇಲೆ ಹೆಚ್ಚು ಪ್ರಭಾವವನ್ನು ಬೀರುತ್ತವೆ.

ಚಿತ್ರಗಳಲ್ಲಿ ಮಕ್ಕಳು ಮತ್ತು ನಾಯಿ ಚೆನ್ನಾಗಿ ಅಭಿನಯಿಸುತ್ತವೆಯೆಂದು ಹೇಳಲಾಗುತ್ತದೆ. ನಿಜವೆ. ಒಂದು ವರ್ಷದ ಮಗುವಿಗೆ ಸೋಪನ್ನು ಕೊಟ್ಟು, ಟಬ್‌ನೊಳಗೆ ಕೂರಿಸಿ, ಅನಂತರ ಅದನ್ನು ಏಳಲು ಹೇಳಿದಾಗ ಮಗು ನಮ್ಮನ್ನು ಎಷ್ಟರಮಟ್ಟಿಗೆ ನಗಿಸಬಲ್ಲದೆಂಬುದು ನನಗೆ ಚೆನ್ನಾಗಿ ಗೊತ್ತು. ಎಲ್ಲ ಮಕ್ಕಳಲ್ಲೂ ಯಾವುದಾದರೊಂದು ಪ್ರತಿಭೆ ಇದ್ದೇ ಇರುತ್ತದೆ. ಆದರೆ ಅದನ್ನು ಪ್ರಕಟಿಸುವ ರೀತಿ ತಿಳಿದಿರಬೇಕಷ್ಟೆ.

ನನ್ನ ಔದಾಸೀನ್ಯ ಮತ್ತು ಒಂಟಿತನದ ಬಗ್ಗೆ ಅನೇಕ ಊಹಾಪೋಹಗಳು ನಡೆದಿವೆ. ವಾಸ್ತವವಾಗಿ ನನಗೆ ಎಂದೂ ಸ್ನೇಹಿತರ

ಸಂಗ್ರಹ:
★ ಕೆ. ಶಾಂತಾಮಣಿ

ಅಗತ್ಯ ಬೀಳಲಿಲ್ಲ. ಒಂದು ರೀತಿಯಲ್ಲಿ ಸ್ನೇಹಿತರು ಸಂಗೀತವಿದ್ದಂತೆ. ಬೇಕಾದಾಗ ಮಾತ್ರ ಬೇಕೆನಿಸುತ್ತದೆ. ಅವಶ್ಯಕತೆ ಇರುವ ಸ್ನೇಹಿತನಿಗೆ ಧನಸಹಾಯ ಮಾಡಬಹುದು. ಆದರೆ ಅವನಿಗಾಗಿ ಸಮಯ ಖರ್ಚು ಮಾಡುವುದು ಸುಲಭದ ಮಾತಲ್ಲ. ನಾನು ಪ್ರಸಿದ್ಧಿಯ ಉತ್ತುಂಗದಲ್ಲಿದ್ದಾಗ ನನ್ನನ್ನು ಅನೇಕ ಜನ ಸ್ನೇಹಿತರು, ನೆಂಟರು, ಪರಿಚಿತರು ಮುತ್ತಿಕೊಂಡರು. ಆದರೆ ನಾನು ಎಷ್ಟು ಬಹಿರ್ಮುಖಿಯೋ ಅಷ್ಟೇ ಅಂತರ್ಮುಖಿ. ಅವರಿಂದ ತಪ್ಪಿಸಿಕೊಳ್ಳಲು ನಾನು ಬಹಳ ಪ್ರಯತ್ನ ಪಡಬೇಕಾಗುತ್ತಿತ್ತು.

ಬಡತನ ಆಕರ್ಷಕವಾಗಿ ಕಾಣುವಹಾಗೆ ಮಾಡಿತೋರಿಸುವುದು ಅಷ್ಟು ಸುಲಭವಲ್ಲ. ಇದುವರೆಗೂ ಬಡತನವನ್ನು ಬಯಸುವ ಯಾವ ಮನುಷ್ಯನನ್ನೂ ನಾನು ನೋಡಿಲ್ಲ. ನನಗೇ ಬಡತನ ಆಕರ್ಷಕವಾಗಿ ಅಥವಾ ಸಂತೋಷಪ್ರದವಾಗಿ ಕಂಡಿಲ್ಲ. ಇದರಿಂದಾಗಿ ನಾನು ಬೆಲೆಬಾಳುವ ವಸ್ತುವನ್ನು ತಪ್ಪಾಗಿ ಕಂಡೆ. ಶ್ರೀಮಂತರ ಒಳ್ಳೆತನಕ್ಕೆ ಹೆಚ್ಚಿನ ಬೆಲೆ ಕೊಟ್ಟೆ. ಹಣ ನನಗೆ ಪ್ರಪಂಚವನ್ನು ಸರಿಯಾದ ದೃಷ್ಟಿಯಲ್ಲಿ ನೋಡುವುದನ್ನು ಕಲಿಸಿತು. ಶ್ರೀಮಂತರಲ್ಲಿ ಎಲ್ಲರ ಹಾಗೆ ಕೊರತೆಗಳು ಇರುವುದನ್ನು ಗಮನಿಸಿದೆ.

ನಾನೇನೂ ದೇಶಭಕ್ತನಲ್ಲ. ನನ್ನಲ್ಲಿ ಆ ತರಹದ ಭಾವನೆಯೂ ಇಲ್ಲ. ಎಂಟು ಲಕ್ಷ ಯಹೂದ್ಯರು ಸತ್ತರೂ ದೇಶಭಕ್ತ ತಾನು ಶ್ರೇಷ್ಠನೆಂದು ಹೇಳಿಕೊಳ್ಳುತ್ತಾನೆ. ಇದು ಯಾವುದೇ ಒಂದು ದೇಶಕ್ಕೆ ಅನ್ವಯಿಸುವುದಿಲ್ಲ. ಎಲ್ಲ ಕಡೆ ಈ ತರಹದ ಘಟನೆಗಳು ನಡೆದಿವೆ. ಯಾವುದೇ ಒಂದು ರಾಜನೈತಿಕ ಮನೋರಥ ಪೂರ್ಣಗೊಳ್ಳಲು ತ್ಯಾಗ ಮಾಡಬೇಕೆಂದಾದರೆ ಹಾಗೆ ಮಾಡಲು ನಾನು ಸಿದ್ಧನಿಲ್ಲ ಅಥವಾ ಯಾವುದೇ ಒಬ್ಬ ರಾಷ್ಟ್ರಪತಿ, ಪ್ರಧಾನ ಮಂತ್ರಿಗಾಗಿ, ದಬ್ಬಾಳಿಕೆಗಾಗಿ ಪ್ರಾಣ ಕಳೆದುಕೊಳ್ಳಲು ನಾನು ಸಿದ್ಧನಿಲ್ಲ.

## ಕೊನೆ ಸೀನು

ಖ್ಯಾತ ಸಿನೇಮಾ ನಿರ್ದೇಶಕರು ನಟನಟಿಯರನ್ನು ಬೆಟ್ಟದ ಮೇಲೆ ಕರೆದುಕೊಂಡು ಹೋಗಿ, "ನೋಡಿದಿರಾ, ಈ ಕಂದರದಲ್ಲಿ ನೀವು ಹಾರಬೇಕಾಗಿರೋದು," ಎಂದು ನಟನಿಗೆ ತೋರಿಸಿದರು.

"ಅಯ್ಯೊಯ್ಯೋ, ಇದರಲ್ಲಿ ನಾನು ಬಿದ್ದರೆ ನನ್ನ ಪ್ರಾಣ ಕಳಕೊಳ್ಳಬಹುದು, ನಂತರ ಇವರ (ನಟಿ) ಕತೆ ಏನು ?" ಎಂದು ನಟ ಪ್ರಶ್ನಿಸಿದ.

ನಿರ್ದೇಶಕರು ಅಷ್ಟೇ ಶಾಂತರಾಗಿ "ಅದಕ್ಕೇನೂ ಚಿಂತಿಸಬೇಕಾಗಿಲ್ಲ. ಚಿತ್ರದ ಕಡೇ ಸೀನು ಇದು, ನಾನೇ ಅವಳನ್ನು ಮುಂದೆ ನೋಡಿಕೊಳ್ಳುತ್ತೇನೆ, ಚಿಂತಿಸಬೇಡ" ಅಂದರು.

★ ಎಂ. ಶಾರದಾ ನಾಗಭೂಷಣ

# ಪಾದಯಾತ್ರಿಕ ಕಂಡ ಭಾರತ



 ಪುಸ್ತಕ ವಿಭಾಗ 

ಲೇಖಕರು: ಕೆ.ಸಿ. ಲಕ್ಷ್ಮೀನರಸಿಂಹಯ್ಯ

ಭಾಗ-೧

## ಪಾದಯಾತ್ರಿಕ ಕಂಡ ಭಾರತ

(ಹಿಂದಿನ ಸಂಚಿಕೆಯಿಂದ)

-೧೬-

ಛತ್ರಪುರ ಬರ್ಹಾಂಪುರ ಓರಿಸ್ಸಾದ ಕೊನೆಯ ಪಟ್ಟಣಗಳು. ಗಂಜಾಂನಿಂದ ಹೊರಟವನು ಋಷ್ಯಮೂಲ ನದಿ ದಾಟಿ ಛತ್ರಪುರಕ್ಕೆ ಬಂದವನು ನೇರವಾಗಿ ಗೌರ್ನಮೆಂಟ್ ಸೈನ್ಸ್ ಕಾಲೇಜಿಗೆ ಹೋಗಿ ಪ್ರಿನ್ಸಿಪಾಲರನ್ನು ಭೇಟಿ ಮಾಡಿದೆ. ಪ್ರಿನ್ಸಿಪಾಲರು ಶ್ರೀ ವೆಂಕಟೇಶ್ವರ ಲಾಡ್ಜಿಂಗ್‌ನಲ್ಲಿ ವಸತಿ ಏರ್ಪಡಿಸಿ ಸಾಯಂಕಾಲ ೪ ಗಂಟೆಗೆ ಕಾರ್ಯಕ್ರಮ ಏರ್ಪಡಿಸುವುದಾಗಿ ತಿಳಿಸಿದರು.

ಸಾಯಂಕಾಲ ಪ್ರಿನ್ಸಿಪಾಲರ ಅಧ್ಯಕ್ಷತೆಯಲ್ಲಿ ಸೊಗಸಾದ ಕಾರ್ಯಕ್ರಮ ನಡೆಯಿತು. ಎಲ್ಲ ಅಧ್ಯಾಪಕರೂ ಹಾಜರಿದ್ದು ಪ್ರೋತ್ಸಾಹಿಸಿದರು. ಕನ್ನಡ ಜಾನಪದ ಗೀತೆಗಳನ್ನು ಹಾಡಿಸಿ ಸಂತೋಷಪಟ್ಟರು. ಕಾರ್ಯಕ್ರಮದ ಕೊನೆಯಲ್ಲಿ ಮಾಮೂಲಿನಂತೆ ವಿದ್ಯಾರ್ಥಿಗಳಿಗೆ ಪ್ರಶ್ನೆಗಳನ್ನು ಕೇಳಲು ಅವಕಾಶ ಕೊಟ್ಟೆ. ವಿದ್ಯಾರ್ಥಿ ಸ್ನೇಹಿತರ ಎರಡು ಪ್ರಶ್ನೆಗಳು ಹೀಗಿದ್ದುವು- (೧) ಸ್ವಾಮಿ, ಕಾಲೇಜುಗಳಲ್ಲಿನ ಚುನಾವಣೆ ಬಗ್ಗೆ ನಿಮ್ಮ ಸ್ಪಷ್ಟ ಅಭಿಪ್ರಾಯ ವೇನು ? (೨) ಸ್ವಾಮಿ, ನೀವು ಕೇವಲ ಮಹಾತ್ಮ ಗಾಂಧೀಜಿ - ಸ್ವಾಮಿ ವಿವೇಕಾನಂದರ ಬಗ್ಗೆ ಹೇಳುತ್ತೀರಿ. ಡಾ. ಅಂಬೇಡ್ಕರ ಅವರ ಬಗ್ಗೆ ಯಾಕೆ ಹೇಳುವುದಿಲ್ಲ ?

ಮೊದಲನೆ ಸ್ನೇಹಿತನ ಪ್ರಶ್ನೆ ನನ್ನ ಪಾದಯಾತ್ರೆಯಲ್ಲಿ ಬಂದ ಅನುಭವದ ವಿಷಯವೇ ಆಗಿದ್ದು, ಓರಿಸ್ಸಾದಲ್ಲಿಯೇ ನಡೆದ ಘಟನೆಯನ್ನೇ ಹೇಳಿ ಸುಲಭವಾಗಿ ವಿವರಿಸಿದೆ.....ಪಿಪಿಲಿಯ ಎನ್.ಎಸ್.ಸಿ. ವಿಶ್ರಾಂತಿ ಗೃಹದಲ್ಲಿ ತಂಗಿದ್ದಾಗ ಅಲ್ಲಿನ ಕಾಲೇಜು ಪ್ರಿನ್ಸಿಪಾಲರನ್ನು ಫೋನ್‌ನಲ್ಲಿ ಸಂಪರ್ಕಿಸಿದೆ. ಕಾರ್ಯಕ್ರಮ ಏರ್ಪಡಿಸುವುದಾಗಿಯೂ, ಸಾಯಂಕಾಲ ೪ ಗಂಟೆಗೆ ಸರಿಯಾಗಿ ಬರಬೇಕೆಂತಲೂ ತಿಳಿಸಿದರು. ಸಮಯಕ್ಕೆ ಸರಿಯಾಗಿ ಕಾಲೇಜು ಹತ್ತಿರ ಹೋದಾಗ ನೋಡಿದ ದೃಶ್ಯ ಅಸಹನೀಯ. ಒಂದು ಕಡೆ ಉಪಾಧ್ಯಾಯರ ಗುಂಪು-ಇನ್ನೊಂದು ಕಡೆ ವಿದ್ಯಾರ್ಥಿಗಳದ್ದು. ಆ ಕೂಗಾಟ ಕಿರಿಚಾಟ, ಧಿಕ್ಕಾರಗಳು ಬೇಸರ ತರಿಸುವಂತಹವು. ಕಾಲೇಜು ವಿದ್ಯಾರ್ಥಿ ಸಂಘದ ಚುನಾವಣಾ ವೈಖರಿ. ಆಫೀಸು ರೂಮಿನಲ್ಲಿ ಒಬ್ಬರೇ ಅಸಹಾಯಕರಾಗಿ ತಲೆ ಮೇಲೆ ಕೈಹೊತ್ತು ಕುಳಿತಿದ್ದ ಪ್ರಿನ್ಸಿಪಾಲರು ನನ್ನ ಕ್ಷಮೆ ಕೋರಿದರು. ಕಾಲೆಳೆಯುತ್ತ ಒಂದೂವರೆ ಕಿಲೋಮೀಟರ್ ವಾಪಸ್ಸು ಬಂದೆ. ಈ ಬಗ್ಗೆ ನನ್ನ ಸಲಹೆ ಹೀಗಿತ್ತು: 'ಸ್ನೇಹಿತರೇ, ಈ ರೀತಿಯ ಕಾಲೇಜು ಚುನಾವಣೆಗಳಿಂದ ಕೇವಲ ಕೆಲವೇ ವಿದ್ಯಾರ್ಥಿಗಳ ಬಯಕೆಗಾಗಿ ಬಹಳಷ್ಟು ವಿದ್ಯಾರ್ಥಿಗಳ ಜೀವನ ಹಾಳು. ಇದರಲ್ಲಿ ರಾಜಕೀಯವೂ ಬೆರೆತಿರುತ್ತದೆ. ರಾಜಕೀಯ ಮುಖಂಡರು ತಮ್ಮ ಬೇಳೆ ಬೇಯಿಸಿಕೊಳ್ಳಲು ಮೂಗು ತೂರಿಸಿ ಗುಂಪುಗಾರಿಕೆಯನ್ನು ಬೆಳೆಸುತ್ತಾರೆ. ನೀವೆಲ್ಲರೂ ಒಟ್ಟಾಗಿ ಕಲೆತು ಒಮ್ಮತದಿಂದ ಸರಳ ಸುಲಭ ರೀತಿಯಲ್ಲಿ ವಿದ್ಯಾರ್ಥಿ ಮುಖಂಡರನ್ನು ಆರಿಸುವುದು ಉತ್ತಮವಾದ ಮಾರ್ಗ. ಇದು ಮಹಾತ್ಮಾ ಗಾಂಧೀಜಿ, ಲೋಕನಾಯಕ ಜಯಪ್ರಕಾಶರು ತೋರಿಸಿದ ಮಾರ್ಗವೂ ಆಗಿರುತ್ತದೆ."



# ಪುಸ್ತಕ ವಿಭಾಗ

ಇನ್ನು ಎರಡನೆಯ ವಿದ್ಯಾರ್ಥಿ ಕೇಳಿದ ಪ್ರಶ್ನೆಯಂತೂ ನನಗೆ ಆಶ್ಚರ್ಯ ಉಂಟು ಮಾಡಿತು. ಬರ್ಧ್ವಾಂಪುರ ಯೂನಿವರ್ಸಿಟಿಯ ವಿದ್ಯಾರ್ಥಿಯೊಬ್ಬನೂ ಇದೇ ಪ್ರಶ್ನೆ ಕೇಳಿದ್ದ. ನನ್ನ ಎರಡೂ ಕಡೆಯ ಉತ್ತರ ಒಂದೇ ತೆರನಾಗಿದ್ದುವು. "ಸ್ನೇಹಿತರೇ, ಮಹಾತ್ಮಾ ಗಾಂಧೀಜಿ ಹಾಗೂ ಸ್ವಾಮಿ ವಿವೇಕಾನಂದರಂತೆಯೇ ನನಗೆ ಭಾರತ ರತ್ನ ಡಾ. ಬಾಬಾಸಾಹೇಬ ಅಂಬೇಡ್ಕರರೂ ಅತ್ಯಂತ ಗೌರವಾನ್ವಿತ ವ್ಯಕ್ತಿಗಳಾಗಿದ್ದಾರೆ. ಭಾರತದ ಎಲ್ಲ ಮಹನೀಯರ ವಿಷಯುಗಳನ್ನು ಹೇಳುತ್ತ ಹೋಗಲು ಸಾಧ್ಯವಿಲ್ಲ. ಅವರಲ್ಲಿ ಒಬ್ಬರನ್ನು ಆರಿಸಿಕೊಂಡಿದ್ದೇನೆ. ಅಷ್ಟೆ. ನೀವು ನಿಮ್ಮ ಐಚ್ಛಿಕ ವಿಷಯಗಳನ್ನು ಕಲೆ, ವಿಜ್ಞಾನ ಈ ರೀತಿ ಆರಿಸಿಕೊಂಡು ಅಭ್ಯಾಸ ಮಾಡುವ ಹಾಗೆ.

ಕಾರ್ಯಕ್ರಮ ಮುಗಿಯುವ ಹೊತ್ತಿಗೆ ೬ ಗಂಟೆಯಾಗಿ ಕತ್ತಲಾವರಿಸಿತು. ಅಲ್ಲಿಂದ ಲಾಡ್ಜ್ ಒಂದೂವರೆ ಕಿಲೋಮೀಟರ್ ಕೆಲವು ವಿದ್ಯಾರ್ಥಿಗಳು, ಒಂದಿಬ್ಬರು ಉಪನ್ಯಾಸಕರೂ ನನ್ನ ಜೊತೆ ಸ್ವಲ್ಪ ದೂರಬಂದು ಹಾರ್ದಿಕವಾಗಿ ಬೀಳ್ಕೊಟ್ಟು ತಮ್ಮ ದಾರಿ ಹಿಡಿದರು. ನನ್ನ ಲಾಡ್ಜಿಂಗ್ ಹತ್ತಿರದ ತಿರುವಿನಲ್ಲಿ ಹಿಂದಿರುಗಿ ನೋಡಿದರೆ ಕಾಲೇಜಿನ ಒಬ್ಬ ಉಪನ್ಯಾಸಕಿ ಹಿಂಬಾಲಿಸಿ ಬರುತ್ತಿದ್ದುದು ಕಾಣಿಸಿತು. ಆಶ್ಚರ್ಯ ಚಕಿತನಾಗಿ ನಿಂತುಕೊಂಡೆ. ಹತ್ತಿರ ಬಂದವರು ಆಗ್ರಹಪಡಿಸಿ ಚಹ ಕುಡಿಯುಲಿಕ್ಕೆಂದು ಪಕ್ಕದ ಹೋಟೆಲಿಗೆ ಕರೆದುಕೊಂಡುಹೋದರು. ಎದುರುಬದುರು ಆಸನಗಳಲ್ಲಿ ಕುಳಿತೆವು. ಅಲ್ಲಿಯವರೆಗೂ ತಡೆಹಿಡಿದ್ದ ಅವರ ದುಃಖದ ಕಟ್ಟೆ ಒಡೆದು ಕಣ್ಣೀರಾಗಿ ಹರಿಯಲಾರಂಭಿಸಿತು. ನನಗೆ ದಿಕ್ಕೇ ತೋಚದಂತಾಯಿತು. ಸುಮ್ಮನೆ ಕುಳಿತುಬಿಟ್ಟೆ. ಮಾಣಿ ಚಹಾ ತಂದಿಟ್ಟು ಹೋದ. ಬಹಳ ಹೊತ್ತಾದ ಮೇಲೆ ತಮ್ಮ ದುಃಖ ಶಮನ ಮಾಡಿಕೊಂಡು ಅವರು ಹೇಳಿದ್ದು- "ಬಾಬೂಜಿ, ನಾನು ಈಗಷ್ಟೆ ದುಃಖಿಸುತ್ತಿಲ್ಲ. ಬೆಳಿಗ್ಗೆ ಕಾಲೇಜಿನಲ್ಲಿ ನಿಮ್ಮನ್ನು ನೋಡಿದಾಗಿನಿಂದಲೂ ದುಃಖಿಸುತ್ತಿದ್ದೇನೆ. ನಿಮ್ಮ ರೂಪ, ಆಕಾರ-ಮಾತುಕತೆ-ಹಾವಭಾವ ಎಲ್ಲವೂ ನನ್ನ ಗತಿಸಿದ ತಂದೆಯವರದ್ದೇ ತದ್ರೂಪು. ನನ್ನನ್ನು ಬಹಳವಾಗಿ ಪ್ರೀತಿಸುತ್ತಿದ್ದ ನನ್ನ ತಂದೆಯವರು ಈಗ್ಗೆ ಐದು ತಿಂಗಳ ಹಿಂದೆ ತೀರಿಕೊಂಡರು. ಇಂದು ನಿಮ್ಮಲ್ಲಿ ಆ ನನ್ನ ಗತಿಸಿದ ಪ್ರೀತಿಯ ತಂದೆಯನ್ನು ಪ್ರತ್ಯಕ್ಷ ನೋಡಿದೆ ಅಷ್ಟೆ. ಅನ್ಯಥಾ ಭಾವಿಸಬೇಡಿ" ಎಂದು ಹೇಳುತ್ತ ತಮ್ಮ ಮನೆ ವಿಳಾಸ ಕೊಟ್ಟು ಈ ಎರಡು ಬೇಡಿಕೆಗಳನ್ನು ಮುಂದಿಟ್ಟರು.

(೧) ಮೂರನೇ ಬೆಳಿಗ್ಗೆ ಅವರ ಮನೆಯಲ್ಲಿ ಅವರ ಜೊತೆ ಉಪಾಹಾರ ಮಾಡುವುದು,

(೨) ಇನ್ನುಮೇಲೆ ನಾನು ಯಾವ ಕಾರಣದಿಂದಲೂ ನಡೆಯುಬಾರದು. ವಾಹನ ಅವಲಂಬಿಸಿ ಪಾದಯಾತ್ರೆ ಪೂರೈಸಬೇಕು. ಇದಕ್ಕೆ ತಗಲುವ ಎಲ್ಲ ಖರ್ಚನ್ನೂ ಅವರು ಭರಿಸುತ್ತಾರೆ.

ಕಾರಣಾಂತರಗಳಿಂದ ಅವರ ಆ ಎರಡೂ ಬೇಡಿಕೆಗಳನ್ನು ನಾನು ಪೂರೈಸಲಾಗಲಿಲ್ಲ. ಆದರೆ ಶ್ರೀಮತಿ ಬಿ.ಜಿ. ಸೇಠಿ ಒರಿಸ್ಸಾದ ಪ್ರೀತಿಯ ಮಗಳಾಗಿ ಎಂದೆಂದಿಗೂ ನನ್ನ ಹೃದಯುದಲ್ಲಿ ನೆಲೆಸಿದ್ದಾರೆ.

## ಪಾದಯಾತ್ರಿಕ ಕಂಡ ಭಾರತ

ಪಾದಯಾತ್ರೆ ಪೂರೈಸಿ ಊರಿಗೆ ಹಿಂದಿರುಗಿದ ಮೇಲೆ ನಾನು ಬರೆದ ಪತ್ರಕ್ಕೆ ಪ್ರತ್ಯುತ್ತರವಾಗಿ ಅವರ ಊರಿನ ಜಾತ್ರೆಗೆ ತಪ್ಪದೇ ಬರಬೇಕೆಂದು ಆಹ್ವಾನಿಸಿದ್ದಾರೆ. ನನ್ನ ಪತ್ರವನ್ನು ಕಟ್ಟುಹಾಕಿಸಿ ಮೇಜಿನ ಮೇಲಿಟ್ಟುಕೊಂಡು ದಿನವೂ ಪೂಜಿಸುತ್ತಾರಂತೆ. ಇತ್ತೀಚೆಗೆ ಅವರ ಇನ್ನೆರಡು ಪತ್ರಗಳೂ ಬಂದಿವೆ. ಅವರು ಈಗ ಹಿಂದುಳಿದ ಮಹಿಳೆಯರ ಅಭ್ಯುದಯಕ್ಕಾಗಿ ಸರ್ಕಾರದ ವತಿಯಿಂದ ಆಯ್ಕೆಯಾಗಿ ಅಧ್ಯಯನ ನಡೆಸುತ್ತಿದ್ದಾರಂತೆ.

೧೭-

ಆಂಧ್ರದ ನನ್ನ ಪಾದಯಾತ್ರೆ ಸುಸೂತ್ರ. ಭಾಷೆಯ ತೊಂದರೆಯಿಲ್ಲದೆ, ಜನಸಾಮಾನ್ಯರೊಡನೆ ನೇರವಾಗಿ ಬೆರೆತು ಅವರ ಆಚಾರ ವಿಚಾರಗಳನ್ನು ಹತ್ತಿರದಿಂದ ತಿಳಿದುಕೊಳ್ಳಲು ಅನುಕೂಲವಾಯಿತು. ಲಿಪಿ, ಭಾಷೆಗಳಲ್ಲಿ ಅಲ್ಪ ಸ್ವಲ್ಪ ವ್ಯತ್ಯಾಸ ಕಂಡುಬಂದರೂ, ಕನ್ನಡ, ತೆಲುಗು ಸೋದರ ಭಾಷೆಗಳು. ಜನ ಸಾಮಾನ್ಯರಲ್ಲಿ ಮಾತನಾಡಿ ಅವರು ಹೇಳುವುದನ್ನು ಅರ್ಥಮಾಡಿಕೊಳ್ಳುವಷ್ಟರ ಮಟ್ಟಿಗೆ ತೆಲುಗಿನಲ್ಲಿ ಜ್ಞಾನ ಹೊಂದಿದ್ದೆ. ಆಂಧ್ರಕ್ಕೆ ಕಾಲಿಟ್ಟ ಮೇಲೆ ಬಹುದಿನಗಳ ನಂತರ ನನ್ನ ಮನೆಯಂತಹುದೇ ಊಟದ ರುಚಿ ನೋಡಿ ಖುಷಿಗೊಂಡೆ.

ಕಾವಲಿ ವಿಶ್ರಾಂತಿ ಗೃಹದಿಂದ ಹೊರಟವನು ಮುಂದೆ ಎಲ್ಲಿ ಉಳಿಯಬೇಕೆಂಬ ವಿಚಾರ ಗೊತ್ತಿಲ್ಲದೆ ಪ್ರಯಾಣ ಮುಂದುವರೆಸಿ ನೀರಿನ ತೊಂದರೆಯಿಂದಾಗಿ ಬೆಳಿಗ್ಗೆ ಸ್ನಾನ ಮಾಡಿರಲಿಲ್ಲ. ಮಾರ್ಗ ಮಧ್ಯೆ ಸಣ್ಣ ಹಳ್ಳಿ ಒಂದರಲ್ಲಿ ಸ್ನಾನ-ಬಟ್ಟೆ ಮಡಿ ಮಾಡಿಕೊಂಡು ಹೊರಟೆ. ಕೋವ್ಕರ ಪಲ್ಲಿ ಒಂದು ಸಣ್ಣ ಹಳ್ಳಿ. ಚಿಕ್ಕ ಅಂಚೆ ಕಚೇರಿ ಇರುವ ವಿಷಯ ತಿಳಿದು ಅಂಚೆ ಕಾರ್ಡುಕೊಳ್ಳಲು ಹೋದೆ. ವಾಸದ ಮನೆಯಲ್ಲಿಯೇ ಅಂಚೆ ಕಚೇರಿ ಕೂಡ. ಅವರೂ ನಿವೃತ್ತ ಉಪಾಧ್ಯಾಯರೇ. ಸಂಪ್ರದಾಯಸ್ಥ ಬ್ರಾಹ್ಮಣ ಕುಟುಂಬ. ನನ್ನ ಪಾದಯಾತ್ರೆಯ ಬಗ್ಗೆ ತಿಳಿದು ಖುಷಿಪಟ್ಟರು. ಹೊರಟು ನಿಂತಾಗ, "ದಯವಿಟ್ಟು ಊಟ ಮಾಡಿಕೊಂಡು ಹೋಗಬೇಕು. ಊಟದ ಹೊತ್ತಿನಲ್ಲಿ ಯಾತ್ರಿಕರಾಗಿ ಬಂದಿದ್ದೀರಿ. ಮೇಲಾಗಿ ಬ್ರಾಹ್ಮಣರು-ಆಂಧ್ರದ ಒಬ್ಬೆ ಊಟದ ರುಚಿಯನ್ನಾದರೂ ನೋಡಿ," ಎಂಬ ಬೇಡಿಕೆ ಮುಂದಿಟ್ಟರು. ನನ್ನ ಹೆಸರಿನ ಮೇಲೆ ಮತ್ತು ಸ್ನಾನಮಾಡಿ ಹಣೆಯಲ್ಲಿ ಧರಿಸಿದ್ದ ವಿಭೂತಿ, ಅಗಲ ಕುಂಕುಮ, ತುಲಸಿ ಮಾಲೆಗಳ ಆಧಾರದ ಮೇಲೆ ಅವರು ನನ್ನನ್ನು ಬ್ರಾಹ್ಮಣ ಎಂದು ಊಹಿಸಿದ್ದಿರಬಹುದು. ಕ್ಷಣಕಾಲ ವಿಚಲಿತನಾದರೂ ಸಾವರಿಸಿಕೊಂಡು ಸತ್ಯವನ್ನೇ ನುಡಿದೆ- 'ಸ್ವಾಮಿ; ತಾವು ಊಹಿಸಿದ ಹಾಗೆ ನಾನು ಬ್ರಾಹ್ಮಣನಲ್ಲ. ನಿಮ್ಮಲ್ಲಿ ಇರುವ ರೆಡ್ಡಿ ಜನಾಂಗಕ್ಕೆ ಸೇರಿದವನು ಅಲ್ಲದೆ.....' ಎಂಬ ನನ್ನ ಮಾತನ್ನು ಅರ್ಧಕ್ಕೇ ನಿಲ್ಲಿಸಿ, ತಮ್ಮ ಅಭಿಪ್ರಾಯವೇ ಸರಿ ಎಂಬ ದೃಢ ನಿರ್ಧಾರದ ಧ್ವನಿಯಲ್ಲಿ ಹೇಳಿದರು: "ನೀವು ಸುಳ್ಳು ಹೇಳಿ ನಮ್ಮನ್ನು ವಂಚಿಸಿ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅದೇನೇ ಇರಲಿ, ದಯವಿಟ್ಟು ಊಟಮಾಡಿ ಹೋಗಿ." ಎಂದು ಪಟ್ಟು ಹಿಡಿದರು. ವಿಧಿ ಇಲ್ಲದೆ ಒಪ್ಪಿಕೊಳ್ಳಬೇಕಾ



## ಪುಸ್ತಕ ವಿಭಾಗ

ಯಿತು. ಅವರ ಸಂಪ್ರದಾಯಕ್ಕೆ ಯಾವ ವಿಧ ದಲ್ಲಿಯೂ ಭಂಗ ತರಬಾರದೆಂದು ನಿಶ್ಚಯಿಸಿ ಅವರ ಒಪ್ಪಿಗೆ ಪಡೆದೇ ಅಲಾಯಿದ ನಾನೊಬ್ಬನೆ ಎದುರು ಪಂಕ್ತಿಯಲ್ಲಿ ಊಟಕ್ಕೆ ಕುಳಿತೆ. ಅವರ ಬಲವಾದ ನಂಬಿಕೆಯನ್ನು ನಾನೇಕೆ ಹಾಳು ಮಾಡಲಿ ಎಂದು ಯೋಚಿಸಿ, ಊಟವನ್ನು ಶಾಸ್ತ್ರೀಯವಾಗಿಯೇ ಕ್ರಮವಾಗಿ-ಪರಿಶಂಚನೆ, ಚಿತ್ರಾಹುತಿ, ಅಪೋಶನ, ಶಾಂತಿ ಮಂತ್ರಗಳಿಂದ ಪ್ರಾರಂಭಿಸಿದೆ. ಯಜಮಾನರು ಪಕ್ಕದಲ್ಲಿ ಕುಳಿತಿದ್ದ ತಮ್ಮ ಹಿರಿಯ ಮಗನ ಕಿವಿಯ ಹತ್ತಿರ ಪಿಸುಗುಟ್ಟಿದ ಮಾತುಗಳನ್ನು ಸ್ಪಷ್ಟವಾಗಿ ಕೇಳಿಸಿಕೊಂಡೆ: "ನೋಡಿದೆಯ-ನೀನು ಅವರ ಜಾತಿಯ ಬಗ್ಗೆ ಅನುಮಾನ ಪಟ್ಟೆಯಲ್ಲ. ಈಗ ತಿಳಿಯಿತೇ ಅವರು ನಮಗಿಂತ ಹೆಚ್ಚು ಆಚಾರವಂತರು." ಅಂದು ಹಸಿದು ಮಾಡಿದ ಪ್ರೀತಿಭರಿತ ಆಂಧ್ರದ ಒಬ್ಬೆ ಊಟ -ಮೊದಲ ಒಬ್ಬೆ ಅನ್ನ ತುಪ್ಪ ಚಟ್ನಿ: ಎರಡನೇ ಒಬ್ಬೆ-ಅನ್ನ ಪರಪು. ಮೂರನೆಯದು ಅನ್ನ ತಿಳಿಸಾರು; ನಾಲ್ಕನೆಯದು- ಮಜ್ಜಿಗೆ ಅನ್ನ !

-೧೮-

ಮಧುರೈನಲ್ಲಿ ಆ ಸಾಯಂಕಾಲ ಸುಪ್ರಸಿದ್ಧ ಗಾಂಧಿಸ್ಮಾರಕ ಭವನ, ಮ್ಯೂಸಿಯಂಗಳಿಗೆ ಭೇಟಿ ಕೊಟ್ಟಾಗ, ಕಾಲೇಜ್ ಆಫ್ ಗಾಂಧಿಯನ್ ಥಾಟ್ ಪ್ರಿನ್ಸಿಪಾಲರಾದ ಕಂದಸ್ವಾಮಿ ಅವರ ಪರಿಚಯವಾಯಿತು. ಅಪ್ಪಟ ಗಾಂಧಿವಾದಿ. ಸರಳ ಜೀವಿ. ಪ್ರಿನ್ಸಿಪಾಲರಿಗೆ ಹೋಲಿಕೆಯೇ ಇಲ್ಲದ ಸಾದಾ ಉಡುಪು. ಅರ್ಧ ತೋಳಿನ ಜುಬ್ಬ-ದಟ್ಟಿ ಪಂಚೆ-ಮೇಲೊಂದು ಉತ್ತರೀಯ. ಸಾದು ಕಪ್ಪು ಬಣ್ಣದ ತೆಳುಶರೀರದ ಹಸನ್ಮುಖಿ. ಸಜ್ಜನಿಕೆಯ ಸಾಕಾರ ಮೂರ್ತಿ. ನೆಲದಲ್ಲಿ ಚಾಪೆಯ ಮೇಲೆ ಕುಳಿತೆ ಮಾತುಕತೆ. ನನ್ನನ್ನು ಪಕ್ಕದಲ್ಲಿ ಕೂಡಿಸಿಕೊಂಡು ಹೆಗಲ ಮೇಲೆ ಕೈಹಾಕಿಕೊಂಡೆ ಮಾತನಾಡಿಸುವಷ್ಟು ಸೋದರಿಕೆಯ ಸಲಿಗೆ. ಸಾಯಂಕಾಲ ೬ ಗಂಟೆಗೆ ಅಧ್ಯಯನ ಕೇಂದ್ರದ ೨೦-೨೫ ಜನ ವಿಚಾರವಾದಿಗಳ ಸಭೆ ಏರ್ಪಡಿಸಿ ನನ್ನನ್ನು ಪರಿಚಯಿಸಿದರು. "ಗಾಂಧಿ ವಿಚಾರವಾದ ಎಷ್ಟರ ಮಟ್ಟಿಗೆ ನಡೆಯುತ್ತಿದೆ ?" ಎಂದು ಪ್ರಶ್ನಿಸಿ ನನ್ನ ಭಾಷಣದ ವಿಷಯಕ್ಕೆ ಪೀಠಿಕೆ ಹಾಕಿದರು.

"ಸಜ್ಜನ ಬಂಧುಗಳೆ, ಯುಗ ಪ್ರವರ್ತಕ ಮಹಾತ್ಮ ಗಾಂಧೀಜಿಯವರ ಬಗ್ಗೆ ನನ್ನ ಅಭಿಪ್ರಾಯ ಹೇಳುವ ಧಾರ್ಷ್ಟ್ಯತೆ ನನ್ನಲ್ಲಿಲ್ಲ ಎಂಬ ಮಾತನ್ನು ನಮ್ರವಾಗಿ ಹೇಳಬಯಸುತ್ತೇನೆ. ಆದರೂ ನನ್ನ ಪಾದಯಾತ್ರೆಯ ಅವಧಿಯಲ್ಲಿ ನಾನು ಭೇಟಿಯಾಗಿ ವಿಚಾರ ವಿನಿಮಯ ನಡೆಸಿದ ಇಬ್ಬರು ಮಹನೀಯರ ಮಾತುಗಳನ್ನು ಯಥಾವತ್ತಾಗಿ ತಮ್ಮ ಮುಂದಿಡಲು ಬಯಸುತ್ತೇನೆ.

ಮೊದಲನೆಯವರು ಸನ್ಮಾನ್ಯ ಗಜಾನನ ಥಾಕರ. ಗಾಂಧೀಜಿ ಜನ್ಮಸ್ಥಳವಾದ ಪೋರ್ ಬಂದರಿನ ರಾಮಬಾ (ಆರ್.ಜಿ.ಟಿ) ಪದವೀಧರ ಪ್ರಶಿಕ್ಷಣ ಕಾಲೇಜಿನ ಪ್ರಿನ್ಸಿಪಾಲರು ಹಾಗೂ ಮಹಾತ್ಮಗಾಂಧಿ ಸಂಶೋಧನ ಕೇಂದ್ರದ ನಿರ್ದೇಶಕರು. ಪೋರ್ ಬಂದರು ಪ್ರವೇಶಿಸುತ್ತಿದ್ದಂತೆಯೇ ಕಾಲೇಜು. ಕಾಲೇಜು ಆವರಣದಲ್ಲಿಯೇ ಅವರ ವಾಸದ ಮನೆ. ಕಾಲೇಜಿನ ಬಾಗಿಲಲ್ಲಿಯೇ ನಿಂತಿದ್ದ ಅವರನ್ನೇ ಪ್ರಶ್ನಿಸಿದೆ "ಪ್ರಿನ್ಸಿಪಾಲರನ್ನು

ನೋಡಬೇಕಿತ್ತು- ಎಲ್ಲಿ ಸಿಕ್ಕುತ್ತಾರೆ ?" ಎಂದು. ನಗುತ್ತಲೆ ನಿಧಾನವಾಗಿ, "ಮನೆ ಯಲ್ಲಿ, ಮಾತನಾಡೋಣ ಬನ್ನಿ" ಎನ್ನುತ್ತ ಕರೆದೊಯ್ದು ಕುರ್ಚಿಯಲ್ಲಿ ಕೂಡಿಸಿ ತಾವೂ ಕುಳಿತರು. ಫೈಲನ್ನು ತಿರುವಿ ಹಾಕಿ ನೋಡುತ್ತಾ, ಉಲ್ಲಸಿತರಾಗಿ ಒಳಗಿದ್ದ ತಮ್ಮ ಪತ್ನಿಯನ್ನು ಜೋರಾಗಿ ಕೂಗಿ ಕರೆದು ಪರಿಚ ಯಿಸಿದರು. ಅದು ಅವರ ಮಾಮೂಲಿ ಉಪಾಹಾರದ ಸಮಯವಾಗಿತ್ತು. ಇಬ್ಬರಿಗೂ ತಿಂಡಿ ತರಲು ಹೇಳಿ ಮಾತಿಗಾರಂಭಿಸಿದರು. ಕಾಲೇಜು ಆವರಣ ಪ್ರವೇಶಿಸಿದಾಗಿನಿಂದಲೂ ಗಾಂಧಿ ಸಂಶೋಧನೆ ಕೇಂದ್ರದ ಬಗ್ಗೆ ತಿಳಿ ಯಲು ಕುತೂಹಲವಾಗಿದ್ದರಿಂದ ಆ ವಿಷಯ ವಾಗಿಯೇ ಮಾತು ತೆಗೆದೆ.

ಅಷ್ಟು ಲವಲವಿಕೆಯಿಂದ ಮಾತನಾಡುತ್ತಿ ದ್ದವರು ತಕ್ಷಣ ಮೌನ ತಾಳಿದರು. ಮುಖ ದಲ್ಲಿ ವಿಷಾದದ ಛಾಯೆ ಮೂಡಿತು. ಭಾರ ವಾದ ಧ್ವನಿಯಲ್ಲಿ ಪ್ರಾರಂಭಿಸಿದರು: "ಈಗ್ಗೆ ಒಂದೂವರೆ ವರ್ಷದ ಹಿಂದೆ ಕೇಂದ್ರಮಂತ್ರಿ ವರ್ಯರೊಬ್ಬರು ಇಲ್ಲಿಗೆ ಆಗಮಿಸಿದ್ದರು. ಅಪ್ಪಟ ಗಾಂಧಿ ಭಕ್ತರು ಅಂತ ಕಾಣತ್ತೆ. ಅವರು ಹೀಗೆ ಯೋಚಿಸಿರಬೇಕು- ಪಾಪಿ ಗೋಡ್ಸೆ ಗಾಂಧೀಜಿಯವರ ಭೌತಿಕ ಶರೀರಕ್ಕೆ ಗುಂಡಿಕ್ಕಿ ಕೊಂದ. ಮರಣೋತ್ತರ ಪರೀ ಕ್ಷೆಯೂ ಆಯಿತು. ಅದೆಲ್ಲ ಮುಗಿದ ಕಥೆ. ಅವರ ತತ್ವಾದರ್ಶಗಳ ಶವ ಪರೀಕ್ಷೆ ಇನ್ನೂ ಆಗಿಲ್ಲದಿರುವದು ಅದರಲ್ಲೂ ಅವರ ಜನ್ಮತಾ ಳಿದ ಈ ಪವಿತ್ರ ಭೂಮಿಯಲ್ಲಿ ತುಂಬ ಶೋಚನೀಯ." ಸರಿ. ಅವರ ಯೋಚನೆ ತಕ್ಷಣ ಕಾರ್ಯರೂಪಕ್ಕಿಳಿಯಿತು. ಈ ಸಂಶೋಧನ ಕೇಂದ್ರವನ್ನು ತೆರೆದು ತತ್ವಾದ ರ್ಶಗಳ ಶವಪರೀಕ್ಷೆಯ ಡೈರೆಕ್ಟರನ್ನಾಗಿ ನನ್ನನ್ನು ನಿಯೋಜಿಸಿದ್ದಾರೆ. ಹೆಸರಿನ ಫಲಕ ತೂಗು ಹಾಕುವ ಕೆಲಸ ಮಾತ್ರ ನಡೆದಿದೆ. ಉಳಿದೆಲ್ಲವೂ ಕೇವಲ ಕಾಗದದ ಮೇಲೆ."

ಎರಡನೆಯವರು ಶಿವಭಗವಾನ್ ಜೋಹರ. ರಾಜಸ್ತಾನದ ಜೋಧಪುರ್ ಗಾಂಧಿ ಕಾರ್ಯಾಲಯದ ಕಾರ್ಯದರ್ಶಿ. ಉತ್ತರ ಪ್ರದೇಶದ ಬಾರಾ ಬಂಕಿ ಗಾಂಧಿ ಆಶ್ರಮದಲ್ಲಿ ನಾವಿಬ್ಬರೂ ಒಂದೇ ಕೊಠಡಿ ಯಲ್ಲಿ ಉಳಿದುಕೊಂಡಿದ್ದೆವು. ರಾತ್ರಿ ಊಟ ಆದಮೇಲೆ ನನ್ನ ಪ್ರಾರ್ಥನೆಯ ಮೇರೆಗೆ ಗಾಂಧೀಜಿಯವರ ಬಗ್ಗೆ ಅವರು ವ್ಯಕ್ತಪಡಿಸಿದ ತುಸು ಕಟುವಾದರೂ ವಾಸ್ತವದ ಅಭಿಪ್ರಾಯ -"ಭಾಯಿಜಿ, ಇಂದು ಇಡೀ ಹಿಂದೂಸ್ತಾನ ದಲ್ಲಿ ಮಹಾತ್ಮಾಜಿಯವರ ೧೨೫ನೇ ಜನ್ಮ ಸಮಾರಂಭದ ಸಿದ್ಧತೆಗಳು ಭರದಿಂದ ಸಾಗಿವೆ. ಬಹಳ ಸಂತೋಷ. ಅವರು ತಮ್ಮ ಅವಧಿಗೆ ಮುಂಚೆಯೇ ಮರಣಹೊಂದಿ ಇಂದಿಗೂ ಎಂದೆಂದಿಗೂ ಜೀವಿಸಿದ್ದಾರೆ. ಇಲ್ಲ ದಿದ್ದರೆ ಹೆಜ್ಜೆ ಹೆಜ್ಜೆಗೂ, ನಿಮಿಷ ನಿಮಿಷಕ್ಕೂ ಬದುಕಿದ್ದೂ ಹೆಣವಾಗುತ್ತಿದ್ದರು. ಗಾಂಧಿ ವಿಚಾರಧಾರೆ ಇಂದಿಗೂ ಅಲ್ಪಸ್ವಲ್ಪ ಉಳಿದಿ ದ್ದರೆ ಅದು ಆ ಕಾಲದ ಕೆಲವೇ ಹಿರಿಯರಲ್ಲಿ ಮಾತ್ರ. ನವಪೀಳಿಗೆಯ ರಕ್ತನಾಳಗಳನ್ನು ಪ್ರವೇಶಿಸಿಲ್ಲ. ಅಸಲಿ ಗಾಂಧಿವಾದ ಅವರ ಜೊತೆಯಲ್ಲಿಯೇ ೩೦-೧-೪೮ರಂದೇ ಸಮಾಧಿಯಾಯಿತು. ಆದರೆ ನಕಲಿ ರೂಪವೂ ಕೂಡ ಸ್ವಾರ್ಥಿಗಳ ಕಾಲ್ಚೆಂಡಾಗಿದೆ. ಇಡೀ ಸಮಾಜವೇ ಎದುರುಬಿದ್ದರೂ ಲೆಕ್ಕಿ



## ಪುಸ್ತಕ ವಿಭಾಗ

ಸದೇ ಸ್ವಂತ ಮಗಳಂತೆ ಸಾಕಿದ ಹರಿಜನ ಬಾಲಿಕ ಲಕ್ಷ್ಮಿಯ ಪ್ರೇತಾತ್ಮ ಇಂದು ಅವರನ್ನೇ ಪ್ರಶ್ನಿಸುತ್ತಿದೆ 'ಹರಿಜನ ಎಂಬ ಹೆಸರಿಟ್ಟು ಏಕೆ ಹಾಳು ಮಾಡಿದೆ' ಎಂದು. ಅವರ ದೇಶೀಯತೆಯ ಎದೆಯ ಮೇಲೆಯೇ ರಾಕ್ಷಸೀ ನೃತ್ಯ ಮಾಡುತ್ತ ಸವಾಲೆಸೆಯುತ್ತಿವೆ ಬಹುರಾಷ್ಟ್ರೀಯ ಕಂಪನಿಗಳು. ಪ್ರತಿದಿನ ಗೋಮಾತೆಯ ಟನ್ ಗಟ್ಟಲೆ ರಕ್ತದಿಂದ ಕೆಂಪಾಗುವ ಯಮುನಾ ನದಿಯ ನೀರು ಅವರ ಗೋಹತ್ಯೆ ನಿಷೇಧವನ್ನು ಕೇಕೆ ಹಾಕಿ ಅಣಕಿಸುತ್ತಿದೆ ಎಂದು ಹೇಳಿ ಧನ್ಯವಾದಗಳನ್ನರ್ಪಿಸಿ ಕುಳಿತೆ.

### ಮರೆಯಲಾದೀತೆ ?

**ಪೇಜಾವರ ಮಠದ**
**ಶ್ರೀ ವಿಶ್ವೇಶತೀರ್ಥರು**

ಜೋರಾಗಿ ಗಾಳಿ ಬೀಸಿದರೆ ತೂರಿ ಹೋಗುವಂತಹ ತೆಳುದೇಹ. ಹಣೆಯಲ್ಲಿ ಚಂದನದ ತಿಲಕ. ಕಾವಿಶಾಟಿಯ ಒಂದೇ ತುಂಡು ಪಂಚೆ. ದಟ್ಟಿಯೂ ಅದೆ, ಉತ್ತರೀಯವೂ ಅದೆ. ಅಂದು ಪೇಜಾವರ ಮಠದಲ್ಲಿ ಹಬ್ಬದ ವಾತಾವರಣ. ದೇಶದ ನಾನಾ ಕಡೆಗಳಿಂದ ಸ್ವಾಮಿಗಳು ಆಗಮಿಸಿ ಬಿಡಾರ ಮಾಡಿದ್ದಾರೆ. ಪೇಜಾವರ ಶ್ರೀಗಳು ಗಾಳಿಪಟದಂತೆ ರೂಮಿನಿಂದ ರೂಮಿಗೆ ಓಡಾಡುತ್ತಿದ್ದಾರೆ. ಯಾತಕ್ಕೋ ಕಾರ್ಯಾಲಯದ ಕಡೆ ಬಂದವರು ನನ್ನನ್ನು ನೋಡಿದವರೇ ಥಟ್ಟನೆ ಗುರುತಿಸಿದರು. ಮ್ಯಾನೇಜರರಿಗೆ ಹೇಳಿ ಕೊಠಡಿಯ ವ್ಯವಸ್ಥೆ ಮಾಡಿ ಮಧ್ಯಾಹ್ನ ಊಟಕ್ಕೆ ತಮ್ಮಲ್ಲಿಗೇ ಆಹ್ವಾನಿಸಿದರು.

ಸ್ವಾಮಿಗಳನ್ನು ಒಂದುವಾರದ ಹಿಂದೆ ಕಟೀಲು ದುರ್ಗಾ ಪರಮೇಶ್ವರಿ ಕ್ಷೇತ್ರದಲ್ಲಿ ಭೇಟಿಯಾಗಿದ್ದೆ. ಅದೇ ಅವರ ಮೊದಲ ದರ್ಶನವಾಗಿತ್ತು. ಅಂದಿನ ಒಂದು ಸಮಾರಂಭದಲ್ಲಿ ಸ್ವಾಮಿಗಳದೇ ಆಶೀರ್ವಚನ ಭಾಷಣ ಮುಖ್ಯಮಂತ್ರಿ ವೀರಪ್ಪ ಮೊಯ್ಲಿ ಅಧ್ಯಕ್ಷತೆ. ಪರಿಚಯ ಮಾಡಿಕೊಂಡು ನನ್ನ ಪಾದಯಾತ್ರೆಯ ವಿಷಯ ತಿಳಿಸಿ ಆಶೀರ್ವಾದ ಪಡೆದೆ. ಉಡುಪಿಗೆ ಬಂದಾಗ ತಮ್ಮಲ್ಲಿ ಉಳಿಯುತ್ತೇನೆಂದೂ ಬಿನ್ನವಿಸಿಕೊಂಡಿದ್ದೆ.

ಉಡುಪಿಯಲ್ಲಿ ಎರಡು ದಿನ ಉಳಿದಿದ್ದೆ. ಪೂರ್ಣ ಪ್ರಜ್ಞ ಕಾಲೇಜು, ಮಣಿಪಾಲಿನ ಶಾರದಾ ಹೈಸ್ಕೂಲುಗಳಲ್ಲಿ ಒಳ್ಳೆಯ ಕಾರ್ಯಕ್ರಮಗಳು ನಡೆದವು. ಎರಡನೇ ದಿನ ಸಾಯಂಕಾಲ ನನ್ನ ಕೊಠಡಿಯಲ್ಲಿ ಕುಳಿತು ಬರವಣಿಗೆಯಲ್ಲಿ ಮಗ್ನನಾಗಿದ್ದೆ. ಕೆಳಗಡೆ ಕಾರು ಬಂದು ನಿಂತ ಶಬ್ದ, ಜನಗಳ ಓಡಾಟದ ಶಬ್ದ ಕಿವಿಗೆ ಬಿದ್ದು ಕುತೂಹಲದಿಂದ ಇಳಿದು ಬಂದು ವಿಚಾರಿಸಲಾಗಿ ಸ್ವಾಮಿಗಳು ತುರ್ತಾಗಿ ಮೈಸೂರಿಗೆ ಹೊರಟಿರುವ ವಿಷಯ ತಿಳಿದು ಅವಕ್ಕಾದೆ. ಈ ವಿಷಯ ಮೊದಲು ನನಗೆ ಗೊತ್ತಿರಲಿಲ್ಲ. ಮೇಲೆ ಹೋಗಿ ಬಟ್ಟೆ ಬದಲಿಸಿ ಬರುವಷ್ಟರಲ್ಲಿ ಸ್ವಾಮಿಗಳು ಬಲಪಾದವನ್ನು ಕಾರಿನ ಫೂಟ್‌ಬೋರ್ಡಿನ ಮೇಲಿಟ್ಟಿದ್ದರು. ಕಾರು ಸ್ಟಾರ್ಟ್ ಆಗಿತ್ತು. ಕೈಮುಗಿದುನಿಂತೆ. ಮುಖ ನೋಡಿದರು. ಆಶೀರ್ವಚನ ಪತ್ರ ಬೇಕೆಂದು ಪ್ರಾರ್ಥಿಸಿದೆ. ಕೈಗೆ ಸಿಕ್ಕ ರದ್ದಿಕಾಗದ ತೆಗೆದುಕೊಂಡು ಫೂಟ್‌ಬೋರ್ಡಿನ ಮೇಲಿರಿಸಿದ್ದ ಕಾಲಿನ ಮಂಡಿಯ ಮೇಲಿಟ್ಟು ಸರಸರನೆ

ಬರೆದರು. ಗಣ್ಯರ ಅಭಿಪ್ರಾಯಗಳಿಗೆಂದೇ ವಿಶೇಷವಾಗಿ ಇಟ್ಟಿದ್ದ ಪುಸ್ತಕವನ್ನು ನನ್ನಿಂದ ಪಡೆದು ಖಾಲಿ ಪೇಜಿನ ಕೆಳಭಾಗದಲ್ಲಿ ಸಹಿ ಮಾಡಿ, ಮ್ಯಾನೇಜರರಿಗೆ ಹೇಳಿದರು- "ಈ ಕಾಗದದಲ್ಲಿ ಬರೆದಿರುವ ಅಭಿಪ್ರಾಯ ವ್ಯಕ್ತಪಡಿಸಿ ನೀಟಾಗಿ ನಾನು ಸಹಿ ಮಾಡಿರುವ ಈ ಪೇಜಿನಲ್ಲಿ ಬರೆದು ಮುದ್ರೆ ಹಾಕಿ ಕೊಡಿ."

ವಿಶಾಲ ಹೃದಯದ ವಿಶ್ವವಿಖ್ಯಾತ ಶ್ರೀವಿಶ್ವೇಶತೀರ್ಥ ಶ್ರೀಪಾದಂಗಳವರ ಕೈಬರಹದ ರದ್ದಿ ಕಾಗದ ಹಾಗೂ ಅವರ ಸಹಿ ಇರುವ ಆಶೀರ್ವಚನದ ಪುಸ್ತಕಗಳನ್ನು ಗೌರವ-ಆದರಗಳಿಂದ ರಕ್ಷಿಸಿ ಇಟ್ಟಿದ್ದೇನೆ.

**ಡಾ. ಟಿ.ಕೆ. ಪವಾರ್**

ಛತ್ರಪತಿ ಶಿವಾಜಿ ಮಹಾವಿದ್ಯಾಲಯ, ಸತಾರ ಇದರ ಪ್ರಾಂಶುಪಾಲರು. ಎದುರಿಗೇ ನಿಂತಿದ್ದ ಆಫೀಸು ಜವಾನನ್ನು ಕರೆಯಲಿಲ್ಲ. ತಾವೇ ಸ್ವತಃ ಕಾಲೇಜು ಅತಿಥಿ ಗೃಹದ ಕೀಲಿ ಗೊಂಚಲನ್ನು ಹಿಡಿದು ಬಂದು, ಕೊಠಡಿ ಬಾಗಿಲು ತೆರೆದು, ಅನುವು ಮಾಡಿಕೊಟ್ಟ ನಿರಹಂಕಾರಿ. ಘನ ವಿದ್ವಾಂಸರು. ಭಾರತೀಯ ತತ್ವಶಾಸ್ತ್ರ ಪಾರಂಗತರು. ಭಾರತೀಯ ತತ್ವಶಾಸ್ತ್ರದ ಬಗ್ಗೆ ಆಳವಾದ ಸಂಶೋಧನೆ ನಡೆಸುತ್ತಿದ್ದಾರೆ. ಎಲ್ಲಕ್ಕಿಂತ ಮೇಲಾಗಿ ಗೀತಾ ಪ್ರಿಯರು.

ಸಾಯಂಕಾಲ ನಾನು ಉಳಿದಿದ್ದ ಕೊಠಡಿಗೇ ಬಂದು ಸಿಪಾಯಿಗಳು ಮಾಡಿದ್ದ ವ್ಯವಸ್ಥೆಯ ಮೇಲ್ವಿಚಾರಣೆ ಮಾಡಿದರು. ಸಾಯಂಕಾಲದ ನನ್ನ ಪ್ರಾರ್ಥನೆ ಆಗುವ ವರೆಗೂ ಕಾದಿದ್ದು ಒಂದು ಗಂಟೆಕಾಲ ಜ್ಞಾನ-ಭಕ್ತಿಗಳ ಬಗ್ಗೆ ದೀರ್ಘವಾದ ವಿವರಣೆ ನೀಡಿದರು. ಅನೇಕ ಕಡೆಗಳಲ್ಲಿ ಹಿಂದು ತತ್ವಶಾಸ್ತ್ರ ಭಗವದ್ಗೀತೆಗಳ ವಿಷಯವಾಗಿ ಮಾಡಿರುವ ಭಾಷಣದ ಕ್ಯಾಸೆಟ್ ಹಾಕಿ ಕೇಳಿಸಿದರು.

ಡಾ. ಪವಾರರಿಗೆ ನಾನು ಚಿರ ಋಣಿಯಾಗಿರುವುದು ಅವರಿಂದ ಪಡೆದ ಗೀತೋಪದೇಶಕ್ಕಾಗಿ. ರಾತ್ರಿ ಊಟ ಮಾಡಿದ ಮೇಲೆ ೮ ರಿಂದ ೯ ಗಂಟೆವರೆಗೆ ಪುನಃ ಬೆಳಿಗ್ಗೆ ೭ ರಿಂದ ೮ ಗಂಟೆಯುವರೆಗೆ, ಭಗವದ್ಗೀತೆಯ ಎರಡನೇ ಅಧ್ಯಾಯದ ಸಾಂಖ್ಯ-ಯೋಗದ ವಿವರಣೆ, ಸರಳ ಇಂಗ್ಲೀಷಿನಲ್ಲಿ. ಅವರು ಪದೇ ಪದೇ ಒತ್ತಿ ಹೇಳುತ್ತಿದ್ದ "ಅವೇರ್‌ನೆಸ್" (ಜಾಗೃತಿ) ಪದ ನನ್ನ ಮನಸ್ಸಿನಲ್ಲಿ ಶಾಶ್ವತವಾಗಿ ಬೇರೂರಿ ನಿಂತಿದೆ.

ಬೆಳಿಗ್ಗೆ ಮನೆಯಲ್ಲಿ ಚಹ ತಿಂಡಿ ಆಯಿತು. ನನ್ನ ಪುಸ್ತಕದಲ್ಲಿ ಒಂದೆರಡು ಪ್ರೋತ್ಸಾಹದ ನುಡಿಗಳನ್ನು ಬರೆದು ಪ್ರಯಾಣಕ್ಕೆ ಶುಭ ಹಾರೈಸಿದರು. ನಮಸ್ಕರಿಸಿ ಹೊರಟು ನಿಂತೆ. ಒಳಗಡೆ ಇದ್ದ ತಮ್ಮ ಶ್ರೀಮತಿಯನ್ನು ಕೂಗಿ ಕರೆದು ಹೇಳಿದ ಮಾತುಗಳನ್ನು ಬರೆಯುವಾಗ ಸಂಕೋಚವೆನಿಸುತ್ತದೆ: "ಬದರಿಕಡೆ ಪಾದಯಾತ್ರೆ ಹೋಗುತ್ತಿದ್ದಾರೆ; ತಾಂಬೂಲ ಕೊಟ್ಟು ನಮಸ್ಕರಿಸು."

**ಮದನಭಾಯಿ ಡಿ. ಪಟೇಲ್**

ಚೇರ್ಮನ್, ಸಯಾಣ ವಿಭಾಗ, ಸಹಕಾರಿ ಖಂಡ್ ಉದ್ಯೋಗ ಮಂಡಲಿ ಲಿಮಿಟೆಡ್, ಸಯಾಣ. ಜಿಲ್ಲಾ ಸೂರತ್-ಗುಜರಾತ್.

ಕುಟುಕು ಮಳೆಯಲ್ಲಿ ನೆನೆಯುತ್ತಲೇ ಪೂರಾ ೧೨ ಕಿಲೋಮೀಟರ್ ನಡೆದಿದ್ದೆ. ರಸ್ತೆ ಬದಿಯ ದೊಡ್ಡ ಫಲಕ ನೋಡಿದ ಮೇಲೆಯೇ ನನಗೆ ತಿಳಿದದ್ದು ಅದು ಸಯಾಣ



# ಪುಸ್ತಕ ವಿಭಾಗ

ಫ್ಯಾಕ್ಟರಿ ಅಂತ. ಸ್ವಲ್ಪ ಹೊತ್ತು ಸುಧಾರಿಸಿ ಕೊಂಡು ಹೋಗೋಣ ಎಂದೇ ಒಳಗೆ ಕಾಲಿಟ್ಟೆ. ಸೆಕ್ಯೂರಿಟಿ ವಿಚಾರಣೆಗೆ ಒಳಗಾಗಿ ಯಾಕಾಗಿ ಬಂದೆನೋ ಅನಿಸಿತು. ಸಾವರಿಸಿ ಕೊಂಡು, ಸ್ವಲ್ಪ ವಿನಯದಿಂದಲೇ, "ಚೇರ ಮನ್‌ರವರನ್ನು ಭೇಟಿ ಮಾಡಲು ಅವಕಾಶ ಮಾಡಿ ಕೊಡಿ," ಎಂದು ನನ್ನ ವಿಳಾಸ ಹೇಳಿದೆ. ಫೋನ್ ಹಚ್ಚಿದ ಒಂದೇ ನಿಮಿಷ ದಲ್ಲಿ ಹಸ್ತಲಾಘವ ಇತ್ತು ಚೇರಮನ್ನರಲ್ಲಿಗೆ ಕರೆದೊಯ್ದ.

ಇನ್ನೂ ಒಳಗೆ ಕಾಲಿಟ್ಟಿರಲೇ ಇಲ್ಲ. ಸಣ್ಣಗೆ ಗುಡುಗಿದಂತಹ ಗತ್ತಿನ ಧ್ವನಿಯಲ್ಲಿ ನಾಟಕೀ ಯವಾಗಿ ಸ್ವಾಗತ, ಶುದ್ಧ ಹಿಂದಿಯಲ್ಲಿ. "ಬರ ಮಾಡಬೇಕು ಕರ್ನಾಟಕ ಪಾದಯಾತ್ರಿಗಳು- ಆಸೀನರಾಗಿರಿ." ಗಾಂಧಿ ಟೊಪ್ಪಿಗೆ ಬದಲಾಗಿ ಕಿರೀಟ ಇರಬೇಕಾಗಿತ್ತು. ಅಂದುಕೊಂಡೆ. ಸಿಂಹಾಸನದ ಮಾದರಿಯ ಕುರ್ಚಿಯನ್ನು ತುಂಬಿಕೊಂಡಿರುವ ದೊಡ್ಡ ದೇಹ. ದೇಹಕ್ಕೆ ತಕ್ಕಂತೆ ಅಗಲ ಮುಖ. ಹಿಂದಿನ ರಾಜ ಮಹಾರಾಜರಂತಹ ಶ್ರೀಮದ್ ಗಾಂಭೀರ್ಯ. ರಾಜ ದರ್ಬಾರಿನಂತಹದೇ ಸುಸಜ್ಜಿತ ಕೋಣೆ. ತೋರಿಸಿದ ಭಾರೀ ಸೈಜಿನ ಕುರ್ಚಿಯಲ್ಲಿ ಆನೆಯ ಮುಂದಿನ ಆಡಿನಂತೆ ಮುದುಡಿ ಕುಳಿತೆ. ಕುರ್ಚಿಯ ಅರ್ಧಭಾ ಗವೂ ತುಂಬಲಿಲ್ಲ. ಫೈಲನ್ನು ತೆರೆಯುತ್ತಿದ್ದಂ ತೆಯೇ ತಡೆದು ಹೇಳಿದರು- ಅದೆ ಶ್ರೀಮದ್‌ಗಾಂಭೀರ್ಯ- "ಮಹಾಶಯರೆ, ನನಗೆ ನಿಮ್ಮ ಯಾವ ಪರಿಚಯಪತ್ರದ ಆಗ ತ್ಯವೂ ಇಲ್ಲ. ಆದಿರಲಿ, ನನ್ನ ಈ ಪ್ರಶ್ನೆಗೆ ದಯವಿಟ್ಟು ನೇರ ಉತ್ತರ ಕೊಡಿ- ಮಳೆ ಯಲ್ಲಿ ನೆನೆಯು ಬಂದಿದ್ದೀರಿ-ಯಾಕೆ ಛತ್ರಿ ಇಲ್ಲವೇ ?" ಹೆಚ್ಚಿನ ವಿವರಣೆಗೆ ಅವಕಾಶವಾ ಗದಿರಲಿ ಎಂದು ಯೋಚಿಸಿ ಒಂದೇ ಶಬ್ದದಲ್ಲಿ "ಇಲ್ಲ ಸ್ವಾಮಿ" ಎಂದು ತಡವರಿಸುತ್ತಲೇ ಹೇಳಿದೆ. "ಓಹೋ, ಇದು ತುಂಬ ಅನ್ಯಾಯ" ಅಂದವರೇ ಬೆಲ್ ಮಾಡಿ ಕಾರಿನ ಡ್ರೈವರನ್ನು ಬರಹೇಳಿದರು. ಕೈಕಟ್ಟಿ ನಿಂತ ಡ್ರೈವರನಿಗೆ ರಾಜಾಜ್ಞೆ- "ಈಗಲೆ ಸೂರತ್ತಿಗೆ ಕಾರು ತೆಗೆದುಕೊಂಡು ಹೋಗು. ಸಾಯಂಕಾ ಲದ ಒಳಗೆ ಉತ್ತಮ ದರ್ಜೆಯ ಹಗುರವಾದ ಬಟನ್ ಛತ್ರಿ ತರಬೇಕು..... ಇನ್ನೂ ಕೇಳು, ಅಳಿಸಲಾಗದಂತಹ ಬಣ್ಣದಲ್ಲಿ ಛತ್ರಿಯ ಮೇಲೆ ನಮ್ಮ ಕಾರ್ಖಾನೆ ವಿಳಾಸ - ಇವರ ಹೆಸರು ಬರೆಯಿಸಬೇಕು."

ಅಷ್ಟರಲ್ಲಿ ಮೆಸ್ಸಿನಿಂದ ಕರ್ನಾಟಕದ ಪಾದ ಯಾತ್ರಿಕನಿಗಾಗಿಯೇ ವಿಶೇಷವಾಗಿ ತಯಾರಿ ಸಿದ ಕಾಫಿ ಬಂತು. ಹೊರಗೆ ಎಲ್ಲಿಯೋ ತುರ್ತಾಗಿ ಹೊರಟಿದ್ದವರು ಗಾಡ್ರೆಜ್ ಬೀರು ವಿನಿಂದ ದೊಡ್ಡ ಸೈಜಿನ ಕ್ಯಾಲಿಕೋ ಬೈಂಡಿನ ಪುಸ್ತಕವೊಂದನ್ನು ತೆಗೆದು ತಮ್ಮ ಸಹಿ ಹಾಕಿ ಕೊಡುತ್ತ ಹೇಳಿದರು- "ಮೆಸ್ಸಿನ ಮ್ಯಾನೇಜರ ನಿಗೆ ಫೋನಿನಲ್ಲಿ ಎಲ್ಲ ತಿಳಿಸಿದ್ದೇನೆ. ನಿಮ್ಮ ಮೆನ್ಯು ಹೇಳಿ ಊಟ ಮಾಡಿ. ವಿಶ್ರಾಂತಿ ಪಡೆಯಿರಿ. ನಾನು ಸಾಯಂಕಾಲ ೪ ಗಂಟೆಗೆ ವಾಪಸ್ಸು ಬರುತ್ತೇನೆ. ನಿಧಾನವಾಗಿ ಮಾತನಾ ಡೋಣ. ಪುಸ್ತಕದ ಹೆಸರು "ಗಾಂಧಿ ದಿ ಫರ್ಗಾಟನ್ ಮಹಾತ್ಮ; ಪ್ರೊ: ಎ.ಸಿ. ಜೈನ್, ಬಾಂಬೆ-ಪ್ರೆಸ್ ರೂ: ೧೨೫ ಅತ್ಯಮೂಲ್ಯ ಪುಸ್ತಕ!

# ಪಾದಯಾತ್ರಿಕ ಕಂಡ ಭಾರತ

ಉದಾರ ಹೃದಯಿ ಗುಜರಾತಿನ ಮಫತ್ ಭಾಯಿ ಪಟೇಲರ ಪ್ರೀತಿಯ ಕಾಣಿಕೆಯಾಗಿ ಆ ಛತ್ರಿಯನ್ನು ಶಾಶ್ವತವಾಗಿ ಉಳಿಸಿ, ರಕ್ಷಿಸಿ ಇಟ್ಟಿದ್ದೇನೆ. ಪುಸ್ತಕದ ಬಗ್ಗೆ ಏನು ಹೇಳಲಿ? ಕರುಳು ಕಿತ್ತು ಬಾಯಿಗೆ ಬಂದಂತಾಗುತ್ತದೆ. ಅದೂ ಸೇರಿ ಭಾರತದಾದ್ಯಂತ ಕಾಣಿಕೆಯ ರೂಪದಲ್ಲಿ ನನಗೆ ಬಂದ ಒಟ್ಟು ೨೬ ಅಮೂಲ್ಯ ಪುಸ್ತಕಗಳ ದುರಂತ ಕಥೆಯನ್ನು ಯಾರಲ್ಲಿ ಹೇಳಲಿ? ಹಗಲೂ ರಾತ್ರಿ ಕಣ್ಣೀರು ಸುರಿಸುತ್ತ ಸವೆಯುತ್ತಿದ್ದೇನೆ.

## ವಿಶ್ವದೀಪ ಗುರುಕುಲ ಆಶ್ರಮ

ರಾಜಸ್ತಾನದ ಪಾಲಿ-ಜಾಲಣ್ ರಸ್ತೆಯಲ್ಲಿ ೨೦ ಕಿಲೋಮೀಟರ್ ದೂರದಲ್ಲಿರುವ ೪೦೦ ಬಿಘಾ ಜಮೀನಿನ ಒಡೆತನದ ಆಶ್ರಮ. ಯೋಗ ಶಿಕ್ಷಣ ಹಾಗೂ ಸಾರ್ವಜನಿಕ ಉಚಿತ ದವಾಖಾನೆ. ಇವು ಆಶ್ರಮದ ಮುಖ್ಯ ಕಾರ್ಯಯೋಜನೆಗಳಲ್ಲದೆ ಕೋಟ್ಯಂತರ ರೂಪಾಯಿ ವೆಚ್ಚದ ಬೃಹತ್ ಸೇವಾ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವ ಆಧ್ಯಾತ್ಮಿಕ ಸಂಸ್ಥೆ. ರಸ್ತೆ ಬದಿಯ ಗೇಟಿನಿಂದ ಆಶ್ರಮದ ಕಾರ್ಯಾಲಯ ತಲುಪಬೇಕಾದರೆ ಅರ್ಧ ಕಿಲೋಮೀಟರ್ ನಡೆಯಬೇಕು. ಆಶ್ಚರ್ಯ ಚಕಿತನಾಗಿ ಎಲ್ಲವನ್ನು ನೋಡುತ್ತಾ ಕಾರ್ಯಾಲಯ ಸಮೀಪಿಸಿದೆ. ಆಶ್ರಮದ ಮುಖ್ಯ ಸಾಧಕಿ ಶ್ರೀಮತಿ ಕಿರಣ್ ಗಾಂಧಿ ಎಲ್ಲೋ ಹೊರಗೆ ಹೋಗಲು ಕಾರು ಹತ್ತಿದ್ದವರು ನನ್ನನ್ನು ನೋಡಿ ತಡೆದರು. ನಮಸ್ಕರಿಸಿದೆ. "ಪಾಲಿಗೆ ಹೋಗಿಬರುತ್ತೇನೆ. ಸಾಯಂಕಾಲ ೪ ಗಂಟೆಗೆ ಭೇಟಿಯಾಗೋಣ. ಅಲ್ಲಿಯವರೆಗೆ ಧ್ಯಾನಮಂದಿರದಲ್ಲಿ ವಿಶ್ರಮಿಸಿಕೊಳ್ಳಿ," ಎಂದು ಹೇಳಿ ಮ್ಯಾನೇಜರಿಗೆ ನನ್ನ ಊಟದ ವ್ಯವಸ್ಥೆಯ ಬಗ್ಗೆ ಸೂಚಿಸಿದರು. ನಾನು ಹೋದಾಗ ಆಶ್ರಮದ ಹಿರಿಯ ಸ್ವಾಮೀಜಿ ಶ್ರೀ ಮಹೇಶ್ವರಾನಂದರು ವಿದೇಶ ಪ್ರವಾಸ ಹೋಗಿದ್ದರು. ಅವರ ಗೈರು ಹಾಜರಿಯಲ್ಲಿ ಆಶ್ರಮದ ಎಲ್ಲ ಕಾರ್ಯಭಾರವೂ ಶ್ರೀಮತಿ ಕಿರಣ್ ಗಾಂಧಿಯವರ ಮೇಲೆಯೆ.

"ಏನು ಮಾಡುತ್ತಿದ್ದೀರಿ?" ಎಂದು ಕೇಳುತ್ತಲೇ ಮಾತಾಜಿಯವರು ಧ್ಯಾನಮಂದಿರದ ಒಳಗೆ ಕಾಲಿಡುವುದಕ್ಕೂ ಗೋಡೆ ಗಡಿಯಾರ ನಾಲ್ಕು ಗಂಟೆ ಬಾರಿಸುವುದಕ್ಕೂ ಸರಿಹೋಯಿತು. ಕಿತ್ತಳೆ ಹಣ್ಣಿನ ಬಣ್ಣದ ದುಂಡು ಮುಖ. ಮಧ್ಯಮ ವಯಸ್ಸಿನ ಮಂದಸ್ಮಿತೆ. ಹಾಸಿದ್ದ ರತ್ನಗಂಬಳಿಯ ಮೇಲೆ ನನ್ನ ಪಕ್ಕದಲ್ಲಿಯೇ ವಜ್ರಾಸನದಲ್ಲಿ ಕುಳಿತು ನಾನು ಓದುತ್ತಿದ್ದ ಕನ್ನಡ ಪುಸ್ತಕವನ್ನು ಕೈಗೆತ್ತಿಕೊಂಡರು. ಶ್ರೀ ಅಚ್ಯುತ ಗೀತಾ ಸಂದೇಶ. ಮುಖಪುಟದ ಮೇಲಿನ ಭಗವಾನ್ ಶ್ರೀಕೃಷ್ಣನ ಗೀತೋಪದೇಶದ ಚಿತ್ರವನ್ನು ನೋಡಿ ಅರ್ಥವಾದಂತೆ ಮುಗಳ್ನಕ್ಕರು. ಫೈಲನ್ನು ಕೈಗೆತ್ತಿ ಕುತೂಹಲಭರಿತರಾಗಿ ಪ್ರತಿಯೊಂದು ಕಾರ್ಯಕ್ರಮವನ್ನು ನೋಡುತ್ತಾ ಗುಜರಾತ್ ರಾಜ್ಯಕ್ಕೆ ಬಂದಾಗ ಮುಖ ಇಷ್ಟಗಲವಾಯಿತು. ವಲ್‌ಸಾಡ್‌ನ ಮೂರು ದಿನಗಳ ವಾಸ್ತವ್ಯ-ಅಲ್ಲಿನ ಕಾರ್ಯಕ್ರಮಗಳನ್ನು ವಿವರವಾಗಿ ತಿಳಿದು ಹರ್ಷಭರಿತರಾದರು.

ಆಮೇಲೆ ತಿಳಿಯಿತು ಅವರು ಗುಜರಾತಿನ ವಲ್‌ಸಾಡ್‌ನವರೆಂದು. ಶಾಲಾ ಕಾಲೇಜುಗ



# ಪುಸ್ತಕ ವಿಭಾಗ

ಳಲ್ಲಿ ಸ್ವಾಮಿ ವಿವೇಕಾನಂದರ ದಿವ್ಯ ತತ್ವದರ್ಶನಗಳ ಪ್ರಚಾರ ಮಾಡುತ್ತ ನಡೆಯುವ ನನ್ನ ಉದ್ದೇಶ ಕೇಳಿ ಬಹಳ ಸಂತೋಷಪಟ್ಟರು. ಅವರ ತಂದೆಯವರು ಬೇಲೂರು ಶ್ರೀ ರಾಮಕೃಷ್ಣಮಠದ ನಿಷ್ಠಾವಂತ ಭಕ್ತರಂತೆ. ವಿದ್ಯಾರ್ಥಿ ಜೀವನ-ಬ್ರಹ್ಮಚರ್ಯದ ಬಗ್ಗೆ ಸ್ವಾಮಿ ವಿವೇಕಾನಂದರಿಗಿದ್ದ ಅಪಾರ ಕಳಕಳಿಯನ್ನು ಶಾಲಾ ಕಾಲೇಜುಗಳಲ್ಲಿ ಒತ್ತಿ ಹೇಳಿರಿ ಎಂಬ ಅತ್ಯುತ್ತಮ ಸಲಹೆ ನೀಡಿದ ಮಾತಾಜಿಯವರು ನನ್ನ ಮುಖವನ್ನೇ ತದೇಕವಾಗಿ ನಿಟ್ಟಿಸುತ್ತ ಪ್ರಶ್ನಿಸಿದರು: "ನೀವು ಇಂದು ಪಾಲಿಯಿಂದಲೂ ೨೦ ಕಿಲೋಮೀಟರ್ ನಡೆದೇ ಬಂದಿರಾ ?"

ನನಗೆ ನಗು ಬಂತು. "ಮಾತಾಜಿ, ಪಾಲಿಯಿಂದೇ ಅಲ್ಲ- ೧೦ ತಿಂಗಳಿಂದ ಕರ್ನಾಟಕದಿಂದಲೂ ನಡೆದೇ ಬರುತ್ತಿದ್ದೇನೆ- ಮುಂದೆ ನಡೆದೇ ಹೊರಟ ಸ್ಥಳ ಸೇರುತ್ತೇನೆ," ಎಂದು ಹೇಳಿ ಮಾರ್ಗಸೂಚಿ ಭೂಪಟ ತೋರಿಸಿದೆ. ಕ್ಷಣ ಹೊತ್ತು ಮೌನತಾಳಿದರು. ತಗ್ಗಿಸಿದ್ದ ಮುಖವನ್ನು ಮೇಲೆತ್ತಿದರು. ಅವರ ಕಪೋಲದ ಮೇಲಿನ ಕಣ್ಣೀರು ಕಂಡು ಮೂಕವಿಸ್ಮಿತನಾದೆ. ತಮ್ಮ ತಂದೆಯೋ ಹಿರಿಯ ಸಹೋದರನೋ ಕರ್ನಾಟಕದಿಂದಲೂ ನಡೆದು ಬರುತ್ತಿರುವ ಚಿತ್ರವನ್ನು ಕಲ್ಪಿಸಿಕೊಂಡಿದ್ದರು ಅಂತ ಕಾಣುತ್ತೆ. ಎಷ್ಟೇ ಆಗಲಿ ಹೆಂಗರುಳು. ೫ ಗಂಟೆಗೆ ಸರಿಯಾಗಿ ಆಶ್ರಮದಿಂದ ಊಟದ ಗಂಟೆ ಬಾರಿಸಿತು. ತಮ್ಮ ಎಡಗೈಯಲ್ಲಿ ನನ್ನ ಬಲಗೈಯನ್ನು ಹಿಡಿದು ತಾಯಿ ಮಗುವನ್ನು ಎಳೆದೊಯ್ಯುವಂತೆ ಊಟದ ಹಾಲಿಗೆ ಕರೆದೊಯ್ದರು.

"ಬರ್‍ಸೆಲಾ ಬರ್‍ಸಿ"

ಅಪ್ಪಟ ಉತ್ತರ ಕರ್ನಾಟಕದ ಧಾಟಿಯಲ್ಲಿ ಸ್ವಾಗತಿಸಿ ಆಶ್ಚರ್ಯ ಉಂಟು ಮಾಡಿದರು ಶ್ರೀ ಬ್ರಹ್ಮಚಾರಿ ಮಹಾರಾಜ-ಪ್ರಧಾನ ವ್ಯವಸ್ಥಾಪಕರು- ಶ್ರೀಹಿತ ಹರಿವಂಶ ನಿಕುಂಜ ನ್ಯಾಸ-ಪೀಲಿಪೋಕರ್ ಪ್ರಿಯಾ ಕುಂಡ-ಬರಸಾನಾ ಜಿಲ್ಲೆ ಮಥುರಾ.

ಒಂದೇ ಸಮನೆ ನನ್ನ ಮುಖ ನೋಡುತ್ತ ಗಂಭೀರ ವದನರಾಗಿ ಭವಿಷ್ಯ ನುಡಿದರು- "ನೀವು ಒಂದು ದಿನ ಉಳಿಯಲು ಕೇಳುತ್ತಿದ್ದೀರಿ. ಮಹಾಶಯರೆ, ಅದು ನಮ್ಮ ನಿಮ್ಮ ಕೈಯಲಿಲ್ಲ. ತಾಯಿ ರಾಧಾಮಾಯಿಯ ಇಚ್ಛೆ. ತವರುಮನೆಗೆ ಬಂದಿದ್ದೀರಿ. ಅಷ್ಟು ಬೇಗ ಕಳುಹಿಸುತ್ತಾಳೆಯೇ ?

ಬ್ರಹ್ಮಚಾರಿಗಳ ಭವಿಷ್ಯ ಸುಳ್ಳಾಗಲಿಲ್ಲ. ಅಂದು ಹಿಡಿದ ಮಳೆ ಸತತ ಐದು ದಿವಸ ಬಿಡಲೇ ಇಲ್ಲ. ಬರಸಾನಾ ಮಾತೆಯ ದಿವ್ಯ ಸನ್ನಿಧಿ, ಪ್ರತಿ ದಿನವೂ ಏನಾದರೊಂದು ಸಾಂಸ್ಕೃತಿಕ ಕಾರ್ಯಕ್ರಮ. ಭಜನೆ, ಕೀರ್ತನೆ, ರಾಸಲೀಲೆ-ಇತ್ಯಾದಿ ಇತ್ಯಾದಿ. ನನ್ನ ಪಾದಯಾತ್ರೆಯ ಮೊದಲನೇ ವಾರ್ಷಿಕ ದಿನಾಚರಣೆಯನ್ನು ಆಚರಿಸಿದ್ದು ಬರಸಾನಾ ಮಾತೆಯ ಸನ್ನಿಧಿಯಲ್ಲಿಯೇ ೧೪-೧-೧೯೯೪ರ ಸಂಕ್ರಾಂತಿ ಹಬ್ಬದ ದಿವಸ. ೧೬-೧-೧೯೯೪ರಂದು ಆಶ್ರಮದಲ್ಲಿ ಸತ್ಸಂಗ ಸಭೆ. ದೆಹಲಿ ಹಾಗೂ ಇನ್ನಿತರ ಕಡೆಗಳಿಂದ ಬಂದಿದ್ದ ಗಣ್ಯ ವ್ಯಕ್ತಿಗಳಿಗೆ ಬ್ರಹ್ಮಚಾರಿ ಮಹಾರಾಜರು ನನ್ನ ಪರಿಚಯ ಮಾಡಿಕೊಟ್ಟರು. ಬೆಳಿಗ್ಗೆ ೯ ಗಂಟೆಗೆ ಭಜನೆ, ಸಂಕೀರ್ತನೆ, ರಾಸಲೀಲೆಗಳ ಕಾರ್ಯಕ್ರಮ. ಕರ್ನಾಟಕದ ಪಾದಯಾತ್ರಿಕ

## ಪಾದಯಾತ್ರಿಕ ಕಂಡ ಭಾರತ

ನಿಗೆ ದೀಪ ಬೆಳಗಿಸಿ ಕಾರ್ಯಕ್ರಮದ ಉದ್ಘಾಟನೆಗೆ ಅವಕಾಶ ನೀಡಿ ಗೌರವಿಸಿದರು. ಮಧ್ಯಾಹ್ನ ೧ ಗಂಟೆವರೆಗೆ ನಡೆದ ಕಾರ್ಯಕ್ರಮಗಳ ರಸದೂಟ. ಭಕ್ತಿರಸ ಪ್ರಧಾನ ವಜ್ರೇಶ್ವರಿ ಶ್ರೀ ರಾಧಾರಾಣಿಯ ಮೇಲಿನ ಹಾಡುಗಳು. ದೆಹಲಿಯಿಂದ ಆಗಮಿಸಿದ್ದ ಚಿಮನ್‌ಲಾಲ್ ಶರ್ಮ ಮುಖಂಡತ್ವದ ರಾಸಲೀಲೆ ಕಣ್ಮನಗಳಿಗೆ ಹಬ್ಬ. ಆಶ್ರಮದ ವತಿಯಿಂದ ಸುಮಾರು ೫೦೦ ಜನಗಳಿಗೆ ಹಬ್ಬದೂಟ. ಎಲ್ಲರೊಡನೆ ಬೆರೆತು, ಎಲ್ಲರೊಡನೆ ಕುಳಿತು ಊಟ ಮಾಡಿದ ಸಂತೋಷ.

ರಾಧಾಮಾಯಿ ಹುಟ್ಟಿದ ಸ್ಥಳ ವಾಸ್ತವವಾಗಿ ಬರಸಾನಾ ಅಲ್ಲ. ಮಥುರಾ-ಗೋಕುಲಗಳಿಗೆ ಮಧ್ಯೆ ಬರುವ ರಾವಲ್ ಎಂಬ ಹಳ್ಳಿಯಲ್ಲಿ. ಮುಖ್ಯ ರಸ್ತೆಯಿಂದ ಒಳಗಡೆ ಎರಡು ಕಿಲೋಮೀಟರ್ ನಡೆದುಹೋಗಬೇಕು. ಕಂಸನ ಹಾವಳಿ ತಾಳಲಾರದೆ ಗೋಕುಲದ ನಂದ ಬಾಬಾ ಸಂಸಾರ ಸಮೇತ ನಂದಗಾಂವ್‌ಗೆ ಹೋಗಿ ನೆಲೆಸಿದ. ರಾಧಾಮಾಯಿಯ ತಂದೆ ವೃಷಭಾನುದೇವನೂ ತನ್ನ ಸಂಸಾರವನ್ನು ರಾವಲ್‌ನಿಂದ ಬರಸಾನಾಕ್ಕೆ ಬದಲಿಸಿದ. ಬರಸಾನಾ-ನಂದಗಾಂವ್ ಎರಡೂ ರಾಗಿ ರಾಶಿಯೋಪಾದಿಯ ಸಣ್ಣ ಗುಡ್ಡಗಳ ಮೇಲೆ ಕಟ್ಟಲ್ಪಟ್ಟಿವೆ. ೧೫ ಕಿಲೋಮೀಟರ್ ಅಂತರ.

ಶ್ರೀ ಬ್ರಹ್ಮಚಾರಿ ಬಾಬಾ ಮಹಾರಾಜರು ಕರ್ನಾಟಕದ ಉತ್ತರ ಭಾಗದವರು. ಚಿಕ್ಕಂದಿನಲ್ಲಿಯೇ ಉತ್ತರ ಭಾರತಕ್ಕೆ ಹೋಗಿ ಕೊನೆಗೆ ಬರಸಾನಾ ಆಶ್ರಮದಲ್ಲಿ ಕಾಯಂ ಆಗಿ ನೆಲಸಿದ್ದಾರೆ. ರಾಧಾಮಾಯಿಯ ನಿಷ್ಠಾವಂತ ಭಕ್ತರು. ಉಪಾಸಕರು. ತಮ್ಮ ಜೀವಮಾನದಲ್ಲಿ ವ್ರಜಭೂಮಿ ಬಿಟ್ಟು ಬೇರೆಲ್ಲೂ ಹೋಗುವುದಿಲ್ಲ ಎಂಬ ಶಪಥ ಕೈಗೊಂಡಿದ್ದಾರೆ. ವ್ರಜಭೂಮಿ ಅಂದರೆ ಶ್ರೀಕೃಷ್ಣ ಪರಮಾತ್ಮನ ಬಾಲ್ಯಕಾಲದ ಲೀಲಾ ವಿನೋದಗಳಿಂದ ಕೂಡಿದ ಭೂಮಿ. ಮಥುರಾ, ಗೋಕುಲ, ವೃಂದಾವನ-ಗೋವರ್ಧನ- ಬರಸಾನಾ-ನಂದಗಾಂವ್-ಕೋಶಿಗಳನ್ನೊಳಗೊಂಡ ಪ್ರದೇಶ. ಜಮುನಾ ನದಿಯೇ ಕೇಂದ್ರ ಬಿಂದು.

ಬರಸಾನಾ ಮಾತೆ ಶ್ರೀ ರಾಧಾರಾಣಿಯ ಕೃಪೆಯಿಂದಾಗಿ ನೀರು ಹೆಪ್ಪುಗಟ್ಟುವಂತಹ ಚಳಿಯಲ್ಲಿಯೂ ಆಕೆಯ ಸನ್ನಿಧಿಯಲ್ಲಿ ಐದು ದಿನಗಳನ್ನು ಸುಖವಾಗಿ ಕಳೆದೆ. ಔತಣದ ಊಟ ಮಾಡಿಸಿ ಜೊತೆಯಲ್ಲಿ ಆಶ್ರಮವಾಸಿಗಳೆಲ್ಲರೂ ಎರಡು ಕಿಲೋಮೀಟರ್ ನಡೆದು ಬಂದು ಬೀಳ್ಕೊಟ್ಟರು. ಎಲ್ಲರ ಕಣ್ಣಂಚುಗಳು ತೇವಗೊಂಡವು. ಶ್ರೀ ಬ್ರಹ್ಮಚಾರಿ ಬಾಬಾ ಮಹಾರಾಜರ ಸಂದೇಶ- "ಡೋಂಟ್ ಟ್ರೈ ಟು ಬಿಕಂ ಸಾಧು- ಬಿ ಎ ಸಾಧು ಆಲ್ವೇಸ್" ಹೊತ್ತು ಭಾರವಾದ ಹೆಜ್ಜೆ ಇಡುತ್ತಾ ಪಾದಯಾತ್ರೆ ಮುಂದುವರಿಸಿದೆ.

**ಅನೇಕತೆಯಲ್ಲಿ ಏಕತೆ: ಭಾರತದ ವಿಶೇಷತೆ**

ಇದಕ್ಕೆ ಪ್ರತ್ಯಕ್ಷ ಉದಾಹರಣೆಯಂತಿದ್ದಾರೆ ಬಂಗಾಳದ ಈ ಇಬ್ಬರು ಬಂಧುಗಳು. ಮೊದಲನೆಯವರು ಮುಲ್ಲಾ ಅಲ್ಲಾವುದ್ದೀನ್. ಶಾಂತಿ ನಿಕೇತನ-ಬರ್ದವಾನಗಳ ಮಧ್ಯೆ ಬರುವ ಮಂಗಲಕೋಟ್ ಊರಿನ ಸರ್ಕಾರಿ ಹೈಸ್ಕೂಲ್ ಅಧ್ಯಾಪಕರು. ಅಜ್ರೋ ನದಿಯನ್ನು ದೋಣಿಯಲ್ಲಿ ದಾಟಿ ಮಂಗಲ



## ಪುಸ್ತಕ ವಿಭಾಗ

ಕೋಟ್ ಹೈಸ್ಕೂಲ್ ತಲುಪುವ ಹೊತ್ತಿಗೆ ಮಧ್ಯಾಹ್ನವೇ ಆಗಿತ್ತು. ಹೈಸ್ಕೂಲ್ ಮುಂಭಾಗದಲ್ಲಿ ತಣ್ಣನೆಯ ಮರದ ನೆರಳಲ್ಲಿ ಕುಳಿತು ಹರಟೆ ಹೊಡೆಯುತ್ತಿದ್ದ ೧೦-೧೨ ಜನ ಉಪಾಧ್ಯಾಯರು ನನ್ನ ವಿಷಯ ಕೇಳಿ ಒಬ್ಬರ ಮುಖ ಒಬ್ಬರು ನೋಡಿ ಮುಸಿ ಮುಸಿ ನಕ್ಕರೇ ವಿನಾ ಬಾಯಿ ಬಿಡಲಿಲ್ಲ. ಕೂಡಲು ಹೇಳಲೂ ಇಲ್ಲ. ಇದೆಲ್ಲವನ್ನೂ ಗಮನಿಸುತ್ತಾ ಪೇಪರ್ ಓದುತ್ತ ಕುಳಿತಿದ್ದ ಒಬ್ಬರಿಗೆ ತಮ್ಮ ಸ್ನೇಹಿತರ ಔದಾಸೀನ್ಯವನ್ನು ಸಹಿಸಲಾಗಲಿಲ್ಲ. ಅಗಲ ಅಂಚಿನ ಬಂಗಾರ ಕಚ್ಚೆ-ಜುಬ್ಬ-ಆರಡಿ ಎತ್ತರದ ನೀಳಕಾಯದ ಅವರೇ ಮುಲ್ಲಾ ಅಲ್ಲಾವುದ್ದೀನ್.

ನಾನು ಕಳಗಿಳಿಸಿದ್ದ ಹೆಗಲು ಚೀಲವನ್ನು ಕೈಗೆತ್ತಿಕೊಂಡವರೇ ಹಿಂಬಾಲಿಸಲು ಹೇಳಿದರು. ಹಸಿರು ಹೊಲಗದ್ದೆಗಳ ಮಧ್ಯೆ ಇರುವ ಭಾರಿ ಬಂಗಲೆ. ಕೇವಲ ಹತ್ತು ನಿಮಿಷಗಳಲ್ಲಿ ತಮ್ಮ ಖಾಸಗಿ ಕೋಣೆಯನ್ನು ತಾವೇ ಸ್ವಚ್ಛಗೊಳಿಸಿ ಅಣಿಮಾಡಿದರು. ಮಡಿ ಬಟ್ಟೆಯನ್ನು ಹಾಸಿಗೆ ಮೇಲೆ ಹಾಸಿದರು. ಕೂಡಲು ಹೇಳಿ ವೃದ್ಧ ಮಾತೆಯಾದಿಯಾಗಿ ಕುಟುಂಬದ ಎಲ್ಲರನ್ನೂ ಕರೆದು ಪರಿಚಯ ಮಾಡಿಕೊಟ್ಟರು. ಬಾಗಿ ನಡೆಯುತ್ತ ಬಂದು ನಿಂತ ವೃದ್ಧಮಾತೆಗೆ ಪಾದಮುಟ್ಟಿ ನಮಸ್ಕರಿಸಿದೆ. ಘೋಷಾ ಪದ್ಧತಿಯೇ ಇಲ್ಲ. ನಿಸ್ಸಂಕೋಚವಾಗಿ ಎಲ್ಲರೂ ನನ್ನೊಡನೆ ಬೆರೆತರು. ಸಾಯಂಕಾಲ ನನ್ನ ಪ್ರಾರ್ಥನೆಗೆ ಪ್ರತ್ಯೇಕ ಸ್ಥಳವನ್ನು ಸ್ವಚ್ಛಗೊಳಿಸಿ ಜಮಖಾನೆ ಹಾಸಿ ಆಗರಬತ್ತಿ ಹಚ್ಚಿದರು. ತಾವೂ ಪಕ್ಕದಲ್ಲಿ ನಮಾಜಿಗೆ ಕುಳಿತರು.

ಬಂಗಾಳದಲ್ಲಿ ಸಾಮಾನ್ಯವಾಗಿ ಮೀನು ಮೊಟ್ಟೆಗಳಿಲ್ಲದ ಊಟವೇ ಇಲ್ಲ. ಆದಿನ ಮುಲ್ಲಾ ಅಲ್ಲಾವುದ್ದೀನ್ ಅವರ ಮನೆಯಲ್ಲಿ ನನಗೋಸ್ಕರ ಇದೆಲ್ಲ ವರ್ಜ್ಯ. ಶುದ್ಧ ಶಾಕಾಹಾರ. ಪೂರಿ-ಖೀರು: ಪೇಟೆಯಿಂದ ನನಗಾಗಿ ರಸಗುಲ್ಲ ತರಿಸಿದ್ದರು. ತಮಗಾಗಿ ಅಳಿಯ ಮಗಳು ಬರ್ದವಾನ್‌ನಿಂದ ಕಳುಹಿಸಿದ್ದ ಮಾವಿನ ಹಣ್ಣಿನ ಜಾಮ್ ತಿನ್ನಿಸುವಾಗ ಅವರ ಖುಷಿ ಹೇಳತೀರದು. ರಾತ್ರಿ ಊಟ ಆದ ಮೇಲೆ ರೂಮಿನಲ್ಲಿ ನಾವಿಬ್ಬರೆ. ಪುಸ್ತಕ ಸಂಗ್ರಹದಲ್ಲಿಟ್ಟಿದ್ದ ತಮ್ಮ ಅಚ್ಚುಮೆಚ್ಚಿನ ಬಂಗಾಳಿ ಭಗವದ್ಗೀತೆಯನ್ನು ತೋರಿಸಿ ಹೆಮ್ಮೆಪಟ್ಟದ್ದರಲ್ಲದೆ, "ಯದಾ ಯದಾಹಿ........." ಶ್ಲೋಕ ಉದ್ಧರಿಸಿ ಇಂಗ್ಲೀಷಿನಲ್ಲಿ ಅರ್ಥ ವಿವರಿಸಿದರು. ಕುರಾನ್ ಭಗವದ್ಗೀತೆಗಳನ್ನು ಹೋಲಿಸಿ ಅವೆರಡರ ಸಾಮ್ಯವನ್ನು ಎತ್ತಿ ತೋರಿಸಿದರು.

ನನಗೆ ಗಂಗಾಮಾತೆಯ ಕೊನೆಯ ದರ್ಶನವಾದದ್ದು ಉಲುವೇಡಿಯ ಹತ್ತಿರ. ಇಲ್ಲಿಂದ ನೇರವಾಗಿ ದಕ್ಷಿಣಕ್ಕೆ ತಿರುಗಿ ಬಂಗಾಳಕೊಲ್ಲಿ ಸೇರುತ್ತಾಳೆ. ಬೆಳಗಿನ ಜಾವ ೪ ಗಂಟೆಗೇ ಎದ್ದು ನದಿಯಲ್ಲಿ ಸ್ನಾನಮಾಡಿ ಪ್ರಾರ್ಥನೆ ಸಲ್ಲಿಸಿ ಹೊರಟು ೧೧-೩೦ಕ್ಕೆ ಗಗವಾನ ತಲುಪಿ ನೇರವಾಗಿ ಪೊಲೀಸ್ ಸ್ಟೇಷನ್ನಿಗೆ ಹೋಗಿ ಎಸ್.ಐ. ಅವರ ಹತ್ತಿರ ಮಾತನಾಡುತ್ತ ಕುಳಿತೆ. ಯಾವುದೋ ಕಾರ್ಯನಿಮಿತ್ತ ಅಲ್ಲಿಗೆ ಬಂದ ಕನ್ಹಯ್ಯಲಾಲ್ ಸಾಮಂತ ಅವರ ಪರಿಚಯವಾಯಿತು. ನಿವೃತ್ತ ಹೈಸ್ಕೂಲ್ ಮುಖ್ಯೋಪಾಧ್ಯಾಯರು ಹಾಗೂ

ಹಾಲಿ ಜಿಲ್ಲಾ ಪರಿಷತ್ ಉಪಾಧ್ಯಕ್ಷರು. ಇವರೇ ಆ ಎರಡನೆಯ ಬಂಗಾಳಿ ಬಂಧು.

ಕನ್ಹಯ್ಯಲಾಲ್ ಅವರಲ್ಲಿ ಒಂದು ದಿನ ಉಳಿದಿದ್ದು ಮರೆಯಲಾಗದ ಅನುಭವ. ಬಹಳಷ್ಟು ಲಾಭವಾಯಿತು. ಪಕ್ಕಾ ಕಮ್ಯುನಿಸ್ಟ್ ಒಬ್ಬರ ಮನೆಯಲ್ಲಿ ಪುಟ್ಟ ರಾಧಾಕೃಷ್ಣ ಮಂಟಪ-ಬಂಗಾಳಿ ಭಾಷೆಯ ಭಗವದ್ಗೀತೆಗಳನ್ನು ನೋಡಿದ ನಾನು ಆಶ್ಚರ್ಯ ವ್ಯಕ್ತಪಡಿಸಿದೆ. ಅದಕ್ಕೆ ಪ್ರತಿಯಾಗಿ ಒಂದು ಗಂಟೆಕಾಲ ಅವರು ನೀಡಿದ ಸುದೀರ್ಘ ವಿವರಣೆ ನನ್ನನ್ನು ದಂಗುಬಡಿಸಿತು. ಧಾರ್ಮಿಕ ವಿಷಯಗಳಲ್ಲಿ ಕಮ್ಯುನಿಸ್ಟರ ಬಗ್ಗೆ ನಾನು ಅದುವರೆಗೆ ಹೊಂದಿದ್ದ ತಪ್ಪು ಅಭಿಪ್ರಾಯಗಳ ನಿವಾರಣೆಯಾಯಿತು.

ರಾತ್ರಿ ಊಟ ಆದ ಮೇಲೂ ಲಾಲರು ನನ್ನ ಬೆನ್ನುಬಿಡಲಿಲ್ಲ. ಕಾರ್ಲ್ ಮಾರ್ಕ್ಸನ 'ದಾಸ್ ಕ್ಯಾಪಿಟಲ್' ಹಾಗೂ ಮಹರ್ಷಿ ದಯಾನಂದ ಸರಸ್ವತಿ ಅವರ 'ಸತ್ಯಾರ್ಥ ಪ್ರಕಾಶ'ಗಳ ಬಗ್ಗೆ ವಿವರ ನೀಡಿ ಇವೆರಡೂ ಆರ್ಥಿಕ, ಸಾಮಾಜಿಕ ಹಾಗೂ ಧಾರ್ಮಿಕ ಕ್ಷೇತ್ರಗಳಲ್ಲಿ ಕ್ರಾಂತಿಯುಂಟು ಮಾಡಿದ ೧೯ನೇ ಶತಮಾನದ ಸರ್ವ ಶ್ರೇಷ್ಠ ಗ್ರಂಥಗಳೆಂದು ಪ್ರತಿಪಾದಿಸಿದರು. ತನ್ಮಯನಾಗಿ ಕೇಳುತ್ತಾ ಕುಳಿತ ನನಗೆ ಸಮಯದ ಅರಿವೇ ಆಗಲಿಲ್ಲ. ಇದರಿಂದಾಗಿ ನನ್ನಲ್ಲಿ ಆಗಾಗ್ಗೆ ಇಣುಕಿ ಹಾಕುತ್ತಿದ್ದ ಅಹಂ ಜರ್ರನೆ ಇಳಿದು ಹೋಗಿ ನಾನೆಷ್ಟು ಅಲ್ಪಮತಿ ಎಂಬ ಅರಿವಾಯಿತು. ಇದು ನನ್ನ ಪಾದಯಾತ್ರೆಯಲ್ಲಾದ ಬಹುದೊಡ್ಡ ಅನುಭವ.ಲಾಲ್ ಅವರು ಬೆಳಿಗ್ಗೆ ನನ್ನ ಜೊತೆ ಎರಡು ಕಿಲೋಮೀಟರ್‌ವರೆಗೂ ನಡೆದು ಬಂದು, "ನನ್ನ ಮಾತುಗಳಿಂದ ನಿಮ್ಮ ಮನಸ್ಸಿಗೆ ನೋವಾಗಿದ್ದರೆ ದಯವಿಟ್ಟು ಕ್ಷಮಿಸಿ," ಎಂದೆನ್ನುತ್ತ ಹಾರ್ದಿಕವಾಗಿ ಅಭಿನಂದಿಸಿ ಬೀಳ್ಕೊಟ್ಟರು. ಎಂತಹ ಸಜ್ಜನಿಕೆ! ಎಂತಹ ಸೌಜನ್ಯ!

*****

ತಲೆ ತಗ್ಗಿಸಿಯೇ ನಡೆಯುತ್ತಿದ್ದೆ. ಆಕಸ್ಮಾತ್ ತಲೆ ಎತ್ತಿದ ಕೂಡಲೇ ರಸ್ತೆಯ ಬದಿಯ ದೊಡ್ಡ ಫಲಕ ಆಕರ್ಷಿಸಿತು. ಮಧುವನ-ರಾಜ್ಯ. ಪೊಲೀಸ್ ತರಬೇತಿ ಕೇಂದ್ರ, ಹರಿಯಾಣಾ ರಾಜ್ಯ ಪೊಲೀಸ್ ವರಿಷ್ಠ ಅಧಿಕಾರಿಗಳ (ಐ.ಜಿ.ಪಿ.) ನಿವಾಸವೂ ಅಲ್ಲಿಯೇ. ಭೇಟಿ ಮಾಡಬೇಕೆಂಬ ಕುತೂಹಲದಿಂದ ಬಂಗಲೆ ಹತ್ತಿರ ಹೋದೆ. 'ಆಲ್ಬರ್ಟ್ ಮೋಹನ್, ಐ.ಪಿ.ಎಸ್.' ಫಲಕ. ಬಿಗಿ ಬಂದೋಬಸ್ತು. ಸರ್ಪಕಾವಲು. ಅಪ್ಪಣೆ ಇಲ್ಲದೆ ಯಾರಿಗೂ ಪ್ರವೇಶವಿಲ್ಲ. ನನ್ನ ಅವತಾರ ನೋಡಿಯೇ ಏನೋ ಒಂದಿಬ್ಬರು ಅಧಿಕಾರಿಗಳು ಗದರಿಸಿಯೇಬಿಟ್ಟರು. ಧೈರ್ಯಗೆಡಲಿಲ್ಲ. ಬಹಳ ಕಷ್ಟಪಟ್ಟು ಇದ್ದಬಿದ್ದ ನನ್ನ ಚಾಕಚಕ್ಯತೆಯನ್ನೆಲ್ಲ ಉಪಯೋಗಿಸಿ ಒಬ್ಬ ಅಧಿಕಾರಿಯನ್ನು ಒಲಿಸಿಕೊಂಡು ನನ್ನ ವಿಳಾಸದ ಚೀಟಿ ಕಳುಹಿಸುವಲ್ಲಿ ಯಶಸ್ವಿಯಾದೆ. ನನ್ನ ಚೀಟಿಯನ್ನು ಕೈಯಲ್ಲಿ ಹಿಡಿದೇ ಹೊರಬಂದರು ಸಾಹೇಬರು. "ಹೆಲ್ಲೊ ಮಿಸ್ಟರ್ ಕರ್ನಾಟಕ, ಪ್ಲೀಸ್ ಕಂ ಇನ್" ಎನ್ನುತ್ತ ಕೈ ಕುಲುಕಿ ಒಳಗೆ ಕರೆದೊಯ್ದರು.

ಸೋಫಾದ ಮೇಲೆ ಕುಳ್ಳಿರಿಸಿ ಅವರು ಕೇಳಿದ ಮೊದಲ ಪ್ರಶ್ನೆ- "ನನ್ನನ್ನು ಯಾವ ಕಡೆಯುವನೆಂದು ಗುರುತಿಸಬಲ್ಲಿರಾ?" ನಾನು ಉತ್ತರಕ್ಕಾಗಿ ತಡವರಿಸುತ್ತಿದ್ದ

ಹಾಗೆಯೇ ಜೋರಾಗಿ ನಕ್ಕು, "ಬೆಂಗಳೂರಿನ ಸೇಂಟ್ ಜೋಸೆಫ್ ಕಾಲೇಜಿನಲ್ಲಿ ಓದಿದವನು. ಶಿವಾಜಿನಗರದವನು. ಹೋಳಿಗೆ ಊಟದ ಕರ್ನಾಟಕದವನು", ಎಂದು ಹೆಮ್ಮೆಯಿಂದ ಅವರೇ ಉತ್ತರಿಸಿ ಒಳಗಡೆ ದೃಷ್ಟಿ ಹಾಯಿಸಿದರು. "ಅರೆ ಮಹಾರಾಣಿಯವರೇ, ಬನ್ನಿ ಇವರನ್ನು ಭೇಟಿ ಮಾಡಿ- ಖಾಲಿ ಕೈಯಲ್ಲಿ ಬರಬೇಡಿ- ಚಾ, ಬಿಸ್ಕೀಟ್ ಸಮೇತ ಬನ್ನಿ" ಹಾವಭಾವ ಭರಿತ ಅವರ ಮಾತುಗಳು ನಗು ಬರಿಸುವಂತಹವು. ತಾಳ್ಮೆಯಿಂದ ನನ್ನ ಫೈಲನ್ನು ನೋಡುತ್ತ ಹುಬ್ಬೇರಿಸಿದರು.

ಆರಕ್ಷಣಾಧಿಕಾರಿಗಳ ಮಕ್ಕಳಿಗಾಗಿಯೇ ಇರುವ ಆಂಗ್ಲ ಮಾಧ್ಯಮದ ಶಾಲಾ ಮುಖ್ಯೋಪಾಧ್ಯಾಯರಿಗೆ ಫೋನ್ ಮಾಡಿ ಕಾರ್ ಡ್ರೈವರನ್ನು ಬರಹೇಳಿದರು. ಕಾರಿನಲ್ಲಿ ಕೂಡಿಸಿ, "ನಾನು ಜರೂರಾಗಿ ಕರ್ನಾಲ್‌ಗೆ ಹೋಗಬೇಕಾಗಿದೆ. ನಿಮ್ಮ ಕಾರ್ಯಕ್ರಮ ಮುಗಿಯುವಷ್ಟರಲ್ಲಿ ವಾಪಸ್ಸು ಬರುತ್ತೇನೆ. ಮಧ್ಯಾಹ್ನದ ಊಟ ನಮ್ಮಲ್ಲಿಯೇ ಮಾಡಿಕೊಂಡು ನೀವು ಮುಂದೆ ಹೋಗಬೇಕು," ಎಂದು ಆಗ್ರಹಪಡಿಸಿದರು.

ಕಾರು ಗೇಟಿನ ಹತ್ತಿರ ಬಂದಾಗ ಭದ್ರತಾ ಅಧಿಕಾರಿಗಳ ಗಾರ್ಡ್ ಅಫ್ ಆನರ್ ನೋಡಿ ನಗು ಬಂತು. ಹೈಸ್ಕೂಲ್ ಮುಖ್ಯೋಪಾಧ್ಯಾಯನಿ ನನಗಾಗಿ ಕಾಯುತ್ತ ಸ್ವಾಗತಿಸಿದರು. ಆರರಿಂದ ಹನ್ನೆರಡರವರೆಗೆ ಎಲ್ಲ ತರಗತಿಯ ಬಾಲಕ ಬಾಲಕಿಯರಿದ್ದ ಸಭೆ. ಮೈಕ್ ವ್ಯವಸ್ಥೆ ಮಾಡಿದ್ದರು. ತುಂಬಾ ಯಶಸ್ವಿಯಾಯಿತು.

ಜವಾಬ್ದಾರಿ ಸ್ಥಾನದಲ್ಲಿರುವ ದೊಡ್ಡ ಅಧಿಕಾರಿಗಳ ಕಾರ್ಯಕ್ಕೆ ಅಡ್ಡಿಯಾಗಬಾರದೆಂದು ಯೋಚಿಸಿ, ಆಲ್ಬರ್ಟ್ ಮೋಹನರು ಆಗ್ರಹಪಡಿಸಿದಂತೆ ಊಟಕ್ಕೆ ವಾಪಸ್ಸು ಹೋಗಲಿಲ್ಲ. ಏನು ತಿಳಿದುಕೊಂಡರೋ ಏನೋ ಎಂಬ ವ್ಯಥೆ ಇಂದಿಗೂ ಇದೆ. ಬೇರೆ ಮಾರ್ಗವಾಗಿ ಮುಖ್ಯ ರಸ್ತೆ ತಲುಪಿ ಕರ್ನಾಲ್ ದಿಕ್ಕಿನತ್ತ ನಡೆದೆ.

### ಶಾಂತಿನಿಕೇತನ

ಮಹರ್ಷಿ ದೇವೇಂದ್ರನಾಥ ಠಾಕೂರರ ತಪೋಭೂಮಿ. ಅವರ ಪುತ್ರರತ್ನ ಕವಿ ರವೀಂದ್ರನಾಥ ಠಾಕೂರರ ಸಾಧನೆಯ ಫಲಸ್ವರೂಪದ ವಿಶ್ವವಿಖ್ಯಾತಿಯ ಜ್ಞಾನತೀರ್ಥ. ಕೇವಲ ಪುಸ್ತಕದಲ್ಲಿ ಓದಿದ್ದೆ ಅಷ್ಟೆ. ಪ್ರತ್ಯಕ್ಷ ನೋಡಿ ಆನಂದಿಸುವ ಭಾಗ್ಯ ಪಾದಯಾತ್ರೆಯ ಅವಧಿಯಲ್ಲಿ ನನ್ನದಾಯಿತು. ಮೂರು ದಿನ ಅಲ್ಲಿ ಉಳಿದಿದ್ದೆ.

ಅದೇ ಸಮಯದಲ್ಲಿ ಶ್ರೀನಿಕೇತನದಲ್ಲಿ ನಡೆದ ಶಿಲ್ಪ ಕಲಾ ಪ್ರದರ್ಶನವನ್ನೂ ನೋಡುವ ಅವಕಾಶ ದೊರೆಯಿತು. ಹಿಂದಿ ವಿಭಾಗದ ಮುಖ್ಯಸ್ಥರೂ ಪ್ರಿನ್ಸಿಪಾಲರೂ ಆದ ಡಾ. ಸಿಯಾರಾಂ ತಿವಾರಿ ಅವರ ಔದಾರ್ಯದಿಂದಾಗಿ ಎರಡು ಅವಧಿಗಳಲ್ಲಿ ಯಶಸ್ವಿ ಕಾರ್ಯಕ್ರಮಗಳು ನಡೆದವು. ಕಲ್ಕತ್ತೆಗೆ ಹೊರಟು ನಿಂತಿದ್ದವರು ನನ್ನ ಕಾರ್ಯಕ್ರಮ ಪೂರ್ತಿ ಆಗುವವರೆಗೂ ಇದ್ದು ಭಾಗವಹಿಸಿ ಮೆಚ್ಚುಗೆ ವ್ಯಕ್ತಪಡಿಸಿದ ಹೃದಯವಂತರು. ಕಾರು ಹತ್ತುವ ಮುನ್ನ ನನ್ನನ್ನು ಹತ್ತಿರ ಕರೆದು ಕೈ ಹಿಡಿದು ಹೇಳಿದ ಅವರ ಮಾತು ಅವರ ಹೃದಯ ವೈಶಾಲ್ಯಕ್ಕೆ ಸಾಕ್ಷಿ: "ನಿಮ್ಮನ್ನು ಒಂದು ದಿವಸ ನಮ್ಮ ಮನೆಗೆ ಕರೆದೊಯ್ದು ಸತ್ಕರಿಸಲಾಗದ್ದಕ್ಕೆ ಕ್ಷಮಿಸಿ." ಪಕ್ಕದಲ್ಲಿ ನಿಂತಿದ್ದ

ಡಾ. ಮಂಜುರಾಣಿ ಸಿಂಹ ಅವರಿಗೆ ಮುಂದಿನ ನನ್ನ ಯೋಗಕ್ಷೇಮದ ಭಾರ ವಹಿಸಿ ಹೋದರು.

ಡಾ. ಮಂಜುರಾಣಿ ಸಿಂಹ ತಿವಾರಿ ಅವರ ಪ್ರೀತಿಯ ಶಿಷ್ಯೆ ಹಾಗೂ ಪ್ರಾಧ್ಯಾಪಕಿ. ನನ್ನನ್ನು ತಮ್ಮ ತಂದೆಯೋಪಾದಿ ಕಂಡರು. ಪ್ರತಿ ದಿನವೂ ನನ್ನ ರೂಮಿಗೆ ಬಂದು ಖುದ್ದು ನನ್ನ ಯೋಗಕ್ಷೇಮ ವಿಚಾರಿಸಿಕೊಂಡ ಮಾತೃ ಹೃದಯಿ. ನಾನು ಹೊರಡುವ ಮುನ್ನಾದಿನ ಸಾಯಂಕಾಲ ತಮ್ಮ ಮನೆಗೆ ಕರೆದುಕೊಂಡು ಹೋಗಿ ಸತ್ಕರಿಸಿದರು. ತಾವು ಬರೆದ ಪುಸ್ತಕ ವೊಂದನ್ನು ಪ್ರೀತಿಯ ಕಾಣಿಕೆಯಾಗಿ ಕೊಟ್ಟರು. "ಹಿಂದಿ ಭಾಷೆಯೇ ರಾಷ್ಟ್ರಭಾಷೆ ಯಾಗಲು ಅರ್ಹ" ಎಂಬ ವಿಷಯವಾಗಿ ನನ್ನಿಂದ ಒಂದು ಲೇಖನ (ಹಿಂದಿಯಲ್ಲಿ) ಬರೆಯಿಸಿಕೊಂಡು ವಿದ್ಯಾರ್ಥಿ ಸಂಘದ ವಾರ್ಷಿಕೋತ್ಸವ ವಿಶೇಷ ಸಂಚಿಕೆಯಲ್ಲಿ ಪ್ರಕ ಟಿಸುವುದಾಗಿ ತಿಳಿಸಿದರು. "ನಿಮ್ಮನ್ನು ಈ ಸಂಸ್ಥೆ ಇನ್ನೂ ಚೆನ್ನಾಗಿ ಗೌರವಿಸಬೇಕಾಗಿತ್ತು" ಎಂದು ನೊಂದು ನುಡಿದರು. ಕೊನೆಯಲ್ಲಿ ಅವರು ಕೇಳಿದ ಪ್ರಶ್ನೆ ನನ್ನನ್ನು ಸಂದಿಗ್ಧಕ್ಕೊಳ ಪಡಿಸಿತು: "ಶಾಂತಿ ನಿಕೇತನದ ಬಗ್ಗೆ ನಿಮ್ಮ ಅಭಿಪ್ರಾಯವೇನು ? ಹೇಗೆನ್ನಿಸಿತು ?" ಈ ಪ್ರಶ್ನೆಯನ್ನು ನಾನು ನಿರೀಕ್ಷಿಸಿರಲಿಲ್ಲ. ಏನು ಹೇಳಲೂ ತೋಚದೆ ತಡವರಿಸುತ್ತ ಅವರ ಮುಖ ನೋಡಿದೆ. "ಆತ್ಮವಿಲ್ಲದ ದೇಹ-ರಸ ವಿಲ್ಲದ ಕಬ್ಬು-ಎಲ್ಲ ಕೆಲಸಗಳೂ ಯಾಂತ್ರಿಕ-ನೀರಸ" ಎಂದು ಎರಡೇ ಮಾತುಗಳಲ್ಲಿ ತಮ್ಮ ದುಃಖ ತೋಡಿಕೊಂಡರು. ನಾನೇನು ಹೇಳಲಿ ? ದೊಡ್ಡ ಸಂಸ್ಥೆ- ದೊಡ್ಡ ವಿಷಯ. ನನ್ನ ಮೌನವೇ ಅವರಿಗೆ ಸಮ್ಮತಿ ಎನಿಸಿರ ಬೇಕು. ಇದಕ್ಕೆ ಕಾರಣ ಕೇಳಬೇಕೆಂಬ ಇಚ್ಛೆ ಉಂಟಾಯಿತು. ಯಾಕೋ ಏನೋ ಕೇಳ ಲಿಲ್ಲ.

ಗುಜರಾತಿನ ಅಹಮದಾಬಾದಿನಲ್ಲಿಯೂ ನಾನು ಬುದ್ಧಿ ಧನತ್ರಿವೇದಿ ಅವರನ್ನು ಕಾರಣ ಕೇಳದೇ ಬಂದಿದ್ದೆ. ಮಹಾತ್ಮಾಗಾಂಧೀಜಿ ಅವರ ಸಾಬರಮತಿ ಆಶ್ರಮದ ಬಗ್ಗೆ ಬುದ್ಧಿ ಧನ ತ್ರಿವೇದಿ ಅವರು ವ್ಯಕ್ತಪಡಿಸಿದ ಅಭಿ ಪ್ರಾಯ ಹಾಗೂ ಗುರುದೇವ ರವೀಂದ್ರನಾಥ ಠಾಕೂರರ ಶಾಂತಿ ನಿಕೇತನದ ಬಗ್ಗೆ ಶ್ರೀಮತಿ ಮಂಜುರಾಣಿ ಸಿಂಹ ಅವರು ವ್ಯಕ್ತಪಡಿಸಿದ ಅಭಿಪ್ರಾಯಗಳು ಒಂದಕ್ಕೊಂದು ತಾಳ ಮೇಳಗಳಿಂತಿದ್ದವು.

*****

ಪಾಂಡಿಚೇರಿ ವಿಶ್ವವಿದ್ಯಾಲಯದ ವಿದ್ಯಾ ರ್ಥಿಗಳ ಸಭೆ. ಮೊದಲನೆ ಸಾಲಿನಲ್ಲಿ ಕುಳಿತಿದ್ದ ಅವರು ನನ್ನ ಗಮನ ಸೆಳೆದರು. ಸಾವಿರ ಜನರಲ್ಲಿ ಎದ್ದು ಕಾಣುವ ವ್ಯಕ್ತಿತ್ವ . ಹಣೆ ಯಲ್ಲಿ ಕಸ್ತೂರಿ ಚಂದನ, ಕೊರಳಲ್ಲಿ ಎರಡು ಮೂರು ವಿಧದ ರುದ್ರಾಕ್ಷಿ-ತುಳಸಿ ಮಾಲೆ ಗಳು. ಅರ್ಧ ತೋಳಿನ ಸ್ಲಾಗ್, ಪ್ಯಾಂಟುಗಳ ಅಚ್ಚ ಬಿಳಿ ಉಡುಪು. ಹೆಗಲಮೇಲೆ ನೇತು ಹಾಕಿದ್ದ ಕೈ ಮಗ್ಗದ ಕಾವಿಬಣ್ಣದ ಹೆಗಲ ಚೀಲ. ವಯಸ್ಸು ಮೂವತ್ತರ ಒಳಗಡೆ. ಎಲ್ಲರಿಗಿಂತ ಭಿನ್ನವಾಗಿ ಕಾಣುವ ಗೋಧಿ ಬಣ್ಣದ ಯಾರೀತ ? ಇಬ್ಬರ ದೃಷ್ಟಿಗಳೂ ಸಂಧಿಸಿ ಮುಗುಳ್ನಕ್ಕೆವು.

ನನ್ನ ಭಾಷಣ ಪೂರೈಸುತ್ತಲೇ ಹೊರಗೆ ಧಾವಿಸಿದೆ. ಅವರೂ ಕೂಡ ಬಾಗಿಲಲ್ಲಿ ನನ



## ಪುಸ್ತಕ ವಿಭಾಗ

ಗಾಗಿ ಕಾದು ನಿಂತಿದ್ದರು, "ಯುವರ್ ಟಾಕ್ ವಾಸ್ ಮಚ್ ಇಂಪ್ರೆಸಿವ್" ಎಂದೆನ್ನುತ್ತ ಕೈಕುಲುಕಿದರು. ಇಬ್ಬರೂ ಕ್ಯಾಂಟೀನಿನಲ್ಲಿ ಹೋಗಿ ಕುಳಿತೆವು. ವಿಳಾಸದ ಕಾರ್ಡ್ ತೆಗೆದು ಕೈಗಿತ್ತರು."ಎಡ್ವಿನ್ -ಎಫ್-ಬ್ರಿಯಾಂಟ್- ಎಂ. ಫಿಲ್.ಪಿ ಎಚ್‌ಡಿ ಕ್ಯಾಂಡಿಡೇಟ್- ಡಿಪಾರ್ಟಮೆಂಟ್ ಆಫ್ ಇಂಡೋ ಲ್ಯಾಂಗ್ವೇಜಸ್ ಆ್ಯಂಡ್ ಕಲ್ಚರ್ಸ್ -ಕೋಲಂಬಿಯ ಯೂನಿವರ್ಸಿಟಿ, ನ್ಯೂಯಾರ್ಕ -ಎನ್. ವೈ. ೧೦೦೨೭ (ಯು.ಎಸ್.ಎ).

ಅಮೆರಿಕ ಸಂಯುಕ್ತ ಸಂಸ್ಥಾನಗಳ ಕೋಲಂಬಿಯ ಯೂನಿವರ್ಸಿಟಿ ವತಿಯಿಂದ ಭಾರತೀಯ ಸಂಸ್ಕೃತಿ-ತತ್ವ ಶಾಸ್ತ್ರಗಳ ಅಧ್ಯಯನಕ್ಕಾಗಿ-ಸಂಶೋಧನೆಗಾಗಿ ಕಳುಹಿಸಲ್ಪಟ್ಟ ವಿದ್ಯಾರ್ಥಿ! ಕಾರ್ಯ ಬಾಹುಳ್ಯದಿಂದಾಗಿ ಇಬ್ಬರೂ ಹೆಚ್ಚು ಹೊತ್ತು ಕುಳಿತು ಮಾತನಾಡಲಾಗಲಿಲ್ಲ. ಪಾಂಡಿಚೇರಿಯಲ್ಲಾದ ಪ್ರಥಮ ಪರಿಚಯ ಇಷ್ಟೆ.

ಎರಡನೆಯ ಸಾರಿ ಕಡಲೂರಿನ ಜನ ನಿಬಿಡ ರಸ್ತೆಯಲ್ಲಿ ಇಬ್ಬರೂ ಆಕಸ್ಮಿಕವಾಗಿ ಭೇಟಿಯಾಗಿ ಕೈ ಕುಲುಕಿದೆವು. ಪರಸ್ಪರ ಯೋಗಕ್ಷೇಮ ವಿಚಾರಿಸಿಕೊಂಡೆವು. ಪಾಂಡಿಚೆರಿಯಲ್ಲಾದ ಪರಿಚಯ ಇಲ್ಲಿ ಸ್ನೇಹರೂಪಕ್ಕೆ ತಿರುಗಿತು. ಈ ಸ್ನೇಹ ಆತ್ಮೀಯ ರೂಪತಾಳಿ ಗಾಢ ಸಂಬಂಧ ಬೆಳೆದಿದ್ದು ಚಿದಂಬರಂ ನಟರಾಜ ದೇವಸ್ಥಾನದಲ್ಲಿ. ಸಾಯಂಕಾಲ ಆರತಿ ಸಮಯ. ತನ್ಮಯನಾಗಿ ಕಲಾತ್ಮಕವಾದ ಸುಂದರ ನಟರಾಜ ಮೂರ್ತಿಯನ್ನೇ ನೋಡುತ್ತಿದ್ದೆ. ಬೆನ್ನಮೇಲೆ ಕೈ ಬಿತ್ತು. ಹಿಂತಿರುಗಿ ನೋಡಿದರೆ ಎಡ್ವಿನ್ ಬ್ರಿಯಾಂಟ್!

ಆನಂದಾಶ್ಚರ್ಯದಲ್ಲಿ ಮುಳುಗಿದೆ. ಅವರು ಭಗವಾನ್ ನಟರಾಜನ ಮುಂದೆ ಕೈ ಮುಗಿದು ನಿಂತ ಭಂಗಿ, ಆರತಿ ತೀರ್ಥಪ್ರಸಾದಗಳನ್ನು ಸ್ವೀಕರಿಸಿದ ರೀತಿಗಳನ್ನು ನೋಡಿ ಭಾರತೀಯನೆನಿಸಿದ ನಾನು ನಾಚುವಂತಾಯಿತು. ಇಬ್ಬರೂ ಹೊರಗೆ ಬಂದು ದೇವಸ್ಥಾನದ ವಿಶಾಲ ಅಂಗಳದ ಕಲ್ಲು ಹಾಸಿನ ಮೇಲೆ ಕುಳಿತೆವು. ಕೇವಲ ಒಂದೇ ಒಂದು ಗಂಟೆ ಅವಧಿಯ ನಮ್ಮ ಇಬ್ಬರ ಮಿಲನ ಭಾವನಾತ್ಮಕವಾದುದು. ಎಲ್ಲಿಯ ಅಮೆರಿಕದ ನ್ಯೂಯಾರ್ಕ್-ಎಲ್ಲಿಯ ಭಾರತದ ಕೋಳಾಲ? ಬ್ರಿಯಾಂಟ್ ಯಾರು, ನಾನು ಯಾರು? ಎತ್ತಣ ಮಾಮರ, ಎತ್ತಣ ಕೋಗಿಲೆ? ಎಷ್ಟೆಲ್ಲ ಮಾತನಾಡಿದೆವು.

ಭಾರತೀಯ ಧರ್ಮ-ಸಂಸ್ಕೃತಿಗಳ ಬಗ್ಗೆ ಎಷ್ಟೊಂದು ತಿಳಿದುಕೊಂಡಿದ್ದಾರೆ! ಭಾರತಕ್ಕೆ ಅವರು ಬಂದದ್ದು ಕಲಿಯಲಿಕ್ಕಂತೆ. ಆದರೆ ಏನಿದೆ ಇಲ್ಲಿ ಕಲಿಯಲಿಕ್ಕೆ? ಸಾವಿರ ವರ್ಷಗಳ ಹಿಂದೆ ಬಂದಿದ್ದರೆ ಚೆನ್ನಾಗಿತ್ತಂತೆ- ಭಾರತದ ಇಂದಿನ ಸ್ಥಿತಿಯನ್ನು ಕಣ್ಣಾರೆ ನೋಡಿ ಮಮ್ಮಲ ಮರುಗಿದರು. ವೀಸಾದ ಅವಧಿಗೆ ಮುಂಚೆಯೇ ಭಾರತ ಬಿಡುತ್ತೇನೆಂದು ನೊಂದು ನುಡಿದರು.

ಕೈಗಡಿಯಾರ ನೋಡಿಕೊಂಡು, "ಏಳಿ, ಇಂದು ನನ್ನ ಅತಿಥಿಯಾಗಿ ನನ್ನ ಜೊತೆ ಊಟ ಮಾಡಿ ದಯವಿಟ್ಟು," ಎಂದೆನ್ನುತ್ತ ಕೈ ಹಿಡಿದು ಎಬ್ಬಿಸಿದರು. ಅಂದು ಅವರು ಚಿದಂ

ಬರಂನ ಒಂದು ದೊಡ್ಡ ಹೋಟೆಲಿನಲ್ಲಿ ಉಳಿದುಕೊಂಡಿದ್ದರು. ಆ ದೊಡ್ಡ ಹೊಟೇಲ್ ಊಟದ ರುಚಿ ನೋಡೋಣ ಎಂದು ಅವರನ್ನು ಹಿಂಬಾಲಿಸಿದೆ. ನನ್ನ ಊಹೆಯನ್ನು ತಲೆಕೆಳಗೆ ಮಾಡಿದ ಅವರು ನೇರವಾಗಿ ದೇವಸ್ಥಾನದ ಪ್ರಸಾದ ತಯಾರು ಮಾಡಿ ಮಾರುವ ಸ್ಥಳಕ್ಕೆ ಕರೆದೊಯ್ದರು. ನೆಲದ ಮೇಲೆ ಟಾವೆಲ್ ಹಾಸಿ ಕುಳ್ಳಿರಿಸಿ ಹೋದ ಅವರು ಪುಳಿಯೋಗರೆ, ಸಿಹಿ ಪೊಂಗಲ್, ಲಾಡು, ವಡೆ ಮೊಸರನ್ನದ ದೊನ್ನೆಗಳನ್ನು ತಂದಿದ್ದು ನೋಡಿ ಮೂಕ ವಿಸ್ಮಿತನಾದೆ.

ಪಾದಯಾತ್ರೆ ಮುಗಿಸಿ ಊರಿಗೆ ಹಿಂತಿರುಗಿದ ಮೇಲೆ ಬ್ರಿಯಾಂಟರಿಗೊಂದು ಪತ್ರ ಬರೆದು-ಕೊನೆಯಲ್ಲಿ "*How do you feel about India?*" ಎಂದು ಪ್ರಶ್ನಿಸಿದ್ದೆ. ಚಿದಂಬರಂ ದೇವಸ್ಥಾನದಲ್ಲಿ ತೆಗೆದಿದ್ದ ನನ್ನ ಭಾವಚಿತ್ರವನ್ನು ಲಗತ್ತಿಸಿ ದೀರ್ಘ ಪತ್ರ ಬರೆದು ನನ್ನ ಪ್ರಶ್ನೆಗೂ ಉತ್ತರಿಸಿದ್ದಾರೆ. ಅವರ ಆ ಪ್ರೀತಿಯ ಪತ್ರವನ್ನು ನಿಧಿಯೋಪಾದಿಯಲ್ಲಿ ರಕ್ಷಿಸಿ ಇಟ್ಟುಕೊಂಡಿದ್ದೇನೆ.

*****

ಸೂರತ್ ಪಟ್ಟಣದಲ್ಲಿಯೇ ಅಲ್ಲದೆ ಇಡೀ ಗುಜರಾತ್ ರಾಜ್ಯದ ಹೆಸರಾಂತ ರಾಜಕಾರಣಿ- ಸರ್ವೋದಯ ಕಾರ್ಯಕರ್ತರಾದ ಬಿಪಿನ್‌ಭಾಯಿ ದೇಸಾಯಿ ಅವರನ್ನು ಭೇಟಿ ಮಾಡಲು ಚಾರ್ ಬಟಾರ್ ರಸ್ತೆಯ ಅವರ 'ಮೈತ್ರಿ' ನಿವಾಸಕ್ಕೆ ಹೋದೆ. ಸಾಯಂಕಾಲ ಸುಮಾರು ನಾಲ್ಕು ಗಂಟೆ ಇರಬಹುದು. ಹೊರಗಡೆ ವರಾಂಡದಲ್ಲಿ ರಾಶಿ ಬಿದ್ದಿದ್ದ ಪಾದರಕ್ಷೆಗಳನ್ನು ನೋಡಿದರೆ ಒಳಗಡೆ ಯಾವುದೋ ಮಹತ್ವದ ಸಭೆ ನಡೆದಂತಿತ್ತು. ಸಿಪಾಯಿಯ ಸೂಚನೆಯಂತೆ ವರಾಂಡದಲ್ಲಿ ಅಂದಿನ ಆಂಗ್ಲ ದಿನಪತ್ರಿಕೆ ಓದುತ್ತಾ ಕುಳಿತೆ.

ಸ್ವಲ್ಪ ಹೊತ್ತಿನ ನಂತರ ಸಭೆ ಬರಖಾಸ್ತು ಆಗಿ ಅವರು ಹಾಗೂ ಅವರ ಆಪ್ತಸ್ನೇಹಿತರೊಬ್ಬರು ಇಬ್ಬರೇ ಉಳಿದರು. ಒಳಗೆ ಬರಹೇಳಿದರು. ತೂಗುಯ್ಯಾಲೆ ಮೇಲಿದ್ದರು. ನಮಸ್ಕರಿಸಿದೆ. ಕೂಡಲು ಹೇಳಿ ತಾವೂ ಉಯ್ಯಾಲೆಯಿಂದ ಇಳಿದು ಬಂದು ಪಕ್ಕದಲ್ಲಿ ಸೋಫಾದ ಮೇಲೆ ಕುಳಿತರು. ಎತ್ತರದ ನೀಳ ಕಾಯ. ಕೋಲು ಮುಖ. ಖಾದಿ ಜುಬ್ಬ ಪಾಯಿಜಾಮ. ಸಾವಕಾಶವಾಗಿ ನನ್ನ ಫೈಲನ್ನು ನೋಡಿ ಉಯ್ಯಾಲೆ ಮೇಲೆ ಕುಳಿತಿದ್ದ ತಮ್ಮ ಸ್ನೇಹಿತರಿಗೆ ಮೆಚ್ಚುಗೆಯ ಧ್ವನಿಯಲ್ಲಿ ವಿವರಿಸಿ, ತಮ್ಮದೇ ಆದ ಸರ್ವೋದಯ ವಿದ್ಯಾಸಂಸ್ಥೆಯ ಪ್ರಿನ್ಸಿಪಾಲರಿಗೆ ಫೋನ್ ಹಚ್ಚಿ ಬರಹೇಳಿದರು. ಪ್ರಶ್ನೆಗಳ ಮೂಲಕ ನನ್ನ ಪಾದಯಾತ್ರೆಯ ಉದ್ದೇಶ, ಗಾಂಧೀಜಿ, ಸರ್ವೋದಯಗಳ ಬಗ್ಗೆ ತಿಳಿದುಕೊಂಡರು. ಇಂದಿನ ರಾಜಕೀಯ ಸ್ಥಿತಿಗತಿಗಳ ಬಗ್ಗೆ ಅವರು ಕೇಳಿದ ಪ್ರಶ್ನೆಗಳಿಗೆ ಮೌನವೇ ನನ್ನ ಉತ್ತರವಾಯಿತು. ಭಾರತದ ಸ್ವಾತಂತ್ರ್ಯ ಹೋರಾಟದ ಬಗ್ಗೆ ಪ್ರಸ್ತಾಪಿಸಿ ನನ್ನ ಮೌನ ಮುರಿದರು. ಉತ್ಸುಕನಾದೆ. ಬಹಳ ಹೊತ್ತು ಮಾತನಾಡಿದೆವು.

ಮಾತಿನ ಭರಾಟೆಯಲ್ಲಿ ನಾಲ್ಕೈದು ಸಾರಿ ನನ್ನ ಬಾಯಿಂದ ವಂದೇ ಮಾತರಂ ಶಬ್ದ ಹೊರಬಿತ್ತು. ದೇಸಾಯಿ ಅವರಿಗೆ ಏನೆನ್ನಿಸಿತೋ ಯಾವ ಮೂಡಿನಲ್ಲಿ ಅವರು ಈ ಪ್ರಶ್ನೆ ಕೇಳಿದರೋ ಗೊತ್ತಿಲ್ಲ. "ವಂದೇ



# ಪುಸ್ತಕ ವಿಭಾಗ

ಮಾತರಂ ವಿಷಯದಲ್ಲಿ ನೀವು ಇಷ್ಟು ಒತ್ತು ಯಾಕೆ ಕೊಡುತ್ತಿದ್ದೀರಿ ?" ಎಂದು ಕೇಳಿಯೇ ಬಿಟ್ಟರು. ಕ್ಷಣಹೊತ್ತು ಗರಬಡಿದವನಂತೆ ಕುಳಿತೆ.

ಅಷ್ಟರಲ್ಲಿ ಚಹಾ ಬಿಸ್ಕೀಟ್ ಬಂತು. ನನ್ನ ಹೆಗಲು ಚೀಲ, ಫೈಲನ್ನು ಕೈಗೆ ತೆಗೆದುಕೊಂಡು ಎದ್ದು ನಿಂತೆ. ದೇಸಾಯಿ ಅವರ ಮುಖ ಬಾಡಿದ ಹೂವಿನಂತೆ ಮುದುಡಿಕೊಂಡಿತು. ಕೈಹಿಡಿದು ಕುಳ್ಳಿರಿಸಿದರು. ನನಗೂ ಅದೇ ಬೇಕಾಗಿತ್ತು. ಆವೇಶದಲ್ಲಿ ಹೊರಟು ನಿಂತಿದ್ದೇನೋ ನಿಜ- ಆದರೆ ದೇಸಾಯಿ ಅವರ ಪ್ರಶ್ನೆಗೆ ಉತ್ತರಿಸದೇ ಹೋಗಿದ್ದರೆ ಆತ್ಮವಂಚನೆಯಾಗುತ್ತಿತ್ತು. ನನ್ನ ಅದಮ್ಯ ಸ್ವಾಭಿಮಾನಕ್ಕೆ ಧಕ್ಕೆ ಬರುತ್ತಿತ್ತು. "ಕ್ಷಮಿಸಿ ಮಹಾಶಯರೆ, ನಿಮ್ಮ ಸ್ಥಾನ ಬಹುದೊಡ್ಡದು. ಅದನ್ನು ನಾನು ತಿಳಿದಿದ್ದೇನೆ. ನಿಮ್ಮ ಪ್ರಶ್ನೆಯೂ ಬಹು ಗಂಭೀರವಾದದ್ದು. ಉತ್ತರಿಸದಿದ್ದರೆ ಅದು ನನ್ನ ಆತ್ಮಹತ್ಯೆಯೇ ಸರಿ," ಎಂದು ಪ್ರಾರಂಭಿಸಿ, "ಬಾಬು ಬಂಕಿಮಚಂದ್ರರ ಆ 'ವಂದೇ ಮಾತರಂ' ಅಂದಿನ ಯುವಕರಾದ ನಮಗೆ ತಾರಕ ಮಂತ್ರವೂ ಆಗಿತ್ತು. ಆಸೇತು ಹಿಮಾಚಲ ಪರ್ಯಂತ ಪ್ರತಿಧ್ವನಿಸಿ ಆಳರಸರ ಎದೆ ನಡುಗಿಸಿತು. 'ವಂದೇ ಮಾತರಂ' ಹೇಳುತ್ತಲೇ ಬಿಸಿ ರಕ್ತದ ಯುವಕರು ತಮ್ಮ ಕೈಗಳಿಂದಲೇ ನೇಣಿನ ಕುಣಿಕೆಗಳನ್ನು ಬಿಗಿದುಕೊಂಡರು. ಅಂದಿಗಷ್ಟೆ ಅಲ್ಲ, ಇಂದಿಗೂ ಎಂದೆಂದಿಗೂ ಅದು ನಮ್ಮ ಉಜ್ವಲ ರಾಷ್ಟ್ರಾಭಿಮಾನದ ಸಂಕೇತವಾಗಿರುತ್ತದೆ. ಇಂದಿನ ಯುವ ಜನಾಂಗದ ಮುಂದೆ ಈ ಮಾತುಗಳನ್ನು ಹೇಳಲೆಂದೇ ನಾನು ಪಾದಯಾತ್ರೆ ಮಾಡುತ್ತಿದ್ದೇನೆ," ಎಂಬ ಎರಡೇ ಮಾತುಗಳಲ್ಲಿ ನನ್ನ ಉತ್ತರ ಪೂರೈಸಿ ಸುಮ್ಮನೇ ಕುಳಿತೆ.

ಅಷ್ಟರಲ್ಲಿ ಪ್ರಿನ್ಸಿಪಾಲರು ಬಂದರು. ಮಾರನೆದಿನ ಸಾಯಂಕಾಲಕ್ಕೆ ಕಾರ್ಯಕ್ರಮ ಗೊತ್ತಾಯಿತು. ದೇಸಾಯಿ ಅವರು ಬಲವಂತಮಾಡಿ ಊಟಕ್ಕೆ ಉಳಿಸಿಕೊಂಡರು. ಗುಜರಾತಿನ ಹೆಸರುವಾಸಿಯಾದ ಅಪೂಸಾ ಮಾವಿನ ಹಣ್ಣಿನ ರಸದ ರುಚಿ ತೋರಿಸಿದರು. ಆಟೋದಲ್ಲಿ ಕುಳ್ಳಿರಿಸಿ, "ನಾಳಿನ ನಿಮ್ಮ ಕಾರ್ಯಕ್ರಮಕ್ಕೆ ಇರಲಾಗುವುದಿಲ್ಲ ಎಂದು ವಿಷಾದಿಸುತ್ತೇನೆ. ಯಾಕೆಂದರೆ ನಾಳೆ ಅಹಮದಾಬಾದಿನಲ್ಲಿ ನಡೆಯುವ ಸರ್ದಾರ ಸರೋವರದ ವಿಷಯದ ಚರ್ಚಾ ಸಭೆಯಲ್ಲಿ ಭಾಗವಹಿಸಲು ಹೋಗುತ್ತಿದ್ದೇನೆ. ಕಾರ್ಯಕ್ರಮ ಯಶಸ್ವಿಯಾಗಲಿ- ನಿಮ್ಮ ಪಾದಯಾತ್ರೆ ನಿರ್ವಿಘ್ನವಾಗಿ ಸಾಗಲಿ ಎಂದು ಹಾರೈಸುತ್ತೇನೆ" ಎಂದೆನ್ನುತ್ತ ಆತ್ಮೀಯವಾಗಿ ಬೀಳ್ಕೊಟ್ಟರು.

## ಹೂಗೊಂಚಲು

ಅವರ್ಸಾದಿಂದ ಹೊರಟ ಬೆಳಗಿನ ಆ ವಾತಾವರಣ ಎಷ್ಟು ಉಲ್ಲಾಸಮಯ ! ಜೀವಮಾನವೆಲ್ಲ ಹೀಗೆಯೇ ನಡೆಯುತ್ತಿರಬೇಕು ಅನ್ನಿಸಿತು. ಐದು ಕಿಲೋಮೀಟರ್ ನಡೆದ ಮೇಲಂತೂ ಕಾಣುವ ಆ ದೃಶ್ಯ ಅವರ್ಣನೀಯ. ಎತ್ತರದ ಆ ಸ್ಥಳದ ಮೇಲೆ ನಡೆಯುತ್ತಾ ನಾಲ್ಕೂ ಕಡೆಯ ಸುಂದರ ದೃಶ್ಯಗಳನ್ನು ನೋಡುತ್ತಿದ್ದರೆ ಮೈಮನ ಮರೆಯುತ್ತದೆ. ಎಡಗಡೆ ಎರಡು ಬೆಟ್ಟಗಳ ಮಧ್ಯೆ

## ಪಾದಯಾತ್ರಿಕ ಕಂಡ ಭಾರತ

ನಿರ್ಮಿತವಾಗಿರುವ ಪ್ರಕೃತಿದತ್ತ ಸಮುದ್ರ ಆಖಾತ.

ಆ ಸಂತೋಷದಲ್ಲಿ ಹಾದಿ ನಡೆದಿದ್ದೇ ಗೊತ್ತಾಗಲಿಲ್ಲ. ಉತ್ತರ ಕನ್ನಡ ಜಿಲ್ಲೆಯ ಮಲೆನಾಡು ಪ್ರದೇಶಗಳಲ್ಲಿ ಜನ ಸಂಚಾರ ಬಹು ಕಡಿಮೆ. ಊರುಗಳು ಇರುವುದೂ ಗೊತ್ತಾಗುವುದಿಲ್ಲ. ಒಂದೇ ಕಡೆ ಮನೆಗಳಿದ್ದರೆ ತಾನೆ ? ಅಲ್ಲೊಂದು ಇಲ್ಲೊಂದು ಮನೆಗಳು. ಆಗಲೇ ಬೆಳಗಿನ ಹತ್ತು ಗಂಟೆ ಇರಬಹುದು. ಎದುರಿನಿಂದ ಬಂದ ಲಂಗ-ದಾವಣಿಯ ಪೋರಿಯೊಬ್ಬಳನ್ನು ಕೆಣಕಿ ತಮಾಷೆ ಮಾಡೋಣ ಎನ್ನಿಸಿತು. ಹತ್ತಿರ ಕರೆದು, "ಆಮ್ಮಾ ಪೋರಿಯಮ್ಮ ಚೆಂಡಿಯಾ ಊರು ಇಲ್ಲಿಂದ ಇನ್ನೂ ಎಷ್ಟು ದೂರ ಐತಮ್ಮ ? " ಎಂದು ಪ್ರಶ್ನಿಸಿದೆ. ಏಕೆಂದರೆ ನನ್ನ ಆ ದಿನದ ವಾಸ್ತವ್ಯ ಚೆಂಡಿಯಾ. ಘಾಟಿ ಹುಡುಗಿ ಹಾವಭಾವಗಳಿಂದ ಕೂಡಿದ ಅಣಕಿಸುವ ಕೀಚಲು ಧ್ವನಿಯಲ್ಲಿ, "ನಿನ್ನದು ಎಲ್ಲಾ ಯಜ್ಜ ?" ಎಂದು ಮರು ಪ್ರಶ್ನಿಸಿದಳು. ನಾನು ಅದೇ ಧಾಟಿಯಲ್ಲಿ "ಬೆಂಗಳೂರು ಕಣವ್ವ" ಅಂದೆ. ನಗುವಿನ ಅಲೆಯನ್ನೇ ಎಬ್ಬಿಸಿ ಉತ್ತರಿಸಿದಳು- "ಓ ನನ್ನ ಬೆಂಗಳೂರಜ್ಜ, ನಿನ್ನ ತಲೆ ಕೆಟ್ಟಿದೆಯೋ ಹೆಂಗೆ ? ಮುಂದೆ ಯಾವ ಚೆಂಡಿಯಾನೂ ಇಲ್ಲ ಮಂಡಿಯಾನೂ ಇಲ್ಲ. ನಿನ್ನ ಚೆಂಡಿಯಾ ಉಳಿಯಿತು ಎರಡು ಕಿಲೋಮೀಟರ್ ಹಿಂದೆ." ಕಮಂಗಿಯಂತೆ ಪೆಚ್ಚು ಮೋರೆ ಹಾಕಿ ನಿಂತ ನನ್ನನ್ನು ನೋಡಿ ಆವಳಿಗೆ ಮೋಜೆನಿಸಿರಬೇಕು. ಚಪ್ಪಾಳೆ ತಟ್ಟಿ ಕುಣಿದು, "ಹಂಗೆ ಆಗಬೇಕು- ನೀನಳಬೇಕು-ನಾನಗಬೇಕು; ಹಂಗ ಆಗಬೇಕು-......" ಎಂದು ಹಾಡುತ್ತಾ ಹೋದ ಆ ಪೋರಿಯನ್ನು ನೋಡುತ್ತಲೇ ನಿಂತೆ. ಜೊತೆಯಲ್ಲಿ ಕ್ಯಾಮರಾ ಒಯ್ದಿರಲಿಲ್ಲ.

*****

ಆಶೆವಾಡಿ ಊರಿನ ಎಲ್ಲರೂ ರಾಮಭಾಯಿ ಕಾಕಾನನ್ನು ಪ್ರೀತಿಸುತ್ತಾರೆ, ಗೌರವಿಸುತ್ತಾರೆ-ಹಣಕ್ಕಾಗಿ ಅಲ್ಲ, ಆತನ ಗುಣಕ್ಕಾಗಿ. ಗಂಡ-ಹೆಂಡತಿ, ಮಗ ಸೊಸೆ-ಒಬ್ಬನೇ ಮಗ. ಚಿಕ್ಕ ಚೊಕ್ಕ ಸಂಸಾರ. ಐದು ಬಿಘಾ ಜಮೀನಿನ ಒಡೆಯ. ಸ್ವಂತ ಮನೆ. ಯಾವ ಕೊರತೆಯೂ ಇಲ್ಲ. ಇದ್ದ ಒಂದೇ ಒಂದು ಕೊರತೆ ಎಂದರೆ ಹೆಂಡತಿ ಬಂದ ಮೇಲೆ ಮಗ ತನ್ನ ಮಾತನ್ನು ಕೇಳದೇ ಇರುವುದು. ಆದಕ್ಕೆ ಆವನು ಕೊಡುವ ಕಾರಣ ನಾಸಿಕ್ ಪಟ್ಟಣದಿಂದ ಕಲಿತ ಹೆಣ್ಣನ್ನು ತಂದಿದ್ದು. ಕರ್ನಾಟಕ ಅಂದರೆ ಆವನ ದೃಷ್ಟಿಯಲ್ಲಿ ಮಲೆಯಾಳ. ಅಂತೆಯೆ ಮಲೆಯಾಳದವರಿಗೆ ಮದ್ದು, ಮಾಟ, ಯಂತ್ರ ಮಂತ್ರಗಳು ಗೊತ್ತು ಎಂಬ ಭಾವನೆ.

ಬೆಳಗಿನಿಂದಲೂ ರಾಮಭಾಯಿ ಕಾಕ ನನ್ನ ಬೆನ್ನು ಹತ್ತಿದ್ದ ಹೇಗಾದರೂ ಮಾಡಿ ಆವನ ಮಗ ತನ್ನ ಮಾತನ್ನು ಕೇಳುವ ಹಾಗೆ ಮಾಡಬೇಕು ಎಂದು ರಾತ್ರಿ ಊಟ ಆದ ಮೇಲೆ ಹಾಸಿಗೆ ಹಾಸಿಕೊಟ್ಟು ನನ್ನ ಕಾಲಬಳಿ ಕುಳಿತವನು ರಾತ್ರಿ ೧೦ ಗಂಟೆ ಆಗಿ ತೂಕಡಿಕೆ ಬಂದರೂ ಪಟ್ಟು ಬಿಡಲಿಲ್ಲ. ಕಾಲು ಹಿಸುಕಿ ಸೇವೆ ಸಲ್ಲಿಸಿದ. ನನ್ನ ಮನಸ್ಸು ಕರಗಿತು. ಉಂಡಮನೆಗೆ ಏನಾದರೂ ಒಳ್ಳೆಯದು ಮಾಡಬೇಕಲ್ಲವೆ ? ಬಹಳ ಹೊತ್ತು ಆವನು ಕಾಡಿ ಬೇಡಿದ ಮೇಲೆ ಆಸಾಮಿ ಹದಕ್ಕೆ

ಬಂದಿದ್ದಾನೆ ಎಂದು ನಿಶ್ಚಯಿಸಿಕೊಂಡು ಹತ್ತಿರ ಕರೆದೆ. ಮೆಲ್ಲನೆ ಪಿಸು ಧ್ವನಿಯಲ್ಲಿ, "ಕಾಕಾ, ನಾನು ಹೇಳಿದ ಹಾಗೆ ಕೇಳು ತ್ತೀಯಾ ?" ಎಂದೆ. ಅವನಿಗೆ ಸ್ವರ್ಗವೇ ದೊರೆತಂತಾಯಿತು. "ನೀವು ಬಾವಿಗೆ ಬೀಳು ಅಂದರೆ ಬೀಳತೇನ್ರಿ," ಎಂದು ಕಾಲು ಒತ್ತು ವುದನ್ನು ಜೋರು ಮಾಡಿದ.

"ನಿಜವಾಗಿಯೂ....."

"ಭವಾನಿ ಆಣೆ ಹಾಕಿ ಹೇಳತೇನಿ ಸ್ವಾಮಿ"

"ನಿನ್ನ ಮಗ ನಿನ್ನ ಮಾತು ಕೇಳಲ್ಲ- ಹೌದು ಅಲ್ವೆ ?"

"ಹೌದು ಕಣ್ರೆ"

"ಹಾಗಾದರೆ ಒಂದು ಕೆಲಸ ಮಾಡು." ಬಹಳ ಹೊತ್ತು ಯೋಚಿಸುವವನಂತೆ ನಟಿಸಿ, "ನನಗೆ ಅನುಮಾನ ಕಾಕಾ- ನಿಜವಾಗಿಯೂ ಕೇಳತೀಯಾ ?"

"ಕೈಮೇಲೆ ಕೈ ಹಾಕಿ ಭಾಷೆ ಕೊಡತೇನ್ರಿ," ಎಂದು ನನ್ನ ಕೈಯನ್ನು ಹಿಡಿದ. ಅವನ ಕಾತರದಿಂದ ಕೂಡಿದ ಮುಖವನ್ನೇ ದೃಷ್ಟಿ ಸುತ್ತಾ ನುಡಿದೆ- "ಹಾಗಾದರೆ ಅವನ ಮಾತನ್ನೇ ನೀನು ಕೇಳಿಬಿಡು !".

** ** **

ಶ್ರೀ ಕೃಷ್ಣ ಜನ್ಮಾಷ್ಟಮಿ. ಗುಜರಾತಿನ ಸಡಗರ ಸಂಭ್ರಮಗಳಿಂದ ಕೂಡಿದ ಹಬ್ಬ. ವಾರ ವಿಡೀ ಆಚರಿಸುತ್ತಾರೆ. ಅಂದು ಪಾಡಿಯಾದನ ಪಿಸಾಮಾನ ಬಾಪು ಕ್ಷೇತ್ರದಲ್ಲಿ ಸುಮಾರು ಹತ್ತು ಸಾವಿರ ಭಕ್ತರು ಸೇರಿದ್ದರು. ಗುಜರಾತಿನ ನಾನಾ ಭಾಗಗಳಿಂದ ಬಂದಿದ್ದ ರಂಗು ರಂಗಿನ ಉಡುಗೆತೊಡುಗೆಯ ಹೆಣ್ಣು-ಗಂಡುಗಳು. ಕಾಲಿಡಲಿಕ್ಕೂ ಸ್ಥಳವಿಲ್ಲ. ಉಚಿತ ಊಟ ಪ್ರಸಾದ.

ದೊಡ್ಡ ಕಡಾಯಿಗಳಲ್ಲಿ ಬಿಸಿ ಬಿಸಿ ಚಹಾ ಯಾವಾಗಲೂ ಸಿದ್ಧ. ಎಷ್ಟು ಬೇಕಾದರೂ ಕುಡಿಯಬಹುದು. ಕ್ಷೇತ್ರಕ್ಕೆ ಬಂದ ತಕ್ಷಣ ಸ್ನಾನಮಾಡಿ, ಮಡಿಉಟ್ಟು, ವಿಶಾಲವಾದ ಹಜಾರದಲ್ಲಿ ಭಗವಾನ್ ಶ್ರೀ ಶಂಕರಾಚಾರ್ಯರ ತೈಲಚಿತ್ರದ ಎದುರು ಪ್ರಾರ್ಥನೆಗೆ ಕುಳಿತೆ. ಸುಮಾರು ಅರ್ಧ ಗಂಟೆ ಕಳೆದಿರಬಹುದು ಮಹದಾನಂದವಾಯಿತು. ಕಣ್ಣು ತೆರೆದೆ. ಆಶ್ಚರ್ಯ! ನಾನು ಹಾಸಿ ಕುಳಿತಿದ್ದ ಬಿಳಿ ಪಂಚೆಯ ಮೇಲೆ ನಾಣ್ಯ-ನೋಟುಗಳು ! ಮುಗ್ಧ ಕಾಥೆವಾಡಿ ಜನಗಳಿಗೆ ನಾನೊಬ್ಬ ದೊಡ್ಡ ಸಾಧುವಾಗಿ ಕಂಡಿದ್ದೆ. ಎಣಿಸಿದೆ. ೨೮ ರೂಪಾಯಿಗಳು ! !

*****

ಗುಜರಾತಿನ ಸೌರಾಷ್ಟ್ರದ ಲೋಲಿಯಾ ಪಾಠಶಾಲೆಯಲ್ಲಿ ನಾನು ನೋಡಿದ ದೃಶ್ಯ ಮನ ಕರಗುವಂತದು. ವಿಚಾರಣೀಯವಾದುದು.

ಪ್ರೈಮರಿ ಏಳನೇ ತರಗತಿ. ಮುಖ್ಯೋಪಾಧ್ಯಾಯರು ಆ ತರಗತಿಗೆ ಕರೆದೊಯ್ದರು. ಒಂದು ಮೂಲೆಯಲ್ಲಿ ೮-೧೦ ಹುಡುಗಿಯರು. ಬಿಳಿ-ಸೀರೆ ರವಿಕೆಗಳನ್ನು ತೊಟ್ಟು ತಲೆಮೇಲಿ ಮುಸುಕು ಹಾಕಿ ಅಲಾಯಿದ ಕುಳಿತಿದ್ದರು. ವಿಚಾರಿಸಲಾಗಿ 'ಮದುವೆ ಯಾದ ಹುಡುಗಿಯರು' ಎಂಬ ವಿಷಯ ತಿಳಿದು ಬಂತು. ಬಹಳ ದುಃಖವಾಯಿತು. ಆ ರಾತ್ರಿ ಒಂದಿಬ್ಬರು ಆ ಹುಡುಗಿಯರ ತಂದೆ

ತಾಯಂದಿರನ್ನು ನಾನು ಉಳಿದಿದ್ದ ಕಡೆಗೆ ಕರೆಸಿಕೊಂಡು ಆ ಬಗ್ಗೆ ಕೇಳಲಾಗಿ ಅವರು ಕೊಟ್ಟ ಉತ್ತರ, "ಸ್ವಾಮಿ, ನಾವು ಆರ್ಥಿಕವಾಗಿ ಹಿಂದುಳಿದವರು. ಹುಡುಗಿಯರಿಗೆ ಜಾಸ್ತಿ ವಯಸ್ಸಾಗಿ ಬೆಳೆದು ನಿಂತರೆ ಕೇಳಿದಷ್ಟು ವರದಕ್ಷಿಣೆ ತೆತ್ತು ಮದುವೆ ಮಾಡಬೇಕಾಗುತ್ತದೆ. ವರದಕ್ಷಿಣೆಯ ಪೈಶಾಚಿಕ ಪಿಡುಗಿನಿಂದ ಪಾರಾಗಲು ನಮಗೆ ಇರುವ ಒಂದೇ ಮಾರ್ಗ ಎಂದರೆ ಚಿಕ್ಕ ವಯಸ್ಸಿನಲ್ಲಿಯೇ ಮದುವೆ ಮಾಡಿಬಿಡುವುದು."

** ** **

ಗೋಮತಿ ದ್ವಾರಕೆಯಿಂದ ಬೇಟ್ ದ್ವಾರಕೆಗೆ ಹೋಗುವ ಮಾರ್ಗದಲ್ಲಿ ಜ್ಯೋತಿರ್ಲಿಂಗ ನಾಗೇಶ್ವರ ಮಹಾದೇವ ಕ್ಷೇತ್ರ ಸಿಗುತ್ತದೆ. ಬೇಟ್ ದ್ವಾರಕೆಗೆ ಹೋಗುವ ಯಾತ್ರಿಕರೆಲ್ಲರೂ ಮಹಾದೇವನ ದರ್ಶನ ಮಾಡುತ್ತಾರೆ. ದೇವಸ್ಥಾನದ ಧರ್ಮಶಾಲೆಯಲ್ಲಿ ಉಳಿದೆ. ಅರ್ಚಕರ ಮನೆಯಲ್ಲಿ ಊಟ. ಊಟ ಮಾಡಿ ರೂಮಿನಲ್ಲಿ ಏನೋ ಬರೆಯುತ್ತ ಕುಳಿತಿದ್ದೆ. ಚಿಲ್ಲರೆ ನಾಣ್ಯ ತುಂಬಿದ ದೊಡ್ಡ ತಲೆಮೂಟೆ ಗಾತ್ರದ ಚೀಲವೊಂದನ್ನು ಹೊತ್ತು ತಂದ ಅರ್ಚಕರು ನನ್ನ ಪಕ್ಕದಲ್ಲಿ ಇಳಿಸಿ, "ದಯವಿಟ್ಟು ಏನೂ ತಿಳಿದುಕೊಳ್ಳಬೇಡಿ. ನಿಮಗೂ ಬೇಜಾರು ಕಳೆಯುತ್ತೆ. ಐದು ರೂಪಾಯಿಗಳಿಗೆ ಒಂದರಂತೆ ಸಣ್ಣ ಪ್ಲಾಸ್ಟಿಕ್ ಕವರುಗಳಲ್ಲಿ ತುಂಬ ಬೇಕು," ಎನ್ನುತ್ತ ಹಲ್ಲುಗಿಂಜಿದರು.

ಬೆಳಿಗ್ಗೆ ನಾನು ಅವರ ಹತ್ತಿರ ಯಾವುದೋ ಮಾತಿಗೆ ಮಧ್ಯಾಹ್ನದ ಹೊತ್ತು ಮಲಗಿ ಅಭ್ಯಾಸವಿಲ್ಲ ಎಂದು ಹೇಳಿದ್ದೇ ತಪ್ಪಾಗಿತ್ತು. ಸಾಯಂಕಾಲ ೫ ಗಂಟೆಯವರೆಗೂ ನಾಣ್ಯ ಎಣಿಸಬೇಕಾಯಿತು. ಒಟ್ಟು ೩೫೦೦ ರೂಪಾಯಿಗಳು. ಆ ವಾರದ ಮಂಗಳಾರತಿ ಹಣ. ನೋಟುಗಳ ಲೆಕ್ಕ ಬೇರೆ. ಮಧ್ಯೆ ೨-೩ ಸಾರಿ ಬಿಸಿ ಬಿಸಿ ಚಹಾ ಕಳಿಸಿಕೊಟ್ಟು ಪುಸಲಾಯಿಸಿದ್ದರು. ಆದರೂ ಬಹಳ ಮೈ ನೋವಾಗಿತ್ತು. ಹೊರಗಡೆ ತಿರುಗಾಡಿ ಬರೋಣವೆಂದು ಹೊರಟೆ. ಗಲಾಟೆ ಮಾಡುತ್ತಿದ್ದ ತಮ್ಮಿಬ್ಬರು ಮಕ್ಕಳನ್ನು ಕರೆತಂದ ಅರ್ಚಕರು "ಕರ್ನಾಟಕದ ತಾತಾ-ತುಂಬ ಒಳ್ಳೆಯವರು. ಕಥೆ ಹೇಳುತ್ತಾರೆ, ಕೇಳುತ್ತಾ ನಿಧಾನವಾಗಿ ಮನೆಗೆ ಬನ್ನಿ," ಎಂದು ಹೇಳಿ ಅವರಿಬ್ಬರ ಕೈಗಳನ್ನೂ ನನ್ನ ಕೈಗಳಲ್ಲಿ ಗಂಟು ಹಾಕಿ ನಡೆದರು.

** ** **

ಹಿಮಾಚಲದ ವೈದ್ಯನಾಥ್-ಜಿಲ್ಲಾ ಮಂಡಿ. ರಾವಣನಿಗೂ ಶಿವಲಿಂಗಕ್ಕೂ ಸಂಬಂಧಿಸಿದ ಪುರಾತನ ಪುಣ್ಯ ಕ್ಷೇತ್ರ. ಕಪ್ಪು ಶಿಲೆಯ ಕಲಾತ್ಮಕವಾದ ಶಿವಮಂದಿರ. ಪುರಾತತ್ವ ಇಲಾಖೆಯಿಂದ ರಕ್ಷಿಸಲ್ಪಟ್ಟಿದೆ. ಕಾಲೇಜಿನಲ್ಲಿ ತಂಗಿದ್ದೆ. ಪಕ್ಕದಲ್ಲಿ ಆಳ ಕಣಿವೆ. ಸುತ್ತಲೂ ಪರ್ವತಗಳು. ಕಾಲೇಜು ಸೂಪರಿಂಟೆಂಡೆಂಟ್ ಶರ್ಮ ಅವರ ಮನೆಯ ಗಡದ್ದಾದ ಆತ್ಮೀಯ ಊಟ. ಪ್ರಶಾಂತ ಪ್ರಕೃತಿಯ ಮಧ್ಯೆ ಆ ರಾತ್ರಿ ಗಾಢನಿದ್ದೆ ತೆಗೆದು ಬೆಳಿಗ್ಗೆ ಎದ್ದಾಗ ತುಂಬ ಉಲ್ಲಸಿತನಾಗಿದ್ದೆ. ಸುಂದರ ಪ್ರಭಾತ. ಸಿಳ್ಳು ಹಾಕುತ್ತ ವರಾಂಡದಲ್ಲಿದ್ದ ಸಿಂಕಿನ ಕಡೆ ಹಲ್ಲುಜ್ಜಲು ಹೋದೆ. ಎದುರಿಗೆ ಮರದ ರೆಂಬೆಯ ಮೇಲೆ ಕುಳಿತಿದ್ದ ಗಡವ ಮಂಗಣ್ಣ ಕಣ್ಣಿಗೆ ಬಿದ್ದ. ಸ್ವಲ್ಪ ಹೊತ್ತು ಅದರ ಜೊತೆ ಚಂದದ ಚಕ್ಕಂದವಾಡುತ್ತ ಪುಕ್ಕಟೆ ಮನರಂಜನೆ



## ಪುಸ್ತಕ ವಿಭಾಗ

ಪಡೆದೆ. ಮುಖ ತೊಳೆದು ಹಿಂತಿರುಗಿದರೆ ಕಟಕಟೆಯ ಮೇಲೆ ಹಾಕಿದ್ದ ಟಾವೆಲ್ ಮಂಗ ಮಾಯವಾಗಿತ್ತು! ಕೀಚಲು ಧ್ವನಿ ಬಂದತ್ತ ನೋಡಿದರೆ ಎತ್ತರದ ಮರದ ತುದಿಯಲ್ಲಿ ಹಲ್ಲು ಗಿಂಜಿ ಅಣಕಿಸುತ್ತಿರುವ ಮಂಗಣ್ಣ!! ನಾನು ಸುತ್ತಿಕೊಂಡಿದ್ದ ರೀತಿಯಲ್ಲಿಯೇ ತಲೆಗೆ ಪೇಟಸುತ್ತಿ ಅಣಕಿಸಿ ನಕಲುಮಾಡಿ ಕ್ಷಣಾರ್ಧದಲ್ಲಿ ಮಾಯವಾಯಿತು.

** *** **

ಸಿಮ್ಲಾದಿಂದ ಮುಂದೆ ಕಂದಘಾಟ ಕಣಿವೆ. ಪಿ.ಡಬ್ಲು.ಡಿ. ವಿಶ್ರಾಂತಿ ಗೃಹದಲ್ಲಿ ತಂಗಿದ್ದೆ. ಅಧಿಕಾರಿಯೊಬ್ಬರು ಬಹಳ ಆತ್ಮೀಯವಾಗಿ ಉಪಚರಿಸಿದರು. ರಾತ್ರಿ ನನ್ನೊಡನೆ ಮಾತನಾಡುತ್ತ- ಮುಂದೆ ಸೋಲನ್ ಪಟ್ಟಣದ ಹತ್ತಿರ ತೋಟಗಾರಿಕೆ ಇಲಾಖೆಯ ಸಂಶೋಧನಾ ಕೇಂದ್ರ ಇರುವುದಾಗಿಯೂ ನಮ್ಮ ಕರ್ನಾಟಕದವರೇ ಅದರ ಡೈರೆಕ್ಟರ್ ಆಗಿರುವುದಾಗಿಯೂ ಹೇಳಿ ಪೂರ್ಣ ಮಾಹಿತಿ ನೀಡಿದರು.

ಮಾರನೇ ದಿನ ನಮ್ಮವರೇ ಆದ ಕರ್ನಾಟಕದವರೊಬ್ಬರನ್ನು ಭೇಟಿಯಾಗಿ ಪರಿಚಯ ಮಾಡಿಕೊಳ್ಳುವ ಅವಕಾಶ ದೊರಕುತ್ತದಲ್ಲ ಎಂಬ ಸಂತೋಷದಿಂದ ಆ ರಾತ್ರಿ ಕಳೆದೆ. ಸೋಲನ್ ಪಟ್ಟಣಕ್ಕೆ ಎರಡು ಕಿಲೋಮೀಟರ್ ಮುಂಚೆಯೇ ಸಂಶೋಧನಾ ಕೇಂದ್ರದ ದೊಡ್ಡ ಫಲಕ ಕಾಣಿಸಿತು. ವಿಶಾಲ ಜಾಗದಲ್ಲಿರುವ ಭಾರಿ ಕಟ್ಟಡಗಳು. ಗೇಟು ತೆರೆದಿತ್ತು. ನಮ್ಮ ಸ್ವಂತ ಮನೆಯೋ ಎಂಬಂತೆ ಸಲುಗೆಯಿಂದಲೇ ಗೇಟಿನ ಒಳಗಡೆ ಕಾಲಿರಿಸಿದೆ. ಸಿಪಾಯಿ ಓಡಿ ಬಂದು ತಡೆದ. ಹಲ್ಲುಮುರಿಯುವಷ್ಟು ಸಿಟ್ಟು ಬಂತು. ಕರ್ನಾಟಕದವನು ಎಂದು ಪರಿಚಯ ಹೇಳುತ್ತಲೇ ಪ್ರಸನ್ನನಾಗಿ ಕೈ ಮುಗಿದು ಡೈರೆಕ್ಟರ್ ಅವರ ಕಾರ್ಯಾಲಯದ ಮುಂದಿನ ಕುರ್ಚಿಯಲ್ಲಿ ಕುಳ್ಳಿರಿಸಿದ.

ಸ್ವಲ್ಪ ಹೊತ್ತಿನಲ್ಲಿಯೇ ಕಾರಿನ ಹಾರನ್ ಶಬ್ದ ಕೇಳಿದ ಸಿಪಾಯಿ ತಮ್ಮ ಸಾಹೇಬರು ಬಂದ ಸೂಚನೆ ಕೊಟ್ಟು ಓಡಿದ. ಉಡುಪಿನ ಓರೆಕೋರೆಗಳನ್ನು ಸರಿಪಡಿಸಿಕೊಂಡು ಎದ್ದು ನಿಂತೆ. ಅತ್ಯಾಧುನಿಕ ಪಾಶ್ಚಾತ್ಯ ಶೈಲಿಯ ತುಂಬು ಸೂಟಿನ ಕರ್ನಾಟಕದ ಸಾಹೇಬರು ಕಾರಿನಿಂದ ಇಳಿದಕೂಡಲೇ ನಮಸ್ಕರಿಸಿದೆ. ನಾನಿನ್ನೂ ಬಾಯೇ ಬಿಟ್ಟಿರಲಿಲ್ಲ. ಅಲ್ಲಿದ್ದವರೆಲ್ಲರೂ ಬೆಚ್ಚಿ ಬೀಳುವಂತೆ, ``How did you enter into the premises you bloody beggar? Get out first" ಎಂದು ಗರ್ಜಿಸಿ ಸಿಪಾಯಿಯ ಕಡೆ ಕಣ್ಣು ಬಿಟ್ಟರು. ಪಾಪ, ಅವನಿಗಾಗಲೇ ನಡುಕ ಉಂಟಾಗಿತ್ತು. ತೊದಲುತ್ತಲೇ ಇವರು ಕರ್ನಾಟಕದವರು ಎಂದು ಸಮಜಾಯಿಷಿ ಹೇಳಲು ಪ್ರಯತ್ನಿಸಿದ. ಇನ್ನೂ ಉಗ್ರರಾದರು. "ಇವರೆಲ್ಲ ಕಾಸುಕೇಳಲು ಬಂದ ಕಳ್ಳ ಕೊರಮರು-ಮೊದಲು ಗೇಟಿನಿಂದ ಆಚೆ ಓಡಿಸು" ಎಂದವರೇ ಸಿಗಾರ್ ಹಚ್ಚಿ ಆಫೀಸಿನ ಒಳನಡೆದರು.

** *** **

ಖುರ್ದಾ ಒರಿಸ್ಸಾ ರಾಜ್ಯದ ಒಂದು ಜಿಲ್ಲಾ ಕೇಂದ್ರ. ದೊಡ್ಡ ವ್ಯಾಪಾರ ಸ್ಥಳ. ಬಂದವನೇ ನೇರವಾಗಿ ಎನ್.ಎ.ಸಿ. ಅಧ್ಯಕ್ಷ ಮಿತ್ರಾ ಅವರ ಮನೆಗೆ ಹೋದೆ. ನೂರಾರು ಜನರ ಮಧ್ಯೆ ಕಾರ್ಯ ಮಗ್ನರಾಗಿದ್ದರೂ ನನ್ನನ್ನು ವಿಚಾರಿಸಿ

ಕೊಂಡು ತಮ್ಮ ಸ್ನೇಹಿತರೊಬ್ಬರ ಜೊತೆ ಮಾಡಿ ಸ್ಕೂಟರಿನಲ್ಲಿ ವಿಶ್ರಾಂತಿ ಗೃಹಕ್ಕೆ ಕಳುಹಿಸಿಕೊಟ್ಟರು.

ಎನ್.ಎ.ಸಿ. (*Notified Area council*) ಕಾರ್ಯಾಲಯದ ಎದುರಿಗೇ ಉನ್ನತ ಮಟ್ಟದ ವಿಶ್ರಾಂತಿ ಗೃಹ. ಸುಸಜ್ಜಿತವಾದ ಕೊಠಡಿ. ಹೋಟೆಲಿನಲ್ಲಿ ಊಟಕ್ಕೂ ಹೇಳಿ ಕಳಿಸಿದ್ದರು. ಬಟ್ಟೆ ಒಗೆಯುವುದು, ಸ್ನೇಹಿತರಿಗೆ-ಮನೆಯವರಿಗೆ ಪತ್ರ ಬರೆಯುವ ಕೆಲಸವಿದ್ದುದರಿಂದ ಎಲ್ಲೂ ಹೊರಗೆ ಹೋಗಲಿಲ್ಲ. ಸಾಯಂಕಾಲ ನಾಲ್ಕು ಗಂಟೆ ಸುಮಾರಿಗೆ ಮಿತ್ರಾ ತಮ್ಮ ನಾಲ್ಕಾರು ಜನ ಸ್ನೇಹಿತರೊಡನೆ ನಾನಿದ್ದ ಕೊಠಡಿಗೇ ಬಂದರು. ಪತ್ರಿಕಾ ಪ್ರತಿನಿಧಿಯೊಬ್ಬರನ್ನೂ ಕರೆತಂದಿದ್ದರು. ನನ್ನ ಫೈಲನ್ನೆಲ್ಲ ಕೂಲಂಕಷವಾಗಿ ನೋಡಿ, ವಿಚಾರಿಸಿ ತಿಳಿದುಕೊಂಡರು. ನನ್ನ ಉದ್ದೇಶ-ಪಾದಯಾತ್ರೆಯ ಬಗ್ಗೆ ಹರ್ಷ ವ್ಯಕ್ತಪಡಿಸಿ ಬೆಳಗಿನಿಂದ ಬಿಡುವಿಲ್ಲದ ಕಾರ್ಯಕ್ರಮಗಳಿಂದಾಗಿ ಸರಿಯಾಗಿ ಉಪಚರಿಸಲಾಗದ್ದಕ್ಕೆ ವಿಷಾದಿಸಿದರು. "ರಾಜಕಾರಣಿಗಳೇ ಹಾಗೆ. ಕೆಲವು ಸಮಯ ತಮ್ಮ ಹೆಂಡಂದಿರನ್ನೇ ಮರೆತು ಬಿಡುತ್ತಾರೆ," ಎಂದು ನಗೆಯಾಡಿದರು.

ಅವರ ಪ್ರೀತಿಪೂರ್ವಕ ಸಲುಗೆ, ಸೌಜನ್ಯಗಳಿಗೆ ಮಾರುಹೋದೆ. ತಮ್ಮ ಸ್ನೇಹಿತರೆಲ್ಲರೊಡನೆ ಸಮಾಲೋಚಿಸಿ ಮಿತ್ರಾ ಆ ರಾತ್ರಿಯ ಕಾರ್ಯಕ್ರಮಕ್ಕೆ ನನ್ನನ್ನು ಆಹ್ವಾನಿಸುತ್ತ, "ಹೋಟೆಲ್ ಸಿಕಂದರ್‌ದಲ್ಲಿ ನಿಮಗೆ ಒಂದು ಸಣ್ಣ ಸತ್ಕಾರಕೂಟ ಏರ್ಪಡಿಸಬೇಕೆಂದಿದ್ದೇವೆ. ದಯವಿಟ್ಟು ಬಂದು ಭಾಗವಹಿಸಬೇಕು. ೮ ಗಂಟೆಗೆ ಸರಿಯಾಗಿ ವಾಹನ ಕಳುಹಿಸುತ್ತೇವೆ. ಎಲ್ಲೂ ಹೊರಗೆ ಹೋಗಬೇಡಿ" ಎಂದು ಕೈ ಜೋಡಿಸಿದರು. ಸರಿ. ನನ್ನ ಸಿದ್ಧತೆ ಪ್ರಾರಂಭವಾಯಿತು. ಮುಖಕ್ಷೌರ ಮಾಡಿಕೊಂಡು ಪುಡಿ ಮಾಡಿದ್ದ ಬಟ್ಟೆಗಳನ್ನು ಮಡಿಸಿ, ಗಾಂಧಿ ಇಸ್ತ್ರಿ ಮಾಡಿ, ೮ ಗಂಟೆ ಹೊತ್ತಿಗೆಲ್ಲ ಸಿದ್ಧನಾದೆ. ಮಂಚದ ಮೇಲೆ ತಣ್ಣನೆಯ ಫ್ಯಾನಿನ ಕೆಳಗೆ ಅಂಗಾತ ಮಲಗಿ ಸತ್ಕಾರಕೂಟದ ಭಾಷಣದ ಬಗ್ಗೆ ಚಿಂತಿಸತೊಡಗಿದೆ. ಗೋಡೆ ಗಡಿಯಾರ ಬೆಳಗಿನ ಜಾವ ನಾಲ್ಕು ಗಂಟೆ ಹೊಡೆದಾಗಲೇ ಎಚ್ಚರ! ಬೆಳಿಗ್ಗೆ ನಾನು ಹೋಗುವ ದಾರಿಯಲ್ಲಿಯೇ ಬಲಗಡೆ ಹೋಟೆಲ್ ಸಿಕಂದರದ ಭಾರಿ ಸೈಜಿನ ಬೋರ್ಡು ಕಾಣಿಸಿತು.

*****

ತೆಕ್ಕಲಿ ತಾಲೂಕು ಸ್ಥಳ. ನಾನು ಹೋದಾಗ ಎಲ್ಲೆಲ್ಲೂ ಚುನಾವಣೆ ಅರ್ಭಟ. ೧೨ ಗಂಟೆವರೆಗೆ ಕುಡಿಯಲು ನೀರಿಗೂ ಪರದಾಡಬೇಕಾಯಿತು. ಆದಷ್ಟು ಜಾಗ್ರತೆ ಆ ನರಕ ಸದೃಶ ಜಾಗಬಿಟ್ಟು ಹೋಗಬೇಕು ಎಂಬ ಮನಸ್ಸಾಯಿತು. ಅಲ್ಲಿಗೆ ಒಂದೂವರೆ ಕಿಲೋಮೀಟರ್ ದೂರದಲ್ಲಿ ಶ್ರೀರಾಮಕೃಷ್ಣ ಆಶ್ರಮ ಇರುವ ವಿಷಯ ಕಾಲೇಜು ವಿದ್ಯಾರ್ಥಿಯೊಬ್ಬನಿಂದ ತಿಳಿದು ವಿಚಾರಿಸುತ್ತಲೇ ಹೊರಟೆ.

ಸಣ್ಣ ತಾರಸಿ ಕಟ್ಟಡ. ಸುತ್ತಲೂ ಕಂಪೌಂಡು. ಕಟ್ಟಡದ ಮೇಲೆ ಭಗವಾ ಧ್ವಜ. ಗೇಟು ತೆರೆದೇ ಇತ್ತು. ಒಳಹೋದೆ. ಯಾರ ಸುಳಿವೂ ಇಲ್ಲ. ನೀರವ ನಿಶ್ಯಬ್ಧ. ವಾತಾವರಣವೆಲ್ಲ ಅಗರಬತ್ತಿಯ ಸುವಾಸನೆಯಿಂದ ತುಂಬಿತ್ತು. ಕಟ್ಟಡದ ಬಾಗಿಲೂ ತೆರೆದಿತ್ತು. ಇಣುಕಿ ನೋಡಿದೆ. ಕಪ್ಪು ಮಂದಾಸನದ ಮೇಲೆ ಹೂಮಾಲೆಗಳಿಂದ ಅಲಂಕೃತವಾದ



# ಪುಸ್ತಕ ವಿಭಾಗ

ಭಾವಚಿತ್ರಗಳು. ಶ್ರೀ ರಾಮಕೃಷ್ಣ ಪರಮಹಂಸ-ಶ್ರೀಮಾತೆ ಶಾರದಾ ದೇವಿ-ಸ್ವಾಮಿ ವಿವೇಕಾನಂದ. ನಿಶ್ಚಲವಾಗಿ ಉರಿಯುತ್ತಿದ್ದ ಎರಡು ನೀಲಾಂಜನಗಳ ಮಂದ ಪ್ರಕಾಶದಲ್ಲಿ ತದೇಕ ಚಿತ್ತನಾಗಿ ಆ ಮಹಾನ್ ಚೇತನಗಳನ್ನೇ ದಿಟ್ಟಿಸುತ್ತ ಭಾವಪರವಶನಾಗಿ ಸಾಷ್ಟಾಂಗವೆರಗಿದೆ. "ವಸ್ತಿರಾ. ಲೇಯಂಡಿ" ಎಂಬ ಮೃದು ಸ್ವರ ಕೇಳಿದಾಗಲೇ ಎಚ್ಚರ. ಸಾದುಗಪ್ಪಿನ ಸಣಕಲು ದೇಹ. ಹಣೆಯಲ್ಲಿ ವಿಭೂತಿ ಮಧ್ಯೆ ಅಗಲ ಕುಂಕುಮ. ಅರ್ಧ ಕಚ್ಚೆ ಹಾಕಿ ಉತ್ತರೀಯ ಹೊದ್ದಿದ್ದರು. ಹತ್ತಿರ ಹತ್ತಿರ ಎಪ್ಪತ್ತರ ಆದರಣೀಯ ವ್ಯಕ್ತಿತ್ವ. ಪಾದಮುಟ್ಟಿ ನಮಸ್ಕರಿಸಲು ಹೋದೆ. ತಡೆದು ಅಪ್ಪಿಕೊಂಡರು.

ಅವರ ಸೂಚನೆಯಂತೆ ಕೈಕಾಲು ತೊಳೆದು ಬಂದೆ. ಮುಖ್ಯ ಕಟ್ಟಡಕ್ಕೆ ಸ್ವಲ್ಪ ದೂರದಲ್ಲೇ ಅಡಿಗೆ ಮನೆ-ಊಟದ ಮನೆ ಎಲ್ಲವೂ. ನಾನು ಕೈಕಾಲು ತೊಳೆದು ಬರುವಷ್ಟರಲ್ಲಿ ಅಗ್ರ ಬಾಳೆ ಎಲೆ ಹಾಸಿ ಮಣೆ ಹಾಕಿದ್ದರು. ಊಟ ಬಡಿಸುವಾಗ ಏನವರ ಉತ್ಸಾಹ! ಏನವರ ಸಂತೋಷ! ಅನ್ನ-ಪರಪು-ಮಜ್ಜಿಗೆ ಮೃಷ್ಟಾನ್ನ ಭೋಜನವಾಯಿತು. ಮುಖ್ಯ ಕಟ್ಟಡದಲ್ಲಿ ಮಂದಲಿಗೆ ಚಾಪೆ ಹಾಸಿ ವಿಶ್ರಮಿಸಲು ಹೇಳಿ ಹೊರಗಡೆ ಜಗುಲಿಯ ಮೇಲೆ ಹೋಗಿ ಕುಳಿತರು. ನಾನು ಸುಮ್ಮನೆ ಮಲಗಿದ್ದೆ ಅಷ್ಟೆ. ನಿದ್ದೆ ಮಾಡಿರಲಿಲ್ಲ.

ಶಿಷ್ಯನೊಬ್ಬನ ಜೊತೆ ಅವರು ತಗ್ಗಿದ ಧ್ವನಿಯಲ್ಲಿ ಮಾತನಾಡುತ್ತಿದ್ದರೂ ನನಗೆ ಸ್ಪಷ್ಟವಾಗಿ ಕೇಳಿಸುತ್ತಿತ್ತು. ಕೊನೆಯಲ್ಲಿ ಹೇಳಿದ ಅವರ ದೃಢ ನಿರ್ಧಾರದ ಮಾತುಗಳು- "ಈಗ ಹೊಸದಾಗಿ ನನಗೊಬ್ಬನಿಗೆ ಅನ್ನಕ್ಕಿಟ್ಟುಕೊಳ್ಳುವ ಆಗತ್ಯವೇನಿಲ್ಲ. ನನಗೆ ಹಸಿವೂ ಇಲ್ಲ- ತೃಪ್ತಿಯಾಗಿದೆ. ಇನ್ನೇನಿದ್ದರೂ ಸಾಯಂಕಾಲವೇ." ನೋಡಿ ಹೀಗಿದ್ದಾರೆ ನಮ್ಮ ಸಿಗ್ಗಲಪಲ್ಲಿ ಸಿಂಹಾಚಲಂ! ಆಸ್ತಿಯ ಅರ್ಧಭಾಗ ಮಾರಿ ಬಂದ ಹಣದಲ್ಲಿ ರಾಮಕೃಷ್ಣ ಆಶ್ರಮ ಸ್ಥಾಪಿಸಿ ಬೆಳಿಗ್ಗೆ-ಸಾಯಂಕಾಲ ತಮಗೆ ತಿಳಿದಹಾಗೆ ಪೂಜೆ ಆರತಿ ಮಾಡಿಕೊಂಡು ಒಬ್ಬಂಟಿಗರಾಗಿ ವಿರಕ್ತ ಜೀವನ ನಡೆಸುತ್ತಿದ್ದಾರೆ.

*****

ಆಂಧ್ರ ಪಾದಯಾತ್ರೆಯ ಕೊನೆಯ ದಿನ. ನಗರಿ ಎಂಬ ಸಣ್ಣ ಹಳ್ಳಿಯ ಆಂಗ್ಲ ಕಾನ್ವೆಂಟ್ ಸ್ಕೂಲಿನಲ್ಲಿ ಅನಿವಾರ್ಯವಾಗಿ ಉಳಿಯುವ ದೌರ್ಭಾಗ್ಯ ನನ್ನದಾಯಿತು. ದೊಡ್ಡ ಹಾಲ್ ಒಂದನ್ನು ಪ್ಲಾಸ್ಟಿಕ್ ಹಾಳೆಯಿಂದ ನಾಜೂಕಾಗಿ ವಿಂಗಡಿಸಿರುವ ನಾಲ್ಕು ಗೂಡುಗಳಲ್ಲಿ ಪ್ರಾಥಮಿಕ ನಾಲ್ಕು ತರಗತಿಗಳು. ಮಧ್ಯಾಹ್ನ ೩ ಗಂಟೆ ಸಮಯದಲ್ಲಿ ಊಟ ಮಾಡಿ ಮೊಗಸಾಲೆಯಲ್ಲಿ ವಿಶ್ರಮಿಸುತ್ತಿದ್ದವನಿಗೆ, ಚಿಕ್ಕ ವಯಸ್ಸಿನ ಶಿಕ್ಷಕಿಯ ಬೆತ್ತದ ಏಟಿನ ಜೊತೆಗೆ ನತದೃಷ್ಟ ಬಾಲಕನ ಚೀರಾಟವೂ ಕೇಳಿ ಬಂತು. ಆ ಬಾಲಕನ ಮಹಾಪರಾಧ ಏನೆಂದರೆ ``Jack and Jill went up the hill" ನ ತಪ್ಪು ಉಚ್ಚಾರಣೆ. ಅವಳು ಹೊಡೆಯುತ್ತಲೇ ಹೋದಳು, ಇವನು `Went up' ಗೆ ಬದಲಾಗಿ 'ಯುಂಕಟಪ್ಪ' ಹೇಳುತ್ತಲೇ ಹೋದ. ನನಗೆ ಅರಿವಿಲ್ಲದಂತೆಯೇ ನನ್ನ ಬಾಯಿಂದ ಹೊರಬಿದ್ದ ಉದ್ಗಾರ: "ಆಯ್ಯೋ ದೇವರೇ".

ಸ್ವಾತಂತ್ರ್ಯೋತ್ತರ ಭಾರತದ ಅತಿ ದೊಡ್ಡ ದುರಂತ ಅಂದರೆ ಹಳ್ಳಿ ಹಳ್ಳಿಗಳಲ್ಲಿಯೂ ಬೆಳೆಯುತ್ತಿರುವ ಆಂಗ್ಲ ಮಾಧ್ಯಮ ಶಾಲೆಗಳೆಂಬ ಈ ಪಾಪಾಸ್ ಕಳ್ಳಿಗಳು. ನೀರು-ಗೊಬ್ಬರ ಕೇಳುವುದೇ ಇಲ್ಲ. ತಂತಾನೆ ಪಡೆದುಕೊಳ್ಳುತ್ತವೆ. ಅವುಗಳ ಸ್ಥಾಪಕರು ಹೆಮ್ಮೆಯಿಂದ ಹೇಳಿಕೊಳ್ಳುವುದು "ಸಮಾಜ ಬಯಸುತ್ತದೆ" ಎಂದು. ಸಿನಿಮಾದವರೂ ಇದನ್ನೇ ಹೇಳುವುದು: ಗಾಳ ಹಾಕಿ ಮೀನು ಹಿಡಿಯುವವನೂ ಇದನ್ನೇ ಹೇಳುವುದು. "ನಾನೇನು ಮಾಡಲಿ? ಮೀನು ಎರೆಹುಳುವನ್ನು ಬಯಸುತ್ತದೆ" ಎಂದು.

** ** **

ರಾಮೇಶ್ವರದಿಂದ ಕನ್ಯಾಕುಮಾರಿಗೆ ಬರಬೇಕಾದರೆ ಸಮುದ್ರ ತೀರದ ಕಾಡು ರಸ್ತೆಯನ್ನೇ ಹಿಡಿದು ನಡೆದೆ ತೀರ ಪ್ರದೇಶದ ಪರಿಚಯಕ್ಕಾಗಿ. ಪೂರಾ ಊಸರು ಭೂಮಿ. ಸಿಹಿ ನೀರಿಗೆ ಅಭಾವ. ಎತ್ತ ನೋಡಿದರೂ ತಾಟಿ ನಿಂಗಿನ ಮರಗಳು. ಇದರ ಗರಿಗಳ ಉಪ ಕಸುಬು ಹೆಚ್ಚು ಜನಗಳ ಜೀವನೋಪಾಯ. ಭಾಷಾ ತೊಂದರೆ ಬಂದರೂ ಎದೆಗುಂದದೆ ಹೇಗೋ ನಿಭಾಯಿಸಿದೆ. ಎಲ್ಲ ತಮಿಳುಮಯ. ಕೆಲವು ಕಡೆ ಪಾದಯಾತ್ರೆ ಎಂಬ ಅಭಿಮಾನದಿಂದಲೋ ಕನಿಕರದಿಂದಲೋ ಇಂಗ್ಲೀಷಿನಲ್ಲಿ ಮಾತನಾಡಲು ಅವಕಾಶಕೊಟ್ಟರು. ಹೆಚ್ಚುಕಡೆ ತಮಿಳಿನಲ್ಲಿಯೇ ಮಾತನಾಡಬೇಕೆಂದು ಹಠ ಹಿಡಿದರು.

ವೇಂಬಾರ್‌ನಲ್ಲೂ ಇದೇ ರೋಗ. ವೇಂಬಾರ್ ಸಮುದ್ರ ದಡದಲ್ಲಿಯೇ ಇರುವ ಸಣ್ಣ ಊರು. ಸರ್ಕಾರಿ ಹೈಸ್ಕೂಲ್ ಮುಖ್ಯೋಪಾಧ್ಯಾಯರನ್ನು ಭೇಟಿ ಮಾಡಿ ಪರಿಚಯ ಮಾಡಿಕೊಂಡೆ. ಬಹಳ ಹೊತ್ತು ಯೋಚಿಸಿ-ಸಹೋಪಾಧ್ಯಾಯರುಗಳೊಡನೆ ಸಮಾಲೋಚಿಸಿ ಆದಿನ ಶಾಲೆಯಲ್ಲಿ ಉಳಿಯಲು ಅವಕಾಶ ಮಾಡಿಕೊಟ್ಟರು. ಕಾರ್ಯಕ್ರಮ ಆಗಬೇಕಾದರೆ ತಮಿಳು ಭಾಷೆಯಲ್ಲಿ ಮಾತ್ರ ಎಂದರು. ನಾನು ಒತ್ತಾಯಿಸಲಿಲ್ಲ.

ಹಿಂದೂಸ್ಥಾನದ ಎಲ್ಲ ರಾಜ್ಯಗಳಲ್ಲಿ ತ್ರಿಭಾಷಾ ಸೂತ್ರ ಇರುವಾಗ ತಮಿಳು ನಾಡಿನಲ್ಲಿ ಮಾತ್ರ ದ್ವಿಭಾಷಾ ಸೂತ್ರ. ಏಕೆ ಹೀಗೆ? ಎಂದು ಕೇಳಿದಾಗ ಹುಡುಗರು ಉತ್ತರ ಹೇಳಲು ಅಸಮರ್ಥರಾದರು. ಉಪಾಧ್ಯಾಯರು 'ಇದೆಲ್ಲ ರಾಜಕೀಯ' ಎಂದರು. ಹುಡುಗರೇನೋ ಹಿಂದಿ ಕಲಿಯಲು ಬಯಸುತ್ತಾರೆ.

ಸಾಯಂಕಾಲ ಮನೆಗೆ ಹೋಗುವಾಗ ಮುಖ್ಯೋಪಾಧ್ಯಾಯರು ಏನು ಯೋಚಿಸಿದರೋ ಗೊತ್ತಿಲ್ಲ. ನನ್ನ ಹತ್ತಿರ ಲಿಖಿತವಾಗಿ ಬರೆಯಿಸಿಕೊಂಡರು. ನನ್ನ ರಕ್ಷಣೆಗಾಗಿ ಎಂದು ಹೇಳಿ ಜವಾನನಿಗೆ ಆ ದಿನ ಸ್ಕೂಲಿನಲ್ಲಿ ಕಡ್ಡಾಯವಾಗಿ ಮಲಗಲು ಹೇಳಿಹೋದರು. ನನಗೆ ಬಹಳ ದುಃಖವಾಯಿತು. ಊರಿಗೆ ಒಂದು ಕಿಲೋಮೀಟರ್ ದೂರದಲ್ಲಿ ಬಬುಲ್‌ಜಾಲಿ ಗಿಡಗಳ ಮಧ್ಯೆ ಇರುವ ಶಾಲೆ. ಉಪವಾಸವಿದ್ದರೂ ಚಿಂತೆ ಇಲ್ಲ- ಊರ ಒಳಗೆ ಹೋಗಬಾರದು ಎಂದು ನಿರ್ಧರಿಸಿದೆ. ಒಂದೇ ಒಂದು ಬಕೆಟ್ ನೀರಿನಲ್ಲಿ ಆ ದಿನವೆಲ್ಲ ಕಳೆದು ಬೆಳಿಗ್ಗೆ ಸ್ನಾನ ಮಾಡಿದೆ. ಮುದುಕ ಜವಾನ ಹಿಂದಿನ ರಾತ್ರಿ ನನಗಾಗಿ



# ಪುಸ್ತಕ ವಿಭಾಗ

ಮೇಜಿನ ಮೇಲೆ ತಂದಿಟ್ಟಿದ್ದ ಸಾಪಾಟು -ಅನ್ನ ಮೀನಿನ ಸಾರು-ಹಾಗೆ ಉಳಿದಿತ್ತು.



ಕೆ.ಸಿ. ಲಕ್ಷ್ಮೀನರಸಿಂಹಯ್ಯ

ನಾನು ಹೊರಟು ನಿಂತಾಗ ಮೇಜಿನ ಮೇಲಿನ ತಟ್ಟೆ ಕಡೆ ಒಂದು ಸಾರಿ ನೋಡಿ ದೃಷ್ಟಿಯನ್ನು ನನ್ನ ಮೇಲೆ ಕೇಂದ್ರೀಕರಿಸಿದ. ಅವನ ಆ "ವಣಕ್ಕುಂ ಬಾಪು" ಎಂಬ ಒಂದೇ ಮಾತಿನಲ್ಲಿ ತಮಿಳಿನ ಭಾವನೆ ಲವಶೇಷವೂ ಇರದೆ ಮಾನವೀಯತೆಯ ಅನುಕಂಪ ತುಂಬಿಬಂದಿತ್ತು.

*****

ಆದಿಗುರು ಭಗವತ್ಪಾದ ಶ್ರೀ ಶಂಕರಾಚಾರ್ಯರ ಎಲ್ಲ ಪೀಠಗಳನ್ನೂ ಸಮಾಧಿ ಸ್ಥಳವನ್ನೂ ನಡೆದೇ ಹೋಗಿ ನೋಡಿ ಆನಂದಿಸಿದ್ದಾಯಿತು. ಆ ಮಹಾನುಭಾವನ ಜನ್ಮಸ್ಥಳ ಕಾಲಡಿಯನ್ನು ದರ್ಶನ ಮಾಡಿ ಆನಂದಿಸುವ ಭಾಗ್ಯವೂ ಕೇರಳ ಪ್ರವಾಸದಲ್ಲಿ ಒದಗಿ ಬಂತು.

ಶ್ರೀ ನಾರಾಯಣಗುರು ಅವರ ತಪೋಭೂಮಿ ಅಳವೆ ಅದ್ವೈತಾಶ್ರಮದಿಂದ ಭಗವಾನ್ ಶಂಕರಾಚಾರ್ಯರ ಜನ್ಮಭೂಮಿ ಕಾಲಡಿಗೆ ಆ ದಿವಸ ನಡೆದು ಹೋದುದು ಮರೆಯಲಾಗದ ಅನುಭವ. ತುಂಬಾ ಉಲ್ಲಾಸದಾಯಕ. ತೆಂಗು-ರಬ್ಬರ್ ತೋಟಗಳ ಮಧ್ಯೆ ಇರುವ ಊರು. ಎರಡು ದಿವಸ ಶ್ರೀ ರಾಮಕೃಷ್ಣ ಆಶ್ರಮದಲ್ಲಿ ಉಳಿದಿದ್ದೆ. ಇದ್ದ ಎರಡು ದಿನವೂ ಬೆಳಿಗ್ಗೆ ಸಾಯಂಕಾಲ ಪೂರ್ಣಾನದಿಯ ಸ್ವಚ್ಛ ಜಲದಲ್ಲಿ ಸ್ನಾನ ಮಾಡಿ ಶಂಕರ ಪೀಠದ ಎದುರಿಗೆ ಕುಳಿತು ಪ್ರಾರ್ಥನೆ ಸಲ್ಲಿಸುವುದು ಮಹದಾನಂದದ ಕೆಲಸವಾಗಿತ್ತು.

ಕೇಂದ್ರದಲ್ಲಿ ಆಗಿನ ರೈಲ್ವೆ ಮಂತ್ರಿಗಳಾಗಿದ್ದ ಕರ್ನಾಟಕದ ಜನಪ್ರಿಯ ಮಾಜಿ ಮುಖ್ಯಮಂತ್ರಿ ಶ್ರೀ ಕೆಂಗಲ್

## ಪಾದಯಾತ್ರಿಕ ಕಂಡ ಭಾರತ

ಹನುಮಂತಯ್ಯನವರು ಮಂದಿರದ ಮುಖ್ಯ ದ್ವಾರ ಉದ್ಘಾಟಿಸಿರುವುದು ಹೆಮ್ಮೆಯ ವಿಷಯ. ಈಚೆಗೆ ಶಂಕರಾಚಾರ್ಯರ ಕೀರ್ತಿಸ್ತಂಭ ನಿರ್ಮಿತವಾಗಿದೆ. ಆಗಿನ ಪ್ರಧಾನಮಂತ್ರಿ ಶ್ರೀ ರಾಜೀವ್ ಗಾಂಧಿ ಅವರ ಕಾಲದಲ್ಲಿ ಪ್ರಾರಂಭವಾಗಿರುವ ಸಂಸ್ಕೃತ ವಿಶ್ವವಿದ್ಯಾಲಯದ ಕಟ್ಟಡಗಳು ತಲೆ ಎತ್ತುತ್ತಿವೆ. ಇದೇ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ನನ್ನ ಪರಿಣಾಮಕಾರಿ ಕಾರ್ಯಕ್ರಮ ನಡೆದದ್ದು ಒಂದು ಹೆಮ್ಮೆಯ ವಿಷಯ.

ಶ್ರೀ ರಾಮಕೃಷ್ಣ ಆಶ್ರಮದ ಶ್ರೀ ಘನಾನಂದಸ್ವಾಮೀಜಿಯವರು ಜೊತೆಯಲ್ಲಿ ಕರೆದುಕೊಂಡು ಹೋಗಿ ವೈಸ್ ಛಾನ್ಸಲರ್‌ರಿಗೆ ಪರಿಚಯ ಮಾಡಿಸಿ ಆದಿನ ಸಾಯಂಕಾಲ ಕಾರ್ಯಕ್ರಮ ಏರ್ಪಡಿಸಿಕೊಟ್ಟರು. ಪ್ರಾಧ್ಯಾಪಕರುಗಳಾದಿಯಾಗಿ ನೂರಾರು ವಿದ್ಯಾರ್ಥಿಗಳ ಸಭೆ. ವಂದೇ ಮಾತರಂನೊಂದಿಗೆ ಪ್ರಾರಂಭಿಸಿ ಮುಖ್ಯವಾಗಿ ಸ್ವಾಮಿ ವಿವೇಕಾನಂದರ ಜೀವನ ತತ್ವಾದರ್ಶಗಳನ್ನು ವಿದ್ಯಾರ್ಥಿಗಳ ಮುಂದಿಟ್ಟು ಕೊನೆಯ ಹಂತ ತಲುಪಿದಾಗ ಒಬ್ಬ ವಿದ್ಯಾರ್ಥಿ ಎದ್ದು ನಿಂತು, "ಪಾದಯಾತ್ರಿಗಳಾಗಿ ನೀವು ಗಳಿಸಿದ ಅನುಭವದ ಹಿನ್ನೆಲೆಯಲ್ಲಿ ವಿದ್ಯಾರ್ಥಿಗಳಿಗೆ ನಿಮ್ಮ ಸಂದೇಶವೇನು ? ಎಂದ ಪ್ರಶ್ನಿಸಿದ. ಯೋಚಿಸುವ ಅಗತ್ಯವೇ ಬೀಳಲಿಲ್ಲ.

ನಾನು ಮೊದಲೇ ಯೋಚಿಸಿ ತಯಾರಾಗಿದ್ದೆ. "ಪ್ರಿಯ ವಿದ್ಯಾರ್ಥಿ ಸ್ನೇಹಿತರೆ, ಆದಿಗುರು ಶ್ರೀ ಶಂಕರರ ಜನ್ಮ ಸ್ಥಳದಲ್ಲಿ ಮೂಲಭಾಷೆ ಸಂಸ್ಕೃತದಲ್ಲಿ ಸ್ನಾತಕೋತ್ತರ ಜ್ಞಾನ ಪಡೆಯುತ್ತಿರುವ ನೀವು ಭಾಗ್ಯಶಾಲಿಗಳೇ ಹೌದು. ಭಾರತೀಯ ಸಂಸ್ಕೃತಿಗೇ ವಿರುದ್ಧವಾದ ಗೋಮಾತಾ ಹತ್ಯೆಯನ್ನು ತಡೆಯಲು ಪ್ರಯತ್ನಿಸಿ ಇಲ್ಲಿಯ ಗುರು ಋಣವನ್ನು ನೀವು ತೀರಿಸುತ್ತೀರೆಂದು ನಂಬಿದ್ದೇನೆ. ಕಡೆಯಪಕ್ಷ ಆ ಮಹಾನುಭಾವನ ಜನ್ಮಸ್ಥಳ ಈ ಕಾಲಡಿಯ ಪ್ರವೇಶ ದ್ವಾರದಲ್ಲಿಯೇ ನೇತುಹಾಕಿ ಪ್ರದರ್ಶಿಸುತ್ತಿರುವ ಅಸಹ್ಯ ದೃಶ್ಯವನ್ನಾದರೂ ಕೊನೆಗೊಳಿಸಲು ಪ್ರಯತ್ನಿಸಿ ನಿಮ್ಮ ಜನ್ಮ ಸಾರ್ಥಕಪಡಿಸಿಕೊಳ್ಳುತ್ತೀರೆಂದು ಕೈಮುಗಿದು ಕೇಳಿಕೊಳ್ಳುತ್ತೇನೆ."

(ಮುಗಿಯಿತು)

### ಶಾಂತಿಯಿಂದ ಓದಲು ಬಿಡಿರಿ

* ಬಾಲಗಂಗಾಧರ್ ತಿಲಕರು ಒಮ್ಮೆ ಮುಂಬಯಿಯಿಂದ ಪುಣೆಗೆ ರೈಲಿನಲ್ಲಿ ಪ್ರಯಾಣಿಸುತ್ತಿದ್ದರು. ಓದಲೆಂದು ದಿನಪತ್ರಿಕೆಯೊಂದನ್ನು ಕೊಂಡರು. ಅವರು ಅದರ ಶೀರ್ಷಿಕೆಗಳನ್ನೋದುತ್ತಿರುವಷ್ಟ ರಲ್ಲೇ ಸಹ ಪ್ರಯಾಣಿಕರೊಬ್ಬರು 'ಮಧ್ಯದ ಹಾಳೆಯನ್ನು ಕೊಡುತ್ತೀರಾ ?' ಎಂದರು.
* ತಿಲಕರು ಕಿಸೆಯಿಂದ ಹಣವನ್ನು ಕೊಡುತ್ತ ಹೀಗೆಂದರು: "ತೆಗೆದುಕೊಳ್ಳಿ. ಇದರಿಂದ ಒಂದು ಪತ್ರಿಕೆ ತೆಗೆದುಕೊಂಡು ಓದಿರಿ, ನನ್ನನ್ನು ಮಾತ್ರ ಶಾಂತಿಯಿಂದ ಓದಲು ಬಿಡಿರಿ."

✱ ಪವನಕುಮಾರ ಗಂಗಾವತಿ

ಆರೋಗ್ಯದಂಗಳ

# ಮೂಲವ್ಯಾಧಿಗೆ ಇಲ್ಲಿದೆ ಉಪಚಾರ




ಡಾ. ಹೆಚ್.ವಿ. ಮೂರ್ತಿ
'ಯಮುನಾ ಶ್ರೀನಿವಾಸ'
ಬಿ ಬ್ಲಾಕ್, ಎಂ.ಸಿ. ಕಾಲೊನಿ,
ದಾವಣಗೆರೆ-೪


ಇಂಗ್ಲೀಷಿನಿಂದ ಸಂಗ್ರಹಾನುವಾದ:

• ಡಾ. ಹೆಚ್.ವಿ. ಚಂದ್ರಶೇಖರ

# ಮೂಲವ್ಯಾಧಿಗೆ ಇಲ್ಲಿದೆ ಉಪಚಾರ

• ಡಾ.ಎಚ್.ವಿ.ಮೂರ್ತಿ

ಗುದದ್ವಾರದ ತುದಿಯಲ್ಲಿ ಬಾತು ಹೊರಹಾಯ್ದಿರುವ ಸಣ್ಣ ರಕ್ತಗ್ರಂಥಿ ಅಥವಾ ಚೀಲಕ್ಕೆ ಮೂಲವ್ಯಾಧಿಗೆ ಮೊಳೆಯೆಂದು ಕರೆಯುವರು. ಅದು ಸ್ತ್ರೀ-ಪುರುಷರಿಬ್ಬರಲ್ಲಿಯೂ ಕಾಣಬರಬಹುದು. ಅದು ಒಂದು ವಯಸ್ಕರ ರೋಗ. ಸರ್ವೇ ಸಾಮಾನ್ಯವಾಗಿ ಮೂಲವ್ಯಾಧಿ ಗಂಡಾಂತರಕಾರಿ ಅಲ್ಲ. ಆದರೆ ರೋಗದ ಪರಿಣಾಮವಾಗಿ ಆದ ರಕ್ತ ನಷ್ಟದಿಂದ ಪಾಂಡುರೋಗ, ಪೌಷ್ಟಿಕ ಆಹಾರದ ಅಭಾವದಿಂದ ಕುಂದಿದ ಶಕ್ತಿ, ಕುಗ್ಗಿದ ರೋಗ ಪ್ರತಿರೋಧಕ ಶಕ್ತಿ ಹಾಗೂ ದೌರ್ಬಲ್ಯ ಕಾಣಿಸಿಕೊಳ್ಳಬಹುದು.

ಮೂಲವ್ಯಾಧಿಯನ್ನು ರೋಗನಿದಾನ ಹಾಗೂ ಚಿಕಿತ್ಸೆ ದೃಷ್ಟಿಯಿಂದ ಸಾಮಾನ್ಯವಾಗಿ ಕೆಳಕಂಡಂತೆ ವಿವರಿಸಬಹುದು.

೧) ಹೊರ ಅಥವಾ ಬಾಹ್ಯಮೂಲವ್ಯಾಧಿ (ಮೊಳೆ ಗುದದ್ವಾರದ ಹೊಸ ಅಂಚಿನಲ್ಲಿ ಕಾಣಿಸಿಕೊಳ್ಳುವುದು)

೨) ಒಳ ಅಥವಾ ಆಂತರಿಕ ಮೂಲವ್ಯಾಧಿ (ಮೊಳೆ ಗುದನಾಳದಲ್ಲಿರುವುದು)

ಸಾಮಾನ್ಯವಾಗಿ ಮೂಲವ್ಯಾಧಿಯನ್ನು ಮೂರು ಹಂತಗಳಲ್ಲಿ ವಿಂಗಡಿಸಬಹುದು.

ಮೊದಲನೆ ಹಂತದಲ್ಲಿ ಪ್ರವರ್ತಿಗೆ ಮುಂಚಿತವಾಗಿ ಅಥವಾ ಅನಂತರ ನೋವಿಲ್ಲದ ಅಚ್ಚಕೆಂಪು ರಕ್ತಸ್ರಾವವಾಗುವುದು.

ಎರಡನೆಯ ಹಂತದಲ್ಲಿ ಪ್ರವರ್ತಿಯನಂತರ ಮೊಳೆ ಹೊರಚಾಚಿಕೊಳ್ಳುವುದು. ಹಾಗೆ ಹೊರಚಾಚಿಕೊಂಡ ಮೊಳೆ ಸ್ವಲ್ಪ ಕಾಲದ ನಂತರ ತನಗೆ ತಾನೆ ಕುಗ್ಗುವುದು ಇಲ್ಲವೆ ಬೆರಳುಗಳಿಂದ ಉಪಾಯವಾಗಿ ಅದನ್ನು ಒಳಸೇರಿಸಬಹುದು. ಈ ಹಂತದಲ್ಲಿ ಹುಣ್ಣುಗಳಾಗಬಹುದು. ಮೂಲವ್ಯಾಧಿ ಜಟಿಲವಾಗಬಹುದು. ರೋಗಾಣುಗಳು ಸೇರಿ ನಂಜಾಗಬಹುದು. ರಕ್ತ ಕರಣೆಗಟ್ಟಬಹುದು. [Thrombosis] ಈ ಸ್ಥಿತಿಯಲ್ಲಿ ದ್ರವಿಸಿದ ಲೋಳೆಯಿಂದ ಗುದ ಉಪಸ್ಥಿಮಧ್ಯಭಾಗದಲ್ಲಿ [Perimium] ತುರಿಕೆ ಉಂಟಾಗಬಹುದು.

ಮೂರನೆ ಹಂತದಲ್ಲಿ ಹೊರಹಾಯ್ದ ಮೂಲವ್ಯಾಧಿ ಮೊಳೆಯನ್ನು ಕುಗ್ಗಿಸಲು ಸಾಧ್ಯವಿಲ್ಲ. ಗುದದ ಸ್ನಾಯುಶಕ್ತಿ ಕುಗ್ಗಿರುತ್ತದೆ. ರಕ್ತಸ್ರಾವವಾಗುವುದು ಕಡಿಮೆಯಾಗುತ್ತದೆ. ದ್ರವಿಸಿದ ಲೋಳೆ ಗುದ ಉಪಸ್ಥಿಯ ಮಧ್ಯಭಾಗದಲ್ಲಿ ಕಡಿತ ಉಂಟುಮಾಡುವುದು.

ಚುಚ್ಚುವ, ಸೇದುವ, ಎಳೆಯುವ, ಉರಿಯುವ, ನೋವು. ಗುದದಲ್ಲಿ ಬೆಣೆ ಬಡಿದ ಹಾಗೆ ಚೆಂಡು ಇರಿಸಿದ ಹಾಗೆ ಭಾಸವಾಗುವುದು. ಇವು ಸಾಮಾನ್ಯವಾಗಿ ಮೂಲವ್ಯಾಧಿ ರೋಗಿ ಈ ಹಂತದಲ್ಲಿ ಅನುಭವಿಸುವ ಯಾತನೆಗಳು.

ಕಚೇರಿಯಲ್ಲಿ ಸದಾ ಕುಳಿತೆ ಕೆಲಸಮಾಡುವುದು. ಹೆಚ್ಚು ಓದುವುದು, ಲಾಭ-ನಷ್ಟದ ವ್ಯಾಕುಲದಿಂದ ಕೂಡಿದ ವ್ಯವಹಾರದಲ್ಲಿ ಸದಾ ನಿರತರಾಗಿರುವುದು, ಹೆಚ್ಚು ಸೈಕಲ್ ಸವಾರಿ, ಕುದುರೆ ಸವಾರಿ ಮಾಡುವುದು. ಭಾರ ಎತ್ತುವುದು, ಹೆಚ್ಚು ಮಸಾಲೆಯುಕ್ತ ಆಹಾರ ಸೇವಿಸುವುದು, ಅತಿ ಮಾದಕ ದ್ರವ್ಯ ಸೇವಿಸುವುದು, ಅತಿ ಸಂಭೋಗ, ಅತಿ ವಚನಕಾರಿ, ವಿರೇಚಕ ಉಪಶಮನ ಹಾಗೂ ತೀವ್ರ ತರಹದ ಔಷಧಿ ಸೇವಿಸುವುದು ಮೂಲವ್ಯಾಧಿಗೆ ಕಾರಣವಾಗಬಹುದು. ಇಲ್ಲವೆ ಅದನ್ನು ಉಲ್ಬಣಗೊಳಿಸಬಹುದು.

ಖ್ಯಾತ ಸರ್ಜನ್‌ರಾದ ಡಾ.ಎನ್.ಪಿ.ಶೇಟ್ "ದಿ ಆ್ಯಂಟಿಸೆಪ್ಟಿಕ್" ನಲ್ಲಿ ಮೂಲವ್ಯಾಧಿಯ ಬಗೆಗಿನ ಬಗ್ಗೆ ತಮ್ಮ ವಿಶೇಷ ಲೇಖನದಲ್ಲಿ "ಮಾನವ ತನ್ನ ನೆಟ್ಟಗೆ ನಿಲ್ಲುವ ಅವಸ್ಥೆಯಿಂದಾಗಿ ಮೂಲವ್ಯಾಧಿ ತಂದುಕೊಳ್ಳುವುದರ ಮೂಲಕ ಫಲ ಅನುಭವಿಸುತ್ತಾನೆ" ಎಂದು ಹೇಳಿದ್ದಾರೆ.

ಮೂಲವ್ಯಾಧಿ, ಆಮಶಂಕೆ ಹಾಗೂ ಭಗಂದರಗಳಿಗಿರುವ ತಾರತಮ್ಯವನ್ನು ಮುಖ್ಯವಾಗಿ ಗಮನಿಸಬೇಕು. ಬಹುಸಲ ಒಂದಕ್ಕೊಂದನ್ನು ತಪ್ಪು ತಿಳಿದುಕೊಳ್ಳುವ ಸಂದರ್ಭವಿರುತ್ತದೆ. ಆಮಶಂಕೆಯ ವೇದನೆಗಳೆಲ್ಲಾ ಬಹುತೇಕ ಹೊಟ್ಟೆಯಲ್ಲಿ ಕಾಣುವವು. ಮೂಲವ್ಯಾಧಿಯ ವೇದನೆಗಳೆಲ್ಲಾ ಗುದದ್ವಾರದಲ್ಲಿಯೇ ಹೆಚ್ಚು. ಗುದದ ಬಳಿ ಭಗಂದರವಿರುವುದನ್ನು ಗಾಯದ ಆಳತೆ ನೋಡುವ ಶಸ್ತ್ರ (Probe) ದಿಂದ ಕಂಡುಹಿಡಿಯಬಹುದು.

ಹೋಮಿಯೋಪತಿಯು ಮೂಲವ್ಯಾಧಿಯನ್ನು ಶಾಶ್ವತವಾಗಿ ಗುಣಪಡಿಸುತ್ತದೆ. ಸಾಧಿಸಿದ ಹೋಮಿಯೋಪತಿ ಔಷಧಗಳು ಆಳವಾಗಿ ಪ್ರವರ್ತಿಸಿ ರೋಗದ ಮೂಲವನ್ನೇ ನಾಶಪಡಿಸುತ್ತವೆ. ಹೋಮಿಯೋಪತಿಯು ಶಾಶ್ವತ ಗುಣಪಡಿಸುವ ಶಾಸ್ತ್ರೀಯ ಔಷಧ. ಏಕೆಂದರೆ ಗುಣಪಡಿಸುವ ಕ್ರಮ ಅಂತರಂಗದಿಂದ ಬಹಿರಂಗಕ್ಕೆ ಸಕ್ರಮ ವ್ಯಾಪ್ತಿ ಪಡೆದಿದೆ. ಪ್ರಕೃತಿಯೇ ಸ್ವತಃ ದುರಸ್ತಿ ಮಾಡುವ ಕ್ರಮದಲ್ಲಿಯೇ ಔಷಧಗಳು ಪ್ರವರ್ತಿಸುವವು. ಹೋಮಿಯೋಪತಿಯನ್ವಯ ಗುಣವಾದುದು ಶಾಶ್ವತ. ಅದು ಮರುಕಳಿಸುವುದು ವಿರಳ.

ಮೂಲವ್ಯಾಧಿಯ ಚಿಹ್ನೆಗಳು ಹಾಗೂ ಆ ರೋಗಿಗೆ ಕೊಟ್ಟ ಹೋಮಿಯೋಪತಿ ಚಿಕಿತ್ಸೆಯ ವಿವರಗಳನ್ನು ಕೆಳಗೆ ಕೊಟ್ಟಿದೆ.

ಸದಾ ಕುಳಿತೇ ಕೆಲಸ ಮಾಡುವ ಒಬ್ಬ ಇಂಜಿನಿಯರಿಂಗ್ ಇನ್‌ಸ್ಟಿಟ್ಯೂಟ್ ಪ್ರೊಫೆಸರ್ ಚಿಕಿತ್ಸೆಗಾಗಿ ನನ್ನ ಬಳಿ ಬಂದಿದ್ದರು. ಅವರಲ್ಲಿ ಈ ಚಿಹ್ನೆಗಳು ಕಂಡವು. ೧) ವ್ಯಾಕುಲ ಹಾಗೂ ನಿರಾಶೆಯವರ ಹಾಗೆ ಕಂಡರು.

೨) ತಮ್ಮ ತೊಂದರೆಗಳ ಬಗ್ಗೆ ಯೋಚಿಸುವಾಗ ಮೂಲವ್ಯಾಧಿ ಉಲ್ಬಣವಾಗುತ್ತಿತ್ತು.

೩) ತಣ್ಣನೆಯ ಗಾಳಿಯಿಂದ ಉಲ್ಬಣ.

೪) ಕಾವಿನಿಂದ ಉತ್ತಮ.

೫) ಮೂಲವ್ಯಾಧಿಯ ಮೊಳೆ ಬಹಳ ದಪ್ಪವಾದುದು.

೬) ಗುದದ್ವಾರ ಬಾತು ಉರಿಯಿಂದ ಕೂಡಿತ್ತು.

ಮೇಲಿನ ಚಿಹ್ನಗಳನ್ವಯ ಕಾಸ್ಟಿಕಂ ೨೦೦ ಅನ್ನು ಆರಿಸಿ ಬಹು ಅಂತರದಲ್ಲಿ ಒಂದು ಸಲದಂತೆ ಪ್ರಯೋಗಿಸಲಾಯಿತು. ಅವರ ಮೂಲವ್ಯಾಧಿ ಮೂರು ತಿಂಗಳಲ್ಲಿ ಉತ್ತಮಗೊಂಡಿತು. ನಮ್ಮ ಪ್ರತಿನಿತ್ಯ ವೈದ್ಯಕೀಯ ವೃತ್ತಿಯ ಅನುಭವದಿಂದ ಈ ರೀತಿ ಅನೇಕ ರೋಗಿಗಳು ಗುಣಹೊಂದಿದ ದೃಷ್ಟಾಂತ ಕೊಡಬಹುದು.

ಹೋಮಿಯೋಪತಿಯು, ಶಸ್ತ್ರಚಿಕಿತ್ಸೆ ತೀರ ಅವಶ್ಯಕತೆ ಇಲ್ಲ ಎಂದು ಪರಿಗಣಿಸಿಲ್ಲ. ಅದು ಅದರ ದುರುಪಯೋಗವನ್ನು ಖಂಡಿಸುತ್ತದೆ. ಸಾಕಷ್ಟು ಕಾಲ ಪ್ರಯೋಗಿಸಲ್ಪಟ್ಟ ಹೋಮಿಯೋಪತಿಯ ಶೀಘ್ರ ಪ್ರವರ್ತಿಯ ಔಷಧಗಳು ಬಹುತೇಕ ರೋಗಿಗಳ ಶಸ್ತ್ರಚಿಕಿತ್ಸೆಯನ್ನು ತಪ್ಪಿಸಿ, ರೋಗವನ್ನು ಸಂಪೂರ್ಣ ಗುಣಪಡಿಸಿರುತ್ತವೆ. ಶಸ್ತ್ರಚಿಕಿತ್ಸೆಯು ರೋಗದ ಕಾರಣವನ್ನು ಹಾಗೆಯೇ ಬಿಟ್ಟು ಅದರ ಪರಿಣಾಮ [Result]ವಾದ ಮೂಲವ್ಯಾಧಿಯ ಗಂಟನ್ನು ಮಾತ್ರ ತೆಗೆಯುತ್ತದೆ. ಅದು ಮುಂದೆ ದೇಹದಲ್ಲಿನ ಇತರ ಪ್ರಮುಖ ಅಂಗಗಳಿಗೆ ಹಾನಿ ಕಲ್ಪಿಸಬಹುದು. ಹೋಮಿಯೋಪತಿ ಔಷಧಗಳು ಪ್ರಕೃತಿಯನ್ನು ಸುಧಾರಿಸಿ, ರೋಗವನ್ನು ತಾನೇ ಗುಣಪಡಿಸಲು ಚೈತನ್ಯ ಶಕ್ತಿಯನ್ನು ಸಬಲಗೊಳಿಸುತ್ತದೆ. ಅನಿವಾರ್ಯವೆನಿಸಿದ ಪಕ್ಷದಲ್ಲಿ ಸೂಚಿಸಲ್ಪಟ್ಟ ಹೋಮಿಯೋಪತಿ ಔಷಧವು ರೋಗಿಯನ್ನು ಯಶಸ್ವಿ ಶಸ್ತ್ರಚಿಕಿತ್ಸೆಗೆ ಅಣಿಗೊಳಿಸುತ್ತದೆ. ಸರಿಯಾಗಿ ನೀಡಿದ ಹೋಮಿಯೋಪತಿ ಚಿಕಿತ್ಸೆಯಿಂದ ಅನೇಕ ರೋಗಿಗಳು ಪೂರ್ಣಗುಣ ಹೊಂದಿದ್ದಾರೆ..

ಮಾನಸಿಕ ಚಿಹ್ನಗಳು, ಉಲ್ಬಣ ಉಪಶಮನ, ನಿರ್ದಿಷ್ಟ ಮೂಲವ್ಯಾಧಿ ಚಿಹ್ನಗಳನ್ನು ವಿವರಿಸಿದೆ. ಸಾಧ್ಯವಾದಲ್ಲೆಲ್ಲ ರೋಗಿಯ ಸ್ವಭಾವವನ್ನು ಸಹ ವಿವರಿಸಲಾಗಿದೆ. ಆದರೆ, 'ಸಮಾನತತ್ವ' 'ಸಮಾನ ಔಷಧ'ವನ್ನು ಸೂಚಿಸುತ್ತದೆ ಎಂಬುದನ್ನು ಮರೆಯಬಾರದು. ನಾವು ರೋಗಿಯ ವ್ಯಕ್ತಿತ್ವವನ್ನೂ ಔಷಧಗಳ ಸರಿಯಾದ ಸಾಧನೆಯನ್ನೂ ತಿಳಿದಿರಬೇಕು. ಒಟ್ಟು ಚಿಹ್ನಗಳಿಂದ ಈ ಕಿರುಲೇಖನದಲ್ಲಿ ವಿವರಿಸದೆ ಇದ್ದ ಯಾವುದೇ ಹೋಮಿಯೋಪತಿಯ ಔಷಧ ಒಬ್ಬ ನಿರ್ದಿಷ್ಟ ರೋಗಿಯಲ್ಲಿ ಸೂಚಿಸಲ್ಪಟ್ಟಿರಬಹುದು. ಆದ್ದರಿಂದ ಒಂದು ಉತ್ತಮ ಹೋಮಿಯೋಪತಿಯ 'ಮೆಟಿರಿಯ ಮೆಡಿಕಾ' ದಲ್ಲಿನ ಔಷಧಗಳ ಮಾಹಿತಿ ಅಗತ್ಯ.

ತೀವ್ರ ಸಂದರ್ಭಗಳಲ್ಲಿ ಕಡಿಮೆ ಸತ್ವದ ಔಷಧಗಳನ್ನು ಮೇಲಿಂದ ಮೇಲೆ ಪ್ರಯೋಗಿಸಬಹುದು. ಹಳೆಯ ರೋಗಗಳಲ್ಲಿ ದಿನಕ್ಕೆ ಒಂದು ಅಥವಾ ಎರಡು ಸಲ ಸಾಕು. ಮಧ್ಯಮ ಹಾಗೂ ಹೆಚ್ಚಿನ ಸತ್ವದ ಔಷಧಗಳನ್ನು ದೀರ್ಘ ಅವಧಿಯಲ್ಲೊಮ್ಮೆ ಪ್ರಯೋಗಿಸಬೇಕು. ಪುನರ್‌ಪ್ರಯೋಗ ವರ್ಜಿಸಬೇಕಾದ ಔಷಧಗಳನ್ನು ಸ್ಮರಣೆಯಲ್ಲಿಟ್ಟುಕೊಂಡಿರಬೇಕು.

ಪ್ರತಿ ಔಷಧದ ಸತ್ವದ ಬಗ್ಗೆ ಆಯಾ ಔಷಧಗಳ ವಿವರದಲ್ಲಿಯೇ ತಿಳಿಸಲಾಗಿದೆ.

ಕಾಫಿಯು ಸಸ್ಯಜನ್ಯ ಹೋಮಿಯೋಪತಿ ಔಷಧಗಳ ಗುಣವನ್ನು ತೆಗೆಯುತ್ತದೆ. ಆಗ ಕಾಫಿ ವರ್ಜಿಸುವುದು ಅಗತ್ಯ. ಸಸ್ಯಜನ್ಯ ಹೋಮಿಯೋಪತಿ ಔಷಧಗಳ ದುರುಪಯೋಗದಿಂದ ಉಲ್ಬಣವಾದ ದುಷ್ಪರಿಣಾಮಗಳನ್ನು ಕಾಫಿ ಡಿಕಾಕ್ಷನ್ ಪ್ರಯೋಗದಿಂದ ನಿವಾರಿಸಬಹುದು.

ಹೋಮಿಯೋಪತಿಯಲ್ಲಿ ಬಾಹ್ಯ ಲೇಪನಗಳಿಲ್ಲ. ಕೆಲವು ಹೋಮಿಯೋಪತಿ ವೈದ್ಯರು ಹೆಮಾಮಾಲಿಶ್ ಮಾತೃ ದ್ರವವನ್ನು ನೀರಿನೊಂದಿಗೆ ಬೆರೆಸಿ ರಕ್ತಸ್ರಾವದ ಮೂಲವ್ಯಾಧಿಯಲ್ಲಿ ಗುದದ್ವಾರದಲ್ಲಿ ಪಿಚಕಾರಿಯ ಮುಖಾಂತರ ಬಿಡುವುದನ್ನು ರೂಢಿಯಲ್ಲಿಟ್ಟಿದ್ದಾರೆ.

## ಔಷಧಗಳು ಹಾಗೂ ಅವುಗಳ ಲಕ್ಷಣಗಳು

ಮೂಲವ್ಯಾಧಿಯಲ್ಲಿ ಬಹುತೇಕ ಸೂಚಿಸಲ್ಪಟ್ಟ ಔಷಧಗಳು, ರೋಗಿಗಳ ಮಾನಸಿಕ ಚಿಹ್ನೆಗಳು, ಉಲ್ಬಣ-ಉಪಶಮನಗಳು ಹಾಗೂ ಮೂಲವ್ಯಾಧಿ ಚಿಹ್ನೆಗಳನ್ನು ಕೆಳಗೆ ವಿವರಿಸಲಾಗಿದೆ. ಸಾಧ್ಯವಾದಲ್ಲೆಲ್ಲ ರೋಗಿಯ ಸ್ವಭಾವವನ್ನೂ ವಿವರಿಸಲಾಗಿದೆ.

### ಅಬ್ರ್ಯಾಟಿನಮ್

ಅಬ್ರ್ಯಾಟಿನಮ್ ರೋಗಿ- ಸಿಡಿಮಿಡಿಗುಟ್ಟುವವ, ಸಿಡುಕಿನವ, ವ್ಯಾಕುಲ ಹಾಗೂ ಖಿನ್ನತೆಯಿಂದ ಕೂಡಿದವನು. ಕೇವಲ ಕ್ರಿಯೆಗೆ ಮಾತ್ರ ಸಂಬಂಧಿಸಿದ (Functional) ಹೃದಯದ ತೊಂದರೆಗಳಿರುವ ಹಳೆಯ ಅಜೀರ್ಣ ರೋಗಿಗಳಿಗೆ ಉತ್ತಮವಾದುದು.

ಶೀತ ಗಾಳಿಯಿಂದ ಬೆವರನ್ನು ತಡೆಗಟ್ಟುವದರಿಂದ ಉಲ್ಬಣ, ಮೇಲಿಂದಮೇಲೆ ಮಲವಿಸರ್ಜನೆಗೆ ಪ್ರಚೋದನೆ, ರಕ್ತಯುಕ್ತ ಮಲ; ವಾಯು ಶೂಲೆಗಳು ಅಂತರ್ಧಾನವಾದ ನಂತರ ಉಲ್ಬಣ. ಕೆಳಸತ್ವ.

### ಅಕೋನೇಟಂ ನೆಪಲಿಸ್

ಅಕೋನೇಟಂ ರೋಗಿ ಬೆದರಿಕೆಯಿಂದ ಕೂಡಿದವ; ಅವನ ತೊಂದರೆಗಳೆಲ್ಲಾ ಅವು ಎಷ್ಟೇ ಅಲ್ಪವಾಗಿರಲಿ, ವ್ಯಾಕುಲ ಹಾಗೂ ಕ್ಲೇಶದಿಂದ ಕೂಡಿರುತ್ತವೆ. ಸಣ್ಣ ವಿಷಯಗಳ ಬಗ್ಗೆ ರೇಗುವವ, ಮರಣ ಭೀತಿಯುಳ್ಳವ, ಸಾಯುವ ದಿನದ ಭವಿಷ್ಯ ಹೇಳುವವ, ತನ್ನ ಮುಂದಿನ ಭವಿಷ್ಯದ ಬಗ್ಗೆ ವ್ಯಥಾ ಹೆದರಿಕೆಯುಳ್ಳವ, ಜನರ ಗುಂಪಿನಲ್ಲಿ ಹೋಗಲು, ರಸ್ತೆ ದಾಟಲು ಹೆದರಿಕೆ. ಅವನು ಸದೃಢಕಾಯನಾದವನು, ಸಹೃದಯಿ ಹಾಗೂ ಸೂಕ್ಷ್ಮಮನಸ್ಸು, ಪಿತ್ತ ಪ್ರಕೃತಿ ಹಾಗೂ ಅಂಜುಬುರುಕ ಸ್ವಭಾವದವನು.

ರಕ್ತಸ್ರಾವದ ಮೂಲವ್ಯಾಧಿ. ಕೆಳಸತ್ವ

### ಅಸ್ಕ್ಯುಲಸ್ ಹಿಪ್ಪೋಕ್ಯಾಸ್ಟಿನಮ್

ಅಸ್ಕ್ಯುಲಸ್ ರೋಗಿ ಕುಂದಿದ ಉತ್ಸಾಹದವನು, ಮುಂಗೋಪಿ. ಮನಸ್ಸು ಕೇಂದ್ರೀಕರಿಸಲು ಅವನಿಂದ ಸಾಧ್ಯವೇ ಇಲ್ಲ.

"ಸಕ್ಸ್ಲೋಮಿಕದ ನಂತರ ಅದು ಮೂಲವ್ಯಾಧಿ ಔಷಧ" ಎಂದು ಕೌಲ್ ಹೇಳುತ್ತಾರೆ.

ಜಠರ, ಪಿತ್ತ ಹಾಗೂ ಶೀತದ ತೊಂದರೆಗಳಿರುವಲ್ಲಿ ಮೂಲವ್ಯಾಧಿಯ ಪ್ರವೃತ್ತಿ (Tendency) ಇರುವುದು.

ಓಡಾಡುವುದರಿಂದ ತೊಂದರೆಗಳು ಉಲ್ಬಣ. ಚಳಿಗಾಲದಲ್ಲಿ ಹೆಚ್ಚುವುದು, ಬೇಸಿಗೆಯಲ್ಲಿ ಉತ್ತಮ.

ಅಸ್ಕ್ಯುಲಿಸ್ ಮೂಲವ್ಯಾಧಿ ರಕ್ತಸ್ರಾವದ್ದಿರಬಹುದು ಅಥವಾ ಇಲ್ಲದಿರಬಹುದು. ಗುದದ್ವಾರ ಒಣಗಿರುವಂತಾಗಿ ಚಿಕ್ಕಕಡ್ಡಿಗಳು ಅಥವಾ ದಬ್ಬೆಗಳು ಚುಚ್ಚುತ್ತಿರುವ ಹಾಗೆ ಗುದದ್ವಾರದ ಲೋಳೆ ಪೊರೆಯಲ್ಲಿ ಭಾಸವಾಗುವುದು. ಹೊಟ್ಟೆಯಲ್ಲಿ ತೀರಾ ಒಳಗೆ ಹಾಗೂ ಕಿಬ್ಬೊಟ್ಟೆಯ ಪ್ರದೇಶದಲ್ಲಿ ಜೋರಾಗಿ ಮಿಡಿಯುವ ನೋವು.

ಮೂಲವ್ಯಾಧಿ ದ್ರಾಕ್ಷಿಯ ಗೊಂಚಲಿನ ಹಾಗೆ ಇದ್ದು ತೀವ್ರ ಉರಿತದಿಂದ ಕೂಡಿರುತ್ತದೆ. ತಣ್ಣೀರಿನಿಂದ ಉಪಶಮನ.. ಮೂಲವ್ಯಾಧಿ ಅತಿಯಾದ ರಕ್ತಸ್ರಾವ ದಿಂದ ಕೂಡಿರುತ್ತದೆ. ಕೀಲಸ್ಥದ್ದು.

### ಅಮೋನಿಯಂ ಕಾರ್ಬ್

ಅಮೋನಿಯಂ ಕಾರ್ಬ್ ರೋಗಿ ವ್ಯಸನಭ್ರಾಂತ, ಕಾರಣವಿಲ್ಲದೆ ಕಣ್ಣೀರು ಹಾಕುವವನು. ದುರ್ಬಲ ಹೃದಯದ ಸ್ಥೂಲ ಪ್ರಕೃತಿಯ ರೋಗಿ.

ಮೂಲವ್ಯಾಧಿ ಮಲವಿಸರ್ಜನೆಯ ನಂತರ ಮುಂದೆ ಚಾಚಿಕೊಂಡಿರುವುದು. ಮಲಗುವುದರಿಂದ ಉತ್ತಮ. ಬಹಿಷ್ಠೆಯರಾದಾಗ ರಕ್ತಸ್ರಾವದ ಮೂಲವ್ಯಾಧಿ. ಗಟ್ಟಿಯಾದ ಹಾಗೂ ಗಂಟುಗಂಟಾದ ಮಲ.
ಆರನೆ ಸತ್ವ.

### ಅಮೋನಿಯಂ ಮ್ಯೂರ್

ಅಮೋನಿಯಂ ರೋಗಿಗೆ ಯಾವುದೋ ಗುಪ್ತ ಚಿಂತೆ ಖಿನ್ನತೆಯನ್ನುಂಟುಮಾಡು ವುದು. ಆದ್ದರಿಂದ ಅವನು ಭಯಗ್ರಸ್ತನಾಗುವನು. ಅವನಿಗೆ ಅಳುವ ಆಸೆ; ಆದರೆ ಅಳಲಾರ.

ತುರಿಕೆಯ ಮೂಲವ್ಯಾಧಿ: ಗಟ್ಟಿ ಮಲ ಚೂರು ಚೂರಾಗಿ ಬೀಳುವುದು. ಹೊಳೆಯುವ ಲೋಳೆಯಿಂದ ಆವರಿಸಿಕೊಂಡ ಮಲ. ಮಲಬದ್ಧತೆ ಇಲ್ಲವೆ ಹಸಿರು ಲೋಳೆಯ ಮಲ ಒಂದಾದ ನಂತರ ಮತ್ತೊಂದು ವರಸೆಯಿಂದ ಕೂಡಿರುವುದು. ಮಲವಿಸರ್ಜನೆಯ ಕಾಲದಲ್ಲಿ ಹಾಗೂ ನಂತರ ಗುದದ್ವಾರದಲ್ಲಿ ಉರಿ ಹಾಗೂ ಸಿಡಿಯುವಿಕೆ. ಬಿಳಿಯ ಸೆರಗು ಅಂತರ್ಗತವಾದ ಕಾರಣದಿಂದ ಆದ ಮೂಲವ್ಯಾಧಿ.
ಆರನೇ ಸತ್ವ.

### ಏಪಿಸ್ ಮೆಲಿಫಿಕ

ಏಪಿಸ್ ರೋಗಿ ವಕ್ರ. ಕೈಲಿದ್ದ ಸಾಮಾನು ಕೆಳಗೆ ಬಿಡುತ್ತಾನೆ. ಓದುವಾಗ ಹಾಗೂ ಅಭ್ಯಾಸ ಮಾಡುವಾಗ ಮನಸ್ಸನ್ನು ಕೇಂದ್ರೀಕರಿಸಲಾರ. ಜಡ ಸ್ವಭಾವದವನು. ಪಿತ್ತ ಹಾಗೂ ಅಂಜುಬುರುಕ ಪ್ರಕೃತಿಯವನು. ಸಂಶಯಗ್ರಸ್ತ ಹಾಗೂ ಹೊಟ್ಟೆಕಿಚ್ಚಿನವನು.

ಯಾವುದೇ ವಿಧದ ಶಾಖದಿಂದ, ಮುಟ್ಟುವುದರಿಂದ ಹಾಗೂ ಒತ್ತುವುದರಿಂದ ಉಲ್ಬಣ

ಹೊರಗಾಳಿಯಲ್ಲಿ, ತಣ್ಣೀರುಸ್ನಾನದಿಂದ, ಹೊದಿಕೆಯನ್ನು ತೆಗೆದುಹಾಕುವುದ ರಿಂದ ಉತ್ತಮ. ಹೆರಿಗೆಯ ನಂತರ ಚುಚ್ಚುವ ಮೂಲವ್ಯಾಧಿ. ಪ್ರತಿ ಚಲನೆಯ ನಂತರ ಮಲ ತನ್ನಷ್ಟಕ್ಕೆ ತಾನೇ ವಿಸರ್ಜನೆ, ಗುದದ್ವಾರ ಬಾಯ್ದೆರೆದಂತಿರುವುದು.
ಮೂವತ್ತನೆಯ ಸತ್ವ.

### ಆರ್ಸೆನಿಕಂ ಆಲ್ಬಂ

ಆರ್ಸೆನಿಕಂ ರೋಗಿ ವಿಪರೀತ ಯಾತನೆಯವನು, ಶಾಂತಿ ಇಲ್ಲದೆ ಚಡಪಡಿಸುವ ವನು, ಸದಾ ಸ್ಥಳ ಬದಲಾಯಿಸುತ್ತಲೇ ಇರುವವನು. ಅವನಿಗೆ ಸಾವಿನ ಭಯ ಹಾಗೂ ಏಕಾಂಗಿಯಾಗಿರಲು ಭಯ. ಔಷಧ ತೆಗೆದುಕೊಳ್ಳುವುದು ನಿರುಪಯೋಗ ಎನಿಸು ವುದು.

ಮೂಲವ್ಯಾಧಿ ಬೆಂಕಿಯಂತೆ ಉರಿಯುವುದು, ಶಾಖದಿಂದ ಉತ್ತಮ. ಗುದದ್ವಾರದಸುತ್ತುಮುತ್ತಲಿನ ಚರ್ಮ ಸುಲಿದ ಹಾಗಿರುವುದು.

ಮೂವತ್ತನೆಯ ಸತ್ವ.

### ಆರುಂ ಮೆಟ್ಯಾಲಿಕಂ

ಆರುಂ ರೋಗಿ ತನ್ನನ್ನು ತಾನೇ ನಿಂದಿಸಿಕೊಳ್ಳುವವನು ಹಾಗೂ ತಾನು ಅಯೋಗ್ಯನೆಂಬ ಭಾವನೆಯವನು. ಹೆಚ್ಚು ರಕ್ತದ ಒತ್ತಡದಿಂದಾಗಿ ಎದೆಗುಂದಿದವನು. ಅವನು ಜೀವನದಲ್ಲಿ ಬೇಸರಗೊಂಡವನು ಹಾಗೂ ಆತ್ಮಹತ್ಯೆಯ ಆಲೋಚನೆಯುಳ್ಳವನು. ಅವನಿಗೆ ವಿಪರೀತ ಸಾವಿನ ಭಯ. ಉತ್ತರಕ್ಕಾಗಿ ಕಾಯದೆ ಮೇಲಿಂದ ಮೇಲೆ ಪ್ರಶ್ನೆ ಹಾಕುವವನು.

ಮೂತ್ರ ವಿಸರ್ಜನೆ ಕಾಲದಲ್ಲಿ ಮೂಲವ್ಯಾಧಿ ಹೊರಬರುವುದು. ಗುದದ್ವಾರದಲ್ಲಿ ಏನೋ ಹರಿದಾಡಿದಂತಾಗುವುದು ಹಾಗೂ ದ್ರವ ಸ್ರವಿಸುವುದು. ಗಟ್ಟಿಯಾದ ಗಂಟು ಗಂಟು ಮಲದೊಂದಿಗೆ ಮಲಬದ್ಧತೆ.

ಮೂವತ್ತನೆಯ ಸತ್ವ.

### ಬೆಲ್ಲಡೋನ

ಬೆಲ್ಲಡೋನ ರೋಗಿ ತನ್ನದೇ ಆದ ಪ್ರಪಂಚದಲ್ಲಿ ವಿಹರಿಸುವವನು. ಅವನಲ್ಲಿ ಬಿರಿದು ತುಂಬಿದ ಸಂವೇದನೆ ಹಾಗೂ ಅವನ ಕಣ್ಣಿಗೆ ಕಾಣುವ ನೋಟಗಳ ಪ್ರಭಾವ ಹಾಗೂ ವಿಲಕ್ಷಣ ಭ್ರಮೆ ಅವನಿಗೆ ಹುಚ್ಚು ಹಿಡಿಸುತ್ತದೆ. ಬೆದರಿಕೆ ಬೀರುವ ಆಕಾರಗಳನ್ನು ಕಾಣುತ್ತಾನೆ. ಕಚ್ಚುವುದು, ಹೊಡೆಯುವುದು, ತಪ್ಪಿಸಿಕೊಳ್ಳಲು ಆಶಿಸುವುದು ಇವುಗಳನ್ನು ನಾವು ಅವನಲ್ಲಿ ಕಾಣಬಹುದು. ಬೆಲ್ಲಡೋನ ಚಿಹ್ನೆಗಳು ಹಠಾತ್ತಾಗಿ ಕಾಣಿಸಿಕೊಳ್ಳುವವು ಹಾಗೂ ಮಾಯವಾಗುವವು. ತುಂಬು ರಕ್ತದ ದೃಢಕಾಯ ಹಾಗೂ ಕಸುವಿನಿಂದ ಕೂಡಿದವನು. ಕಫ ಹಾಗೂ ಪಿತ್ತ ಪ್ರಕೃತಿಯವನು.

ರಕ್ತಸ್ರಾವದ ಮೂಲವ್ಯಾಧಿ. ಬೆನ್ನು ಒಡೆದು ಹೋಗುವುದೇನೋ ಅನ್ನುವಷ್ಟು ಗುದದ್ವಾರದಲ್ಲಿ ಸಿಡಿತದಿಂದ ಕೂಡಿದ ಸಂಕೋಚನ.

ಮೂವತ್ತನೆಯ ಸತ್ವ.

### ಬ್ರೋಮೆಮ್

ಬ್ರೋಮೆಮ್ ರೋಗಿ ಜಗಳಗಂಟ, ನಸುಹೊಂಬಣ್ಣದ ಕೂದಲು.

ಸಂಜೆ, ಮಧ್ಯರಾತ್ರಿಯವರೆಗೆ, ಬೆಚ್ಚನೆ ಕೋಣೆಯಲ್ಲಿ ಕುಳಿತಾಗ, ವಿಶ್ರಾಂತಿ ಪಡೆಯುತ್ತಿದ್ದಾಗ ಉಲ್ಬಣ. ಯಾವುದೇ ರೀತಿಯ ಚಲನೆಯಿಂದ, ವ್ಯಾಯಾಮದಿಂದ, ಸಮುದ್ರದ ಬಳಿ ಉತ್ತಮ.

ಕಪ್ಪು ಮಲದೊಂದಿಗೆ ನೋಯುವ ಮೂಲವ್ಯಾಧಿ.

ಮೂವತ್ತನೆಯ ಸತ್ವ.

### ಕ್ಯಾಲ್ಕೇರಿಯ ಕಾರ್ಬನಿಕ

ಕ್ಯಾಲ್ಕೇರಿಯ ರೋಗಿ ವ್ಯಾಕುಲದವನು. ವಿವೇಕ ಶೂನ್ಯತೆ, ದುರದೃಷ್ಟ ಹಾಗೂ ಸಾಂಕ್ರಾಮಿಕ ಸೋಂಕಿನ ಬಗ್ಗೆ ಹೆದರುವವನು. ಕೊಂಚ ಮಿದುಳು ಉಪಯೋಗಿಸಿದ

ಕೂಡಲೇ ತಲೆ ಬೆಚ್ಚಗಾಗುವುದು. ದಣಿಯಲು ಹಾಗೂ ಕೆಲಸ ಮಾಡಲು ಆಸಕ್ತಿಯಿಲ್ಲದವನು.ದಪ್ಪಹಾಗೂಥಡೂತಿಪ್ರಕೃತಿ.

ಮೂವತ್ತನೆಯಸತ್ವ.ವಯೋವೃದ್ಧರಲ್ಲಿಪುನಃಪ್ರಯೋಗಸಲ್ಲದು.

### ಕ್ಯಾಲ್ಕರೀಯ ಫ್ಲೋರ್

ಕ್ಯಾಲ್ಕೇರಿಯ ಫ್ಲೋರ್‌ರೋಗಿ ಖಿನ್ನತೆಯವನು, ಕಾರಣವಿಲ್ಲದೆ ಆರ್ಥಿಕ ಮುಗ್ಗಟ್ಟಿನ ಬಗ್ಗೆ ಹೆದರುವವ.

ರಕ್ತಸ್ರಾವದ ಮೂಲವ್ಯಾಧಿ, ಗುದದ್ವಾರದಲ್ಲಿ ಸಣ್ಣ ಚಿಲುಮೆ ಹುಳಗಳಿರುವಂತೆ ಕಡಿತ.ಬೆನ್ನುನೋವಿನೊಂದಿಗೆ ಒಳ ಅಥವಾ ಹೊರ ಮೂಲವ್ಯಾಧಿ.

೧೨x ಅರೆತದ ಸತ್ವದ್ದು. ಇದು ಒಂದು ಟಿಷ್ಯೂ ಔಷಧ. ಹಳೆಯ ರೋಗದ ಔಷಧ ಎಂದು ಕರೆಯಲ್ಪಟ್ಟಿದೆ. ಪರಿಣಾಮ ಬೀರಲು ಸಮಯ ತೆಗೆದುಕೊಳ್ಳುವುದು. ಮೇಲಿಂದ ಮೇಲೆ ಪ್ರಯೋಗ ವರ್ಜಿಸಬೇಕು.

### ಕ್ಯಾಪ್ಸಿಕಮ್

ಕ್ಯಾಪ್ಸಿಕಂ ರೋಗಿ ಮನೆ ಹಂಬಲದವನು. ಅವನು ವಿಪರೀತ ಸಿಡುಕಿನವನು. ಅಂಜುಬುರುಕ.ಆದರೆಸ್ಥೂಲ, ಕಫ ಪ್ರಕೃತಿಯವನು.

ಗುದದ್ವಾರ ಬಾತುಕೊಂಡಿರುವ ರಕ್ತಸ್ರಾವದ ಮೂಲವ್ಯಾಧಿ, ಮಲವಿಸರ್ಜನೆಯ ಕಾಲದಲ್ಲಿ ಚುಚ್ಚುವ ನೋವು.

ಆರನೇ ಸತ್ವ.

### ಕಾರ್ಬೋ ಅನಿಮಾಲಿಸ್

-ಕಾರ್ಬೋ ಅನಿಮಾಲಿಸ್ ರೋಗಿ ಏಕಾಂಗಿಯಾಗಿರಲು ಬಯಸುತ್ತಾನೆ. ಸಂಭಾಷಣೆಗಳನ್ನು ತಪ್ಪಿಸಿಕೊಳ್ಳುತ್ತಾನೆ. ಅವನು ರಕ್ತದ ತೀವ್ರೋದ್ರೇಕದೊಂದಿಗೆ ವ್ಯಾಕುಲತೆಯಿಂದ ಕೂಡಿದವನು. ಗ್ರಂಥಿ ಬಾವಿನ ಹಾಗೂ ಅಭಿದಮನಿ (Venous) ಪ್ರಕೃತಿಯವನು.

ಉರಿಯುವ, ಚುಚ್ಚುವ ಮೂಲವ್ಯಾಧಿ, ಗಟ್ಟಿ ಹಾಗೂ ಗಂಟು ಗಂಟು ಮಲ, ವೃಥಾ ತಿಣುಕುವ ರೀತಿಯ ಮಲಬದ್ಧತೆ.ದುರ್ಗಂಧದ ವಾಯು ಹೋಗುವುದು.

ಮೂವತ್ತನೆಯ ಸತ್ವ.

### ಕಾರ್ಬೋ ವೆಜಿಟಬಲಿಸ್

ಕಾರ್ಬೋ ವೆಜಿಟಬಲಿಸ್ ರೋಗಿ ಕತ್ತಲಿಗೆ ಹೆದರುವವನು. ಅವನು ಜಡ ಸ್ವಭಾವದವನು.ಸ್ಥೂಲ ಕಾಯ ಹಾಗೂ ಸೋಮಾರಿ.

ಮೂವತ್ತನೆಯ ಸತ್ವ.

### ಕಾರ್ಡಸ್ ಮ್ಯಾರಿನಸ್

ಕಾರ್ಡಸ್ ರೋಗಿ ಮರೆವಿನ ಸ್ವಭಾವದವನು ಹಾಗೂ ನಿರಾಸಕ್ತ. ರಕ್ತದ ಮೂಲವ್ಯಾಧಿ.ಗುದನಳಿಕೆ ಹೊರಹಾಯುವುದು.ಗಂಟು ಗಂಟು ಜಿಗಟು ಮಲ.

ಆರನೇ ಸತ್ವ.

### ಕಾಸ್ಟಿಕಂ

ಕಾಸ್ಟಿಕಂ ರೋಗಿ ವ್ಯಾಕುಲ ಸ್ವಭಾವದವನು, ನಿರಾಶೆಯವನು ಹಾಗೂ ಅನುಕಂಪದ

ವನು. ಬಹುಕಾಲದ ಚಿಂತೆಯಿಂದ ಹಾಗೂ ಒಮ್ಮಿಂದೊಮ್ಮೆಲೆ ಕಾಣಿಸಿಕೊಂಡ ಭಾವಾವೇಶದಿಂದ ಉಂಟಾದ ತೊಂದರೆಗಳು. ತೊಂದರೆಗಳ ಬಗ್ಗೆ ಆಲೋಚಿಸುವಾಗ ಉಲ್ಬಣ.(ತತ್ರಾಪಿ ಮೂಲವ್ಯಾಧಿ ಚಿಹ್ನೆಗಳು).

ಗುದದ್ವಾರದಲ್ಲಿ ಯಾತನೆ ಕೊಡುವ ಉರಿ. ಗುದದ್ವಾರದ ಭಗಂದರ ಹಾಗೂ ಮೂಲವ್ಯಾಧಿ.

ಮೂವತ್ತನೆಯ ಸತ್ವ.

### ಚಮೊಮಿಲ್ಲ

ಚಮೊಮಿಲ್ಲ ರೋಗಿ ಅಳುಬುರುಕ ಸ್ವಭಾವದವನು. ತಲ್ಲಣದಿಂದ ಕೂಡಿರುವವನು. ಅನೇಕ ವಸ್ತುಗಳನ್ನು ಬೇಡುತ್ತಾನೆ. ನೀಡಿದಾಗ ತಿರಸ್ಕರಿಸುತ್ತಾನೆ. ಮತ್ಸರ ಹಾಗೂ ಜಡ ಸ್ವಭಾವದವನು. ತಾಳ್ಮೆಯಿಲ್ಲದವನು.

ಮಾತನಾಡಿಸಿದರೆ, ಮಾತನಾಡುವಾಗ ಅಡ್ಡ ಹೋದರೆ ಸಹಿಸದವನು. ಸಿಟ್ಟು ಹಾಗೂ ಕಾಡುವಿಕೆಯಿಂದ ಕಾಣಿಸಿಕೊಂಡ ತೊಂದರೆಗಳು.

ಗುದದ್ವಾರ ಬಿರಿತಿರುವುದು

ಮೂವತ್ತನೆ ಸತ್ವ.

### ಕ್ರೋಮಿಕಂ ಆಸಿಡಮ್

ಕ್ರೋಮಿಕಂ ಚಿಹ್ನಗಳು ಒಮ್ಮಿಂದೊಮ್ಮೆಲೆ ಕಾಣುವವು ಹಾಗೂ ಮಾಯವಾಗುವವು.

ರಕ್ತಸ್ರಾವದ ಒಳ ಮೂಲವ್ಯಾಧಿ. ಟೊಂಕದಲ್ಲಿ ನಿತ್ರಾಣ.

ಆರನೆಯ ಅರೆತದ್ದು.

### ಕೊಲಿನ್ ಸೋನಿಯ ಕ್ಯಾನಡೆನ್ಸಿಸ್

ಕೊಲಿನ್ ಸೋನಿಯ ರೋಗಿ ಎಲ್ಲೊ ಕಿಂಚಿತ್ ಮಾನಸಿಕ ಉದ್ವೇಗ ಹಾಗೂ ಕೆರಳುವಿಕೆಯಿಂದ ಹೆಚ್ಚು ತೊಂದರೆ ಅನುಭವಿಸುವವನು.

ಶಾಖದಿಂದ ಉಪಶಮನ.

ಗುದದ್ವಾರದ ಶಸ್ತ್ರಚಿಕಿತ್ಸೆಯ ಮುನ್ನ ಪ್ರಯೋಗಕ್ಕೆ ಅಮೂಲ್ಯವಾದುದು ಎಂದು ಹೆಸರುಗಳಿಸಿದೆ. ಮಲಬದ್ಧತೆಯೊಂದಿಗೆ ಮೂಲವ್ಯಾಧಿ. ಬಹುತೇಕ ಮಹಿಳೆಯರಲ್ಲಿ ಹೆಚ್ಚು ಸೂಚಿಸಲ್ಪಟ್ಟಿರುತ್ತದೆ.

ಗರ್ಭಿಣಿಯರ ಮೂಲವ್ಯಾಧಿಯಲ್ಲಿ ತುರಿಕೆ. ನೋವಿನಿಂದ ಕೂಡಿದ ರಕ್ತಸ್ರಾವದ ಮೂಲವ್ಯಾಧಿ. ಗುದದ್ವಾರದಲ್ಲಿ ಕಡಿತ.

ಮೂವತ್ತನೆಯ ಸತ್ವ.

### ಕೋಪಿಯಾವ

ಗುದದ್ವಾರದಲ್ಲಿ ಉರಿಯುವ ತುರಿಕೆಯ ಮೂಲವ್ಯಾಧಿ:

ಮೂರನೆ ಸತ್ವ.

### ಡಯಾಸ್ಕೋರಿಯ ವಿಲೋಸ್

ಡಯಾಸ್ಕೋರಿಯ ರೋಗಿ ವಸ್ತುಗಳನ್ನು ತಪ್ಪು ಹೆಸರಿನಿಂದ ಕರೆಯುವವನು,

ಕುಂದಿದ ಜೀರ್ಣ ಶಕ್ತಿಯವನು, ವಾಯುಪ್ರಕೋಪದಿಂದ ನರಳುವ. ಚಹಸೇವನೆಯ ಹವ್ಯಾಸ ಉಳ್ಳವನು, ಸಂಜೆ ಹಾಗೂ ರಾತ್ರಿ, ಮಲಗಿದಾಗ ಹೊಟ್ಟೆ ಅಮುಕುವಂತೆ ಬಗ್ಗಿದಾಗ ಉಲ್ಬಣ. ನೆಟ್ಟಗೆ ನಿಂತಾಗ; ಹೊರ ಗಾಳಿಯಲ್ಲಿ ಓಡಾಡುವುದರಿಂದ, ಒತ್ತುವುದರಿಂದ ಉತ್ತಮ. ಪಿತ್ತಕೋಶದಲ್ಲಿ ಈಟಿ ಹಾಕಿದಂತೆ ನೋವು. ಮೂಲವ್ಯಾಧಿ ದ್ರಾಕ್ಷಿಯ ಗೊಂಚಲಿನಂತೆ ಅಥವಾ ಕೆಂಪು ಚೆರ್ರಿ ಹಣ್ಣುಗಳಂತೆ ಕಾಣುವ ಮೂಲವ್ಯಾಧಿ, ಮಲವಿಸರ್ಜನೆಯ ನಂತರ ನೋವಿನೊಂದಿಗೆ ಗುದನಾಳ ಹೊರಹಾಯುವುದು.

ಮೂವತ್ತನೆಯ ಸತ್ವ.

### ಫೆರಂಫಾಸ್

ಫೆರಂಫಾಸ್ ರೋಗಿ ಸುಳ್ಳೇ ಅತಿರಕ್ತ ಸಮೃದ್ಧಿ ಪಡೆದವನಂತೆ ಇರುತ್ತಾನೆ ಹಾಗೂ ಮುಖ ಕೆಂಪೇರುತ್ತದೆ.

ರಾತ್ರಿ ಮತ್ತು ಬೆಳಗಿನ ಜಾವ ೪ ರಿಂದ ೬ ರವರೆಗೆ ಸ್ಪರ್ಶದಿಂದ, ಚಲನೆಯಿಂದ, ಬಲಭಾಗದಲ್ಲಿ ಉಲ್ಬಣ. ತಣ್ಣನೆಯ ಲೇಪನದಿಂದ ಉತ್ತಮ.

ಹನ್ನೆರಡನೆ ಸತ್ವ.

### ಫೀಕಸ್ ರಿಲಿಜಿಯೋಸ್

ಫೀಕಸ್ ರಿಲಿಜಿಯೋಸ್ ರೋಗಿ ಖಿನ್ನತೆಯವನು, ಸಮಾಧಾನಿ.

ಮೂಲವ್ಯಾಧಿಯಿಂದ ಅಚ್ಚ ಕೆಂಪು ರಕ್ತಸ್ರಾವವಾಗುವುದು.

ಒಂದನೆ ಸತ್ವ.

### ಫ್ಲೋರಿಕ್ ಆಸಿಡ್

ಫ್ಲೋರಿಕ್ ಆ್ಯಸಿಡ್ ರೋಗಿ ಅತಿ ಪ್ರೀತಿಸಿದವರ ಬಗ್ಗೆ ತಾತ್ಸಾರ ಹೊಂದಿರುತ್ತಾನೆ.

ಮಾನಸಿಕವಾಗಿ ಉತ್ಸಾಹ ಹೊಂದಿದವನು ಹಾಗೂ ವಿಲಾಸದಿಂದ ಕೂಡಿದವನು.

ಬೆಚ್ಚಗಿರುವುದರಿಂದ, ಬೆಳಿಗ್ಗೆ, ಬಿಸಿ ಪಾನೀಯಗಳಿಂದ ಉಲ್ಬಣ. ತಣ್ಣಗಿರುವುದ ರಿಂದ, ಓಡಾಡುವಾಗ ಉತ್ತಮ.

ಮೂವತ್ತನೆಯ ಸತ್ವ.

### ಗ್ರಾಫೆಟಿಸ್

ಗ್ರಾಫೆಟಿಸ್ ರೋಗಿ ಅಂಜುಬುರುಕ. ಯಾವುದನ್ನೂ ಇತ್ಯರ್ಥ ಮಾಡಲಾರ. ಕೆಲಸ ಮಾಡುವ ಮನಸ್ಸಿಲ್ಲ. ಸ್ಥಿಮಿತವಿಲ್ಲದಿರುವಿಕೆ; ಸ್ಥೂಲ ಹಾಗೂ ಸುಂದರಕಾಯ.

ಬೆಚ್ಚನೆಯದರಿಂದ, ರಾತ್ರಿ, ಬಹಿಷ್ಠೆಯಾಗುವ ಮುನ್ನ ಹಾಗೂ ನಂತರ ಉಲ್ಬಣ. ಕತ್ತಲಿನಲ್ಲಿ, ಸುತ್ತಿಕೊಳ್ಳುವುದರಿಂದ ಉತ್ತಮ.

ಉರಿಯುವ ಮೂಲವ್ಯಾಧಿ, ಮಲವು ಲೋಳೆಯ ಎಳೆಗಳಿಂದ ಕೂಡಿರುತ್ತದೆ. ಗುದದ್ವಾರ ಒಡೆದಿರುತ್ತದೆ.

ಮೂವತ್ತನೆಯ ಸತ್ವ.

### ಗ್ರಾಟಿಯೋಲ

ಗ್ರಾಟಿಯೋಲ ರೋಗಿ ದುರಹಂಕಾರ, ಗರ್ವದ ಪರಿಣಾಮವಾಗಿ ಆದ ಮಾನಸಿಕ

ತೊಂದರೆಗಳನ್ನು ಹೊಂದಿರುತ್ತಾನೆ.

ಅತಿ ಹೆಚ್ಚು ನೀರು ಕುಡಿಯುವುದರಿಂದ ಉಲ್ಬಣ. ಪ್ರಬಲ ರೋಗದ ಭ್ರಾಂತಿಯಿಂದ ಕೂಡಿದ ಮೂಲವ್ಯಾಧಿ. ಗುದದ್ವಾರ ಸಂಕೋಚನಗೊಂಡಿರುತ್ತದೆ.

ಮೂವತ್ತನೆಯ ಸತ್ವ.

### ಹ್ಯುಮೂಮಿಲಿಸ್

ತನಗೆ ಸಲ್ಲಬೇಕಾದ ಗೌರವ ನೀಡಲೇಬೇಕೆಂದು ಹ್ಯುಮೂಮಿಲಿಸ್ ರೋಗಿ ಅಪೇಕ್ಷಿಸುತ್ತಾನೆ. ಅಭಿಧಮನಿ (Venous) ರಕ್ತ ಸಂಚಯಕ್ಕೆ ಔಷಧ.

ತೇವ ಗಾಳಿಯಿಂದ ಉಲ್ಬಣ.

ಮೂಲವ್ಯಾಧಿ ಜಾತು ವಿಪರೀತ ಅಭಿಧಮನಿ (ಕಪ್ಪು ಕರಣೆಗಳಿಂದ ಕೂಡಿದ) ರಕ್ತಸ್ರಾವ ಆಗುವುದು.

ಆರನೆಸತ್ವ. ಕೆಲವು ವೈದ್ಯರು ರಕ್ತಸ್ರಾವದ ಮೂಲವ್ಯಾಧಿಯಲ್ಲಿ ಇದರ ಬಾಹ್ಯ ಮೂಲ ಸತ್ವವನ್ನು ನೀರಿನೊಂದಿಗೆ ಬೆರೆಸಿ ಗುದದ್ವಾರದಲ್ಲಿ ಪಿಚಕಾರಿ ಹೊಡೆಯಲು ಉಪಯೋಗಿಸುತ್ತಾರೆ. ಇದು ಬಾಹ್ಯ ಚಿಕಿತ್ಸೆ.

### ಹೈಪರ್ ಸಲ್ಫ್ಯೂರಿಯಸ್ ಕ್ಯಾಲ್ಕೇರಿಯಂ

ಹೈಪರ್ ಸಲ್ಫ್ ರೋಗಿ ನಿರುತ್ಸಾಹದಿಂದ ಕೂಡಿದವನು. ವ್ಯಾಕುಲವಂತ. ಸ್ವಲ್ಪ ಕಾರಣಕ್ಕಾಗಿ ರೇಗುವವನು. ಆತ್ಮಹತ್ಯೆಯ ಆಲೋಚನೆಯೊಂದಿಗೆ ಅವನು ಸಂಜೆ ಮತ್ತು ರಾತ್ರಿ ಯಾತನೆಪಡುವವನು. ಗ್ರಂಥಿಗಳ ಬಾವಿನ ಹಾಗೂ ದುಗ್ಧರಸಾಧಿಕ್ಯದ (Scrotulous and lymphatic) ಪ್ರಕೃತಿಯವನು. ಚರ್ಮ ಅನಾರೋಗ್ಯಕರವಾದುದು.

"ರಕ್ತನಾಳದ ದ್ವಾರದಲ್ಲಿ ಅಡ್ಡಿಯಿಂದ (Portal obstruction) ಕಾಣಿಸಿಕೊಂಡ ಮೂಲವ್ಯಾಧಿ. ಸುಲಭವಾಗಿ ಹೈಪರ್‌ಸಲ್ಫ್‌ನಿಂದ ವಾಸಿಯಾಗುವುದು" (ಹೆರಿಂಗ್)

ಹೆಚ್ಚಿನ ಸತ್ವದ ಔಷಧ. ಮೇಲಿಂದ ಮೇಲೆ ಪ್ರಯೋಗಿಸದ ಪ್ರಮಾಣ.

### ಹೈಡ್ರ್ಯಾಸ್ಟಿಸ್

ಹೈಡ್ರ್ಯಾಸ್ಟಿಸ್ ರೋಗಿ ಖಿನ್ನನಾದವನು. ಅವನಿಗೆ ಸಾವು ನಿಶ್ಚಯ ಎನಿಸಿರುತ್ತದೆ. ಅದನ್ನೇ ಬಯಸುತ್ತಾನೆ. ಬೇಗ ಬಳಲುವ ವೃದ್ಧ, ನಿತ್ರಾಣದಿಂದ ಬಳಲುವ ಅಸ್ವಸ್ಥ ವ್ಯಕ್ತಿಗಳು. ರೋಗಿ ತನ್ನ ಜ್ಞಾಪಕ ಮೊನಚಾದ ಹಾಗೆ, ತನ್ನ ತಲೆ ನಿರ್ಮಲವಾದ ಹಾಗೆ ಭ್ರಮಿಸುತ್ತಾನೆ. ಮೂಲವ್ಯಾಧಿಯಿಂದ ಅಲ್ಪಸ್ರಾವವಾದರೂ ಅವನು ನಿತ್ರಾಣನಾಗುತ್ತಾನೆ. ಗುದದ್ವಾರ ಹೊರಚಾಯ್ದಿರುವುದು. ಒಡೆದಿರುವುದು, ಒಳಹೊಟ್ಟೆಯಲ್ಲಿ ಸಂಕಟದಿಂದ ಕೂಡಿದ ಮಲಬದ್ಧತೆ. ಮಲವಿಸರ್ಜನೆ ಕಾಲದಲ್ಲಿ ಸಿಡಿಯುವ ನೋವು.

ಮೂವತ್ತನೆಯ ಸತ್ವ.

### ಇಗ್ನೇಶಿಯ

ಇಗ್ನೇಶಿಯ ರೋಗಿ ಬದಲಾಯಿಸುವ ಮನೋಭಾವನೆಯವನು. ಮೌನವಾಗಿ ಒಳಗೇ ಕೊರಗುವವನು. ಸುಲಭವಾಗಿ ಉದ್ರೇಕಗೊಳ್ಳುವವ ಕಪ್ಪು ಹಾಗೂ ಸಾಧು

ಸ್ವಭಾವದವ ಗಾಬರಿ ಪ್ರಕೃತಿಯವನು. ಗಾಬರಿಗೊಳ್ಳುವ ಮಹಿಳೆಯರಿಗೆ ಹೊಂದುವ ಔಷಧ. ಬೇಗ ಅರ್ಥಮಾಡಿಕೊಂಡು ಶೀಘ್ರ ಕೆಲಸಕ್ಕೆ ತೊಡಗುವವರು. ಅತಿಯಾದ ವಿರೋಧಪ್ರವೃತ್ತಿ (Great Contradition).

ವಿಶ್ರಾಂತಿಯಲ್ಲಿದ್ದಾಗ, ಕುಳಿತಾಗ ಉಲ್ಬಣ. ಒತ್ತುವುದರಿಂದ, ಉಜ್ಜುವದರಿಂದ ಚಲನೆಯಿಂದ ಉತ್ತಮ.

ಮೂವತ್ತನೆಯ ಸತ್ವ.

## ಕಾಲಿ ಮ್ಯೂರಿಯಾಟಿಕಂ

ಕಾಲಿಮ್ಯೂರ್ ಟಿಷ್ಯೂ ಔಷಧ. ಕಾಲಿಮ್ಯೂರ್ ರೋಗಿ ತಾನು ಉಪವಾಸವಿರಬೇಕಾದಿತೆಂದು ಭಾವಿಸುತ್ತಾನೆ. ನಾಲಿಗೆಯ ಮೇಲೆ ದಪ್ಪ ಬಿಳಿಯ ಲೇಪನ ವಿದ್ದಿರುವುದು ಮಾರ್ಗದರ್ಶನ ಚಿಹ್ನೆ.

ಮೂಲವ್ಯಾಧಿ: ರಕ್ತಸ್ರಾವದ್ದು. ಕಪ್ಪು ಹಾಗೂ ಮಂದ ರಕ್ತ, ಎಳೆಯುಕ್ತವಾಗಿ, ಕರಣೆಗಳಿಂದ ಕೂಡಿದ್ದು.

ಮೂವತ್ತನೆಯ ಸತ್ವ.

## ಕಾಲಿಸಲ್ಫ್

ಇದು ಇನ್ನೊಂದು ಟಿಷ್ಯೂ ಔಷಧ. ಬಿಸಿ ಪಾನೀಯ ಕುಡಿಯಲು ಕಾಲಿಸಲ್ಫ್ ರೋಗಿಗೆ ಹೆದರಿಕೆ.

ಬೆಚ್ಚನೆಯ ಕೊಠಡಿಯಲ್ಲಿ ಉಲ್ಬಣ. ತಣ್ಣನೆಯ, ಹೊರ ಹವೆಯಲ್ಲಿ ಉತ್ತಮ.

ಮೂಲವ್ಯಾಧಿಯೊಂದಿಗೆ ಮಲಬದ್ಧತೆ. ಸ್ರವಿಸಿದ ದ್ರವ ಹಳದಿ.

ಹನ್ನೆರಡನೆಯ ಸತ್ವ.

## ಲಕೆಸಿಸ್

ಲಕೆಸಿಸ್ ರೋಗಿ ವಾಚಾಳಿ, ಪ್ರಪಂಚದೊಂದಿಗೆ ಸೇರಬಯಸುವುದಿಲ್ಲ. ತಲ್ಲಣವಿದ್ದವನು, ಶಾಂತಿಯಿಲ್ಲದವನು. ತನ್ನ ವ್ಯವಹಾರಕ್ಕೆ ನಿಗಾ ಕೊಡಲು ಬಯಸುವುದಿಲ್ಲ. ಯಾವಾಗಲೂ ಎಲ್ಲಿಗಾದರೂ ಹೋಗಿ ಬಿಡಬೇಕೆಂದು ಆಶಿಸುವವನು. ಅವನು ಹೊಟ್ಟೆಕಿಚ್ಚಿನವನು ಹಾಗೂ ಸಂಶಯಗ್ರಸ್ತ. ದೇಹದ ಅನೇಕ ಭಾಗಗಳಲ್ಲಿ ಎಳೆದಹಾಗೆ ಅವನಿಗೆ ಅನಿಸುವುದು.

ಮೂಲವ್ಯಾಧಿ ಹೊರ ಹಾಯ್ದಿರುತ್ತದೆ. ಸಂಕುಚಿತಗೊಂಡಿರುತ್ತದೆ. ಸೀನುವಾಗ, ಕೆಮ್ಮುವಾಗ ಸಿಡಿಯುವಂತೆ ನೋಯುವ ಬೂದು ಬಣ್ಣದ ಮೂಲವ್ಯಾಧಿ. ಗುದದ್ವಾರದಲ್ಲಿ ಮೇಲಿಂದ ಮೇಲೆ ತಿಣುಕುವಂತಾಗುವುದು, ಮಲ ವಿಸರ್ಜನೆ ಆಗುವುದಿಲ್ಲ. ಸುಟ್ಟ ಹುಲ್ಲಿನಂತಹ ಕಪ್ಪುಗಟ್ಟಿದ ಮಲ ವಿಸರ್ಜನೆ. ಕಪ್ಪು ಕಣಗಳು, ಮಲಬದ್ಧತೆ, ಗುದದ್ವಾರದಿಂದ ಏನೂ ಹಾದುಹೋಗದಂತೆ ಅದು ಬಿಗಿಯಾಗಿರುವುದು.

ಇನ್ನೂರನೆ ಸತ್ವ. ಮೇಲಿಂದ ಮೇಲೆ ಪ್ರಯೋಗಿಸಬಾರದು.

## ಲೈಕೋಪೋಡಿಯಂ

ಲೈಕೋಪೋಡಿಯಂ ರೋಗಿ ಬೌದ್ಧಿಕವಾಗಿ ಉತ್ಸಾಹಿ ಹಾಗೂ ದೈಹಿಕ ನಿತ್ರಾಣವಿರುವವನು. ಏಕಾಂಗಿಯಾಗಿರಲು ಅವನಿಗೆ ಹೆದರಿಕೆ. ಹೊಸದಾಗಿ ಏನನ್ನು ಪ್ರಾರಂಭಿಸಲೂ ಇಚ್ಛೆಯಿಲ್ಲದವನು. ರೋಗವಿದ್ದಾಗ ಹಟಮಾರಿ ಹಾಗೂ ಗರ್ವ

ದಿಂದ ಕೂಡಿದವನು. ಆತ್ಮವಿಶ್ವಾಸವಿಲ್ಲದವನು. ತಿನ್ನುವಾಗ ಅವಸರ. ಅಲ್ಪಕ್ಕೆ ಕಿರುಕುಳಪಡುವವನು. ಸೌಮ್ಯ ಸ್ವಭಾವದ ದುಗ್ಧರಸಾಧಿಕ್ಯದ (Lymphatic) ಪ್ರಕೃತಿಯವನು.

ಇನ್ನೂರು ಹಾಗೂ ಹೆಚ್ಚಿನ ಸತ್ವ. ಮೇಲಿಂದ ಮೇಲೆ ಪ್ರಯೋಗಿಸದ ಪ್ರಮಾಣದಲ್ಲಿ.

### ಮ್ಯಾಗ್ನೀಶಿಯ ಮ್ಯೂರಿಯಾಟಿಕ

ಮ್ಯಾಗ್‌ಮ್ಯೂರ್ ಸಾಧಾರಣವಾಗಿ ಬಹುಕಾಲದ ಅಜೀರ್ಣವ್ಯಾಧಿ, ಗರ್ಭಕೋಶದ ತೊಂದರೆ ಅನುಭವಿಸಿದ ಮಹಿಳೆಯರಿಗೆ ಆಯ್ದುಕೊಳ್ಳಬಹುದಾದದ್ದು.

ಉರಿಯುವ ನೋವಿನ ಮೂಲವ್ಯಾಧಿ. ಮಲ ಗಂಟುಗಂಟಾಗಿ ಚೂರುಚೂರಾಗಿ ಗುದದ್ವಾರದ ಅಂಚಿನಲ್ಲಿರುವುದು.

ಮೂವತ್ತನೆಯ ಸತ್ವ.

### ಮಿಲಿ ಫೋಲಿಯಂ

ಮಿಲಿ ಫೋಲಿಯಂ ರೋಗಿಗೆ ಅವನು ಏನೋ ಮರೆತಿರುವಂತೆ ಅನಿಸುವುದು.

ಅಚ್ಚಕೆಂಪು ರಕ್ತಸ್ರಾವದ ಮೂಲವ್ಯಾಧಿ

ಮೂರನೇ ಸತ್ವ.

### ಮ್ಯೂಕ್ಯೂರ ಫ್ಯೂರೆನ್ಸ್

ಉರಿಯುವ ಮೂಲವ್ಯಾಧಿ. ಮೂಲವ್ಯಾಧಿಯ ಪ್ರಕೃತಿ. ಮಾತ್ರ ಸತ್ವದ ಎರಡು ಮೂರು ಹನಿಗಳು. ಎರಡು ಮೂರು ಸಲ ಎರಡು ಮೂರು ದಿನ ಪ್ರಯೋಗಿಸಬಹುದು.

### ಮ್ಯೂರಿಯಾಟಿಕ್ ಆ್ಯಸಿಡ್

ಮ್ಯೂರಿಯಾಟಿಕ್ ಆ್ಯಸಿಡ್ ರೋಗಿ ಅನಿಶ್ಚಿತ ಬುದ್ಧಿಯವನು, ಮುಂಗೋಪದವನು. ಸಂಕಟಪಟ್ಟು ಜೋರಾಗಿ ನರಳುವವನು. ವಿಪರೀತ ತಲ್ಲಣದಿಂದ ಕೂಡಿದವನು. ವ್ಯಾಕುಲದ ಗುಮ್ಮನಗುಸುಗ, ಮೌನದಲ್ಲಿ ನರಳುವವನು, ಭಾರಿ ನಿತ್ರಾಣದಿಂದ ಹಾಸಿಗೆಯ ಮೇಲೆ ಜಾರಿ (Slide) ಮಲಗುವವನು.

ತೇವಹವೆಯಿಂದ, ಮಧ್ಯರಾತ್ರಿಯ ಮುನ್ನ ಉಲ್ಬಣ. ಎಡಪಾರ್ಶ್ವದಲ್ಲಿ ಮಲಗುವುದರಿಂದ ಉತ್ತಮ. ಯಾವ ವಿಧವಾದ ಸ್ಪರ್ಶವನ್ನೂ ಸ್ವಲ್ಪವೂ ಸಹಿಸದ ಸೂಕ್ಷ್ಮ ಮೂಲವ್ಯಾಧಿ. ಮೂರನೆ ಸತ್ವ

### ನೈಟ್ರಿಕ್ ಆ್ಯಸಿಡ್

ನೈಟ್ರಿಕ್ ಆ್ಯಸಿಡ್ ರೋಗಿ ಮುಂಗೋಪದವನು. ಹೀಯಾಳಿಸುವವ, ಸಮರ್ಥಿಸಿಕೊಳ್ಳುವವನು ಹಾಗೂ ತಲೆಹರಟೆ. ಪಾದರಸದ ದುರುಪಯೋಗದ ನಂತರದ ಉಪದಂಶ ರೋಗಿ. ಜಲಜನಕ ಪ್ರಕೃತಿ (Hydrogenoid).

ಸುಲಭವಾಗಿ ರಕ್ತ ಸ್ರವಿಸುವುದು. ಹಿಂದೊಮ್ಮೆ ರಕ್ತಸ್ರವಿಸುತ್ತಿದ್ದು, ಈಗ ರಕ್ತಸ್ರಾವ ನಿಂತಿರುವ ಮೂಲವ್ಯಾಧಿ. ಬಿರಿತದಿಂದ ಕೂಡಿದ ಮೂಲವ್ಯಾಧಿ. ಮಲಬದ್ಧತೆ, ಗುದನಾಳ ಹೊರಹಾಯುವುದು. ಪ್ರವರ್ತಿಯ ನಂತರ ಮುಂಗೋಪ, ನಿತ್ರಾಣ.

ಹನ್ನೆರಡನೆಯ ಸತ್ವ.

### ನಕ್ಸೋಮಿಕ

ನಕ್ಸೋಮಿಕ ಮೂಲವ್ಯಾಧಿಗೆ ಅಮೋಘ ಔಷಧ. ಅನೇಕ ಪುರುಷ ಮೂಲವ್ಯಾಧಿ ರೋಗಿಗಳು ಇದರಿಂದ ಬಹಳ ಲಾಭಹೊಂದಿದ್ದಾರೆ.

ನಕ್ಸೋಮಿಕ ಲಕ್ಷಣದ ಮೂಲವ್ಯಾಧಿ ರೋಗಿ ಬಹುಸಿಡುಕಿನವನು, ಅಗುಹೋಗುಗಳಿಗೆ ಸೂಕ್ಷ್ಮತೆ ಪಡೆದವನು. ಅಪಲಕ್ಷಣದವನು, ಹಗೆತನದವನು. ಧ್ವನಿಗಳು, ವಾಸನೆ, ಬೆಳಕು ಮುಂತಾದವುಗಳನ್ನು ಸಹಿಸದವನು. ಬಿಗಡಾಯಿಸಿಕೊಂಡಿರುವವನು ಹಾಗೂ ತಪ್ಪು ಹುಡುಕುವವನು. ತೆಳ್ಳನೆಯ ಚುರುಕಾದ, ಚಟುವಟಿಕೆಯುವನು ಹಾಗೂ ಮುಂಗೋಪಿ.

೨೦೦ನೇ ಸತ್ವದ ಔಷಧ. ರಾತ್ರಿ ಊಟದ ನಂತರ, ಒಂದು ಗಂಟೆಯ ಮೇಲೆ ಮಲಗುವುದಕ್ಕೆ ಮುನ್ನ ಪ್ರಯೋಗಿಸಬೇಕು.

### ಪಯೋನಿಯ

ಪಯೋನಿಯ ರೋಗಿ ಅಂಜುಬುರಕ. ಮೂಲವ್ಯಾಧಿ ಬಿರಿತಿರುವುದು, ಗುದದ್ವಾರದಲ್ಲಿ ಹುಣ್ಣಾಗಿರುವುದು, ಪ್ರವರ್ತಿಯ ನಂತರ ಉರಿ, ನಂತರ ಒಳ ಚಳಿ, ಗುದಭಗಂದರ.

ಮೂಲಸತ್ವ.

### ಪೋಡೋಫಿಲಂ

ಪೋಡೋಫಿಲಂ ರೋಗಿ ಸನ್ನಿಯಿಂದ ಕೂಡಿದವನು, ಪಿತ್ತಪ್ರಕೃತಿಯವನು.

ಬೆಳಗಿನ ಜಾವ, ಶಾಖ ಹವಾಮಾನದಲ್ಲಿ, ಹಲ್ಲುಬರುವ ವೇಳೆಯಲ್ಲಿ ಉಲ್ಬಣ. ಹೊರ ಮತ್ತು ಒಳ ಮೂಲವ್ಯಾಧಿ. ಗರ್ಭಿಣಿ ಇದ್ದಾಗ ಗುದನಾಳ ಹೊರಗೆ ಹಾಯುವುದರೊಂದಿಗೆ ಮೂಲವ್ಯಾಧಿ. ಪಿತ್ತಕೋಶದ ದೋಷ, ರಕ್ತನಾಳದಲ್ಲಿ ರಕ್ತ ಕಟ್ಟಿರುವುದರಿಂದ, ಕೂಡಿದ ಮೂಲವ್ಯಾಧಿ. ಮಲಬದ್ಧತೆ ಇಲ್ಲವೆ ಭೇದಿ ಒಂದರ ನಂತರ ಒಂದರಂತೆ ಆಗುವುದು.

ಆರನೇಸತ್ವ.

### ಪಾಲಿಗೋನಂಪಂಕ್ಟೇಟಮ್

ಗುದದ್ವಾರದ ಒಳಗೆ ಪ್ರಧಾನವಾಗಿ ಎದ್ದು ಕಾಣುವ ತುರಿಕೆ. ಮೂಲವ್ಯಾಧಿ. ನೀರು ಭೇದಿ. ಮಾತ್ರದ್ರವ.

### ಪಲ್ಸೆಟಿಲ್ಲ

ಪಲ್ಸೆಟಿಲ್ಲ ರೋಗಿಗಳು ಪುಕ್ಕರು, ಅಸ್ಥಿರಸ್ವಭಾವದವರು, ಶೀಘ್ರ ಅಳುವವರು, ಅನುಕಂಪ ಬಯಸುತ್ತಾರೆ. ಪ್ರತಿ ಲಿಂಗ (Opposite Sex) ದವರ ಬಗ್ಗೆ ವ್ಯಾಧಿ ಲಕ್ಷಣದ ಹೆದರಿಕೆ. ಅತೀವ ಉದ್ರೇಕಗೊಳ್ಳುವವರು. ಸಾಧು, ಸೌಮ್ಯ ಹಾಗೂ ಒಗ್ಗುವ (Yielding) ಸ್ವಭಾವದವರು. ನಕ್ಸೋಮಿಕ ಪುರುಷರ ಔಷಧವಿದ್ದಹಾಗೆ ಪಲ್ಸೆಟಿಲ್ಲ ಮಹಿಳೆಯರ ಔಷಧ.

ಮೂವತ್ತನೆಯಸತ್ವ.

### ರೇಡಿಯಂ

ರೇಡಿಯಂ ರೋಗಿ ಬಳಲಿದವನು ಹಾಗೂ ಸಿಡುಕಿನವನು. ಅವನು ವ್ಯಾಕುಲದಿಂದ ಕೂಡಿದವನು, ಕುಂದಿದವನು, ಕತ್ತಲಲ್ಲಿ ಏಕಾಂಗಿಯಾಗಿರಲು ಹೆದರುವವನು. ಅವನಿಗೆ ಜನರ ಗುಂಪಿನಲ್ಲಿರಲು ಬಹಳ ಆಸೆ.

ಗುದದ್ವಾರದಲ್ಲಿ ತುರಿಕೆ. ಮಲಬದ್ಧತೆ ಹಾಗೂ ನೀರು ಭೇದಿ ಬದಲಾಯಿಸಿ ಬದಲಾಯಿಸಿ ಆಗುವುದು.

ಮೂವತ್ತನೆಯ ಆರೆತದ್ದು.

### ರಟಾನ್ಹಿಯ

ರಟಾನ್ಹಿಯ ರೋಗಿಗೆ ತಲೆ, ಮೂಗಿನಿಂದ ನೆತ್ತಿಯವರೆವಿಗೂ ಎಳೆದ ಹಾಗೆ ಸಂವೇದನೆ ಇರುವುದು.

ಪ್ರವರ್ತಿಯ ನಂತರ ಗಂಟೆಗಟ್ಟಲೆ ಗುದದ್ವಾರ ಉರಿಯುವುದು, ಗುದದ್ವಾರದ ಬಳಿ, ಹೃದಯದಲ್ಲಿ ಒಮ್ಮಿಂದೊಮ್ಮೆ ಚಾಕು ಹಾಕಿದಂತೆ ಭಾಸವಾಗುವುದು. ಪ್ರವರ್ತಿಯಲ್ಲಿ ಮಲವನ್ನು ಬಹು ಪ್ರಯತ್ನದಿಂದ ಬಲಾತ್ಕಾರವಾಗಿ ಹೊರಹಾಕಬೇಕು. ಮೂಲ ವ್ಯಾಧಿ ಹೊರ ಹಾಯ್ದಿರುವುದು. ಗುದದ ಬಳಿ ಸಂಕುಚಿತಗೊಂಡು ಅತಿ ಬಿರಿತಿರುವುದು. ಬೆಂಕಿಯಂತೆ ಉರಿಯುವುದು. ತಣ್ಣೀರಿನಿಂದ ತೊಳೆಯುವುದರಿಂದ ತಾತ್ಕಾಲಿಕ ಉಪಶಮನ. ಗುದದ ಕಡಿತ.

ಆರನೆ ಸತ್ವದ್ದು

### ಸಬೀನ

ಸಬೀನ ರೋಗಿ ಸಂಗೀತ ಸಹಿಸಲಾರ. ಅದು ಅವನಿಗೆ ಹೆದರಿಕೆಯನ್ನುಂಟುಮಾಡುವುದು.

ಅಲ್ಪ ಚಲನೆಯಿಂದ, ಕಾವಿನಿಂದ, ಬೆಚ್ಚನೆಯ ಗಾಳಿಯಿಂದ, ಉಲ್ಬಣ. ತಂಪಾದ ಹೊಸ ಗಾಳಿಯಲ್ಲಿ ಉತ್ತಮ.

ಅಚ್ಚ ಕೆಂಪು ರಕ್ತಸ್ರಾವದಿಂದ ಕೂಡಿದ ಮೂಲವ್ಯಾಧಿ. ಬೆನ್ನಿನಿಂದ ಬದಿಯವರೆಗೆ ನೋವು. ಮಲಬದ್ಧತೆ.

ಮೂವತ್ತನೆಯ ಸತ್ವ.

### ಸ್ಕೊಲಫ್ಯೊಲೇರಿಯ ನೋಡೋಸ

ಸ್ಕೊಲಫ್ಯೊಲೇರಿಯ ರೋಗಿಗೆ ಬಲ ಪಾರ್ಶ್ವದಲ್ಲಿ ಮಲಗುವುದರಿಂದ ಉಲ್ಬಣ.

ನೋಯುವ ರಕ್ತಸ್ರಾವದ, ಹೊರ ಹಾಯ್ದ ಮೂಲವ್ಯಾಧಿ, ಗುದದ್ವಾರದ (Sigmoid flexare) ಅರ್ಧ ಚಂದ್ರಾಕಾರದ ತಿರುವಿನಲ್ಲಿ ನೋವು.

ಒಂದನೇ ಸತ್ವ.

### ಸೆಡಮ್ ಏಕರ್

ಸೆಡಮ್ ರೋಗಿಯ ಮೂಲವ್ಯಾಧಿಯು ಗುರುದ್ವಾರದ ಬಿರಿತದ ನೋವಿನೊಂದಿಗೆ ಇರುತ್ತದೆ. ಸಂಕುಚಿತಗೊಂಡಾಗಿನ ನೋವು ಇರುತ್ತದೆ. ಪ್ರವರ್ತಿಯ ನಂತರ ಎರಡು ಗಂಟೆಯ ಮೇಲೆ ನೋವು.

ಆರನೆಯ ಸತ್ವ.

### ಸೆಪಿಯ

ಸೆಪಿಯ ರೋಗಿ ತನ್ನ ಕೆಲಸ ಹಾಗೂ ಕುಟುಂಬದ ಬಗ್ಗೆ ತಾತ್ಸಾರ ಹೊಂದಿದವನು. ಮುಂಗೋಪಿ, ಸುಲಭವಾಗಿ ಕೋಪಗೊಳ್ಳುವವನು. ಅತಿವ್ಯಾಕುಲ. ರೋಗಚಿಹ್ನಗಳನ್ನು ತಿಳಿಸುವಾಗ ರೋದಿಸುವವನು. ಕೃಪಣ.

ಮೂಲವ್ಯಾಧಿ ಹೊರ ಹಾಗೂ ನೋವಿನಿಂದ ಕೂಡಿರುವುದು. ಪ್ರವರ್ತಿ ಕಾಲದಲ್ಲಿ, ಓಡಾಡುವಾಗ, ರಕ್ತ ಸ್ರಾವವಾಗುವುದು. ಗುದ ಸದಾ ತುಂಬಿದಂತಿರುವುದು. ಗುದದಲ್ಲಿ ಒಂದು ಚೆಂಡು ಇಟ್ಟಹಾಗೆ ಭಾಸವಾಗುವುದು. ಮಲಬದ್ಧತೆ, ಮಲವು

ಗಾತ್ರದಲ್ಲಿ ದೊಡ್ಡದು. ವೇದನೆ ಹಾಗೂ ರಭಸದ ನೋವು ಮೇಲಕ್ಕೇರುವಂತಿರುವುದ ರಿಂದಾಗಿ ತಿಣುಕಲಾರ.

ಇನ್ನೂರನೆಯ ಸತ್ವದ್ದು.

### ಸೆಪರ್ವಿನಮ್ ಟೆಕ್ರೋರಮ್

ತದ್ದು, ಮೂಲವ್ಯಾಧಿ.

ಎರಡನೆ ಸತ್ವದ್ದು.

### ಸಲ್ಫರ್

ಸಲ್ಫರ್ ರೋಗಿ ಅತಿ ಮರೆವಿನವನು. ಯೋಚಿಸುವುದು ಕಷ್ಟ. ಹಳೆ ಚಿಂದಿಗಳು ಸುಂದರವಾಗಿ ಕಾಣುವವು. ಐಶ್ವರ್ಯವಂತನೆಂದು ಭಾವಿಸುವನು. ಬಹಳ ಸ್ವಾರ್ಥಿ. ಇತರರಿಗೆ ಮರ್ಯಾದೆ ಕೊಡಲಾರ. ವ್ಯವಹಾರದಲ್ಲಿ ತಾತ್ಸಾರ. ಕೆಲಸದಲ್ಲಿ ತೊಡಗಲು ಜಡಪ್ರವೃತ್ತಿಯವನು.

ದ್ರವಿಸುವ, ಕಡಿಯುವ ಮೂಲವ್ಯಾಧಿ. ಗುದದಲ್ಲಿ ತುರಿಕೆ ಹಾಗೂ ಉರಿತ. ಹೊಟ್ಟೆಯಲ್ಲಿ ರಕ್ತಾತಿರೇಕದಿಂದ ಮೂಲವ್ಯಾಧಿ. ಗಟ್ಟಿಯಾದ, ಗಂಟುಗಂಟಾದ ಅಲ್ಪಪ್ರಮಾಣದ ಮಲ. ಗುದದ್ವಾರವು ಕೆಂಪಾಗಿರುವುದು. ನೋವಿಗೆ ಹೆದರಿ ಮಲವಿಸರ್ಜನೆಮಾಡದಿರುವುದು.

ಇನ್ನೂರನೆಯ ಸತ್ವದ್ದು. ಗುಣವನ್ನು ಪೂರ್ಣೀಕರಿಸಲು ಇದು ನಕ್ಸ್‌ನ್ನು ಹಿಂಬಾಲಿಸುವುದು.

### ವರ್ಬ್ ಸಶಮ್ಸ್

ಅಂಗಗಳು-ಇಕ್ಕಳದಿಂದ ತಿರುಚಿಕೊಂಡ ಹಾಗೆ ಭಾಸವಾಗುವುದು. ಅಡ್ಡಿ ಮಾಡಲ್ಪಟ್ಟು ಮಲದಿಂದ ಕೂಡಿದ ಮೂಲವ್ಯಾಧಿ, ಬಾತುಕೊಂಡ, ನೋವಿನ ಮೂಲ ವ್ಯಾಧಿ,

ಮೂರನೆಸತ್ವ.

### ವಿಶೇಷ ಸೂಚನೆಗಳು

ಒಳ್ಳೆ ನಂಬಿಕಾರ್ಹವಾದ ಹೋಮಿಯೋಪತಿ ಔಷಧ ಉಪಯೋಗಿಸಿ. ರೋಗಿಯು ಮದ್ಯಸೇವನೆ ಕಾಫಿ, ಟೀ, ಮಸಾಲೆ ಹೆಚ್ಚು ಹಾಕಿ ತಯಾರಿಸಿದ ಪದಾರ್ಥಗಳು, ಅತಿ ಲೈಂಗಿಕ ಭೋಗ, ವಿರೇಚಕಗಳನ್ನು ಬಿಡಬೇಕು; ಅತಿ ಹೆಚ್ಚು ವ್ಯಾಯಾಮ ಬಿಡಬೇಕು. ಭಾರ ಎತ್ತಬಾರದು. ಮೆತ್ತನೆಯ ಹಾಸಿಗೆಯ ಮೇಲೆ ಮಲಗಬಾರದು: ಬ್ರೆಡ್ಡು ತರಕಾರಿಗಳು, ಮಾಗಿದ ಹಣ್ಣುಗಳು, ಮಾವಿನ ಹಣ್ಣು, ಸೇಬು, ಪೀಚಸ್ ಮುಂತಾದವು ಒಳ್ಳೆಯವು. ಹೊಸ ಮೂಲಂಗಿ ಮೊಸರಿನೊಂದಿಗೆ ಸೇವಿಸಬೇಕು.

*Printed & Published by S.K. KATOTE on behalf of Loka Shikshana Trust at Samyukta Karnataka Press, Koppikar Road, Hubli-580 020 (Ph: 364303)*

*Managing Editor:* **K. SHAMARAO** *Editor:* **N.V. JOSHI**

**RNI. Regd No. 3633/57**

